# ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಮಹಿಳಾ ಚಿತ್ರಣ

## (ಆಯ್ದ ಕಥಾ ಸಂಕಲನಗಳನ್ನು ಅನುಲಕ್ಷಿಸಿ)

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ



ಸಂಶೋಧಕರು

**ಹಿತೇಶ್ವರ ಜಿ.ಹೆಚ್.**

ಮಾರ್ಗದರ್ಶಕರು

**ಡಾ. ಎಂ. ಮಲ್ಲಿಕಾರ್ಜುನಗೌಡ**

ಸಹಾಯಕ ಪ್ರಾಧ್ಯಾಪಕರು



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ-೫೮೩ ೨೭೬

೨೦೧೫

# ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಮಹಿಳಾ ಚಿತ್ರಣ

## (ಆಯ್ದ ಕಥಾ ಸಂಕಲನಗಳನ್ನು ಅನುಲಕ್ಷಿಸಿ)

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸಿದ ಮಹಾಪ್ರಬಂಧ



ಸಂಶೋಧಕರು
**ಹಿತೇಶ್ವರ ಜಿ.ಹೆಚ್.**

ಮಾರ್ಗದರ್ಶಕರು
**ಡಾ. ಎಂ. ಮಲ್ಲಿಕಾರ್ಜುನಗೌಡ**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೨೦೧೫

# ಸಂಶೋಧಕರ ಘೋಷಣಾ ಪತ್ರ

**ಹಿತೇಶ್ವರ ಜಿ.ಹೆಚ್.** ಆದ ನಾನು **ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಮಹಿಳಾ ಚಿತ್ರಣ (ಆಯ್ದ ಕಥಾ ಸಂಕಲನಗಳನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಎಂ. ಮಲ್ಲಿಕಾರ್ಜುನಗೌಡ, ಸಹಾಯಕ ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಉದ್ದೇಶ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

**ದಿನಾಂಕ :** 26/8/2015
**ಸ್ಥಳ :** ವಿದ್ಯಾರಣ್ಯ

**(ಹಿತೇಶ್ವರ ಜಿ.ಹೆಚ್.)**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಮಾರ್ಗದರ್ಶಕರ ದೃಢೀಕರಣ ಪತ್ರ

**ಹಿತೇಶ್ವರ ಜಿ.ಹೆಚ್.** ಅವರು **"ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಮಹಿಳಾ ಚಿತ್ರಣ"** (ಆಯ್ದ ಕಥಾ ಸಂಕಲನಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಪ್ರಸ್ತುತ ಮಹಾಪ್ರಬಂಧವನ್ನು ಸಲ್ಲಿಸುತ್ತಿದ್ದಾರೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

**(ಡಾ. ಮಲ್ಲಿಕಾರ್ಜುನಗೌಡ)**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 26|8|2015
ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವೈಧಾನಿಕತೆ

### ೧.೧ ಪ್ರಸ್ತಾವನೆ:

ಕನ್ನಡ ಸಾಹಿತ್ಯ ಚರಿತ್ರೆಯು ಒಂದು ಸಾವಿರದ ಐದುನೂರು ವರ್ಷದ ಇತಿಹಾಸವನ್ನು ಹೊಂದಿದೆ. ಆಯಾ ಕಾಲಕ್ಕೆ ತಕ್ಕಂತೆ ವಸ್ತು ಆಶಯ, ಧೋರಣೆ, ಭಾಷೆ, ದೃಷ್ಟಿಕೋನ ಮತ್ತು ಅಭಿವ್ಯಕ್ತಿ ಎಲ್ಲವೂ ಬದಲಾಗುತ್ತಾ ಸಾಗಿರುವುದನ್ನು ಸಾಹಿತ್ಯ ಪರಂಪರೆಯಲ್ಲಿ ಕಾಣಬಹುದುದಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದಾಗ ಅದು ಬೆಳೆದು ಬಂದಿರುವ ಅನೇಕ ಘಟ್ಟಗಳನ್ನು ನಾವು ನೋಡಬಹುದಾಗಿದೆ. ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ ಎಂಬ ವೈವಿಧ್ಯಮಯವಾದ ಸಾಹಿತ್ಯ ಪಂಥಗಳಲ್ಲಿ ಸಾಗಿರುವ ಆಧುನಿಕ ಕನ್ನಡ ಸಾಹಿತ್ಯ ಕಾವ್ಯ, ನಾಟಕ, ಕಥೆ, ಕಾದಂಬರಿ, ಪ್ರಬಂಧದಂತಹ ಅನೇಕ ಪ್ರಕಾರಗಳಲ್ಲಿ ಬಂದಿರುವುದನ್ನು ಕಾಣಬಹುದಾಗಿದೆ.

ಹೊಸಗನ್ನಡ ಸಾಹಿತ್ಯ ಪ್ರಕಾರಗಳಲ್ಲೊಂದಾದ ಸಣ್ಣ ಕಥೆ ಇಂದು ಅತ್ಯಂತ ಜನಪ್ರಿಯವಾದ ಸಾಹಿತ್ಯವಾಗಿ ಬೆಳೆಯುತ್ತಿದೆ. ಕಾರಣ ಸಮೂಹ ಮಾಧ್ಯಮಗಳಾದ ದಿನ ಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆ, ಆಕಾಶವಾಣಿ ಕೇಂದ್ರಗಳು ಕಥಾ ಸಾಹಿತ್ಯವನ್ನು ಬೆಳೆಸುವಲ್ಲಿ ಯಶಸ್ವಿಯಾಗಿವೆ. ಪ್ರಾಚೀನ ಕಾಲದಲ್ಲಿ ಸಾಹಿತ್ಯ ನಿರ್ಮಾಣಕ್ಕೆ ಪ್ರತಿಭಾವಂತರ ಬೆನ್ನಿಗೆ ಧರ್ಮ ಮತ್ತು ರಾಜಕೀಯ ಎರಡೂ ಇರಬೇಕಿತ್ತು. ಆದರೆ ಈಗಿನ ಕಾಲದಲ್ಲಿ ಅವೆರಡರ ಅವಶ್ಯಕತೆಗಳಿಲ್ಲ. ಲೇಖಕರ ಬೆನ್ನ ಹಿಂದೆ ಈಗ ಸಮೂಹ ಮಾಧ್ಯಮಗಳಿವೆ. ನಮ್ಮ ಕನ್ನಡ ಕಥಾ ಸಾಹಿತ್ಯ ಆರಂಭವಾಗಿರುವುದು ಕೂಡ ಪತ್ರಿಕೆಗಳಲ್ಲಿ ಪ್ರಕಟಗೊಳ್ಳುವುದರ ಮೂಲಕವೇ ಎಂಬುದು ಗಮನಾರ್ಹವಾದುದಾಗಿದೆ.

ಕಥಾ ಸಾಹಿತ್ಯವೂ ಆಯಾ ಘಟ್ಟದಲ್ಲಿ ಭಿನ್ನ ಭಿನ್ನ ರೂಪಗಳನ್ನು ಪಡೆಯುತ್ತಾ ತನ್ನದೇ ಆದ ವೈಶಿಷ್ಟ್ಯ ಹೊಂದಿ ವಿವಿಧ ಮುಖಗಳನ್ನು ಕನ್ನಡ ಸಾಹಿತ್ಯಕ್ಕೆ ಪರಿಚಯಿಸುತ್ತಾ ಸಾಗಿರುವುದನ್ನು ನೋಡಬಹುದು.

ನವೋದಯ ಘಟ್ಟದಲ್ಲಿ ಪಂಜೆ ಮಂಗೇಶರಾಯರಿಂದ ಸಣ್ಣ ಕಥಾ ಸಾಹಿತ್ಯ ಆರಂಭವಾಗಿ, ಮಾಸ್ತಿಯವರಿಂದ ಕನ್ನಡ ಸಾಹಿತ್ಯ ಪರಂಪರೆ ಗಟ್ಟಿಯಾದ ಬುನಾದಿ ಕಂಡು ಮುಂದುವರಿಕೆಗೆ ಕಾರಣವಾದರೆ, ಪ್ರಗತಿಶೀಲರು ಮಾಸ್ತಿಯವರ ವಿರುದ್ಧ ಸಾಮಾಜಿಕ ಪ್ರಜ್ಞೆ ಹೊಂದಿದ ಜನಪದ ಕಾಳಜಿಯನ್ನಿಟ್ಟುಕೊಂಡು ಕಥೆಗಳನ್ನು ರಚಿಸಿದರು. ಇವೆಲ್ಲಕ್ಕಿಂತ ಭಿನ್ನವಾದ ವಿಚಾರ, ಭಿನ್ನವಾದ ಅಭಿವ್ಯಕ್ತಿಯ ಶೈಲಿ ಹೊಸದನ್ನು ನಿರ್ಮಿಸುವ ಹಂಬಲ ನವ್ಯ ಸಣ್ಣ ಕಥಾ ಸಾಹಿತ್ಯಾದಲ್ಲಿ ಕಾಣಿಸಿಕೊಂಡಿತು.

ಆದರೆ ನವ್ಯ ಸಾಹಿತ್ಯದ ಕ್ಲಿಷ್ಟ ಭಾಷೆ, ಸಂಕೇತಗಳ ಬಳಕೆಯಿಂದ ಆತ್ಮಶೋಧನೆ ನಡೆಸಿ ಜನ ಸಾಮಾನ್ಯರ ಪಾಲಿಗೆ ನಿಲುಕದಾಯಿತು. ಆಗ ಹೊಸಮಾರ್ಗ ಕಂಡುಕೊಂಡಿತು. ಅದೇ ದಲಿತ-ಬಂಡಾಯ ಸಾಹಿತ್ಯ. ಎಪ್ಪತ್ತರ ದಶಕದಲ್ಲಿ ಸಂಭವಿಸಿದ ಸಾಮಾಜಿಕ, ರಾಜಕೀಯ, ಆರ್ಥಿಕ ಚಳುವಳಿಗಳು, ದಲಿತ, ಅಸ್ಪೃಶ್ಯರು, ಹಿಂದುಳಿದ ವಿವಿಧ ವರ್ಗಗಳಲ್ಲಿ ಮಾಡಿದ ಎಚ್ಚರದ ಪರಿಣಾಮವಾಗಿ ದಲಿತ-ಬಂಡಾಯ ಪಂಥದ ಹುಟ್ಟಿಗೆ ಕಾರಣವಾಯಿತು. ಸಮಾಜದಲ್ಲಿನ ವರ್ಣಬೇಧ, ಜಮೀನ್ದಾರಿ ಪದ್ಧತಿ, ಬಂಡವಾಳಶಾಹಿಗಳ ದಬ್ಬಾಳಿಕೆ, ಮಹಿಳಾ ಶೋಷಣೆ, ಅರ್ಥರಹಿತ ಮೂಢ ನಂಬಿಕೆಗಳ ಆಚರಣೆ ಮುಂತಾದವುಗಳ ವಿರುದ್ಧ ಎಲ್ಲೆಡೆ ಪ್ರತಿಭಟನೆ ಕಾಣಿಸತೊಡಗಿತು.

ಬಂಡಾಯ ಸಾಹಿತ್ಯ ಮೊದಲಿಗೆ ಮೊಳಕೆಯೊಡೆದದ್ದು, ಸಣ್ಣಕಥೆಯ ಒಡಲಿನಿಂದಲೇ ಎನ್ನಬಹುದು. ಈ ಪಂಥದ ಧೋರಣೆಗಳನ್ನೊಳಗೊಂಡ ಕಥೆಗಳನ್ನು ಬೆಸಗರಹಳ್ಳಿ, ತೇಜಸ್ವಿ ದೇವನೂರು, ಬರಗೂರು, ಲಂಕೇಶ, ಶಾಂತರಸ, ಸುಧಾಕರ ಮೊದಲಾದವರ ಕಥೆಗಳು ಅಭಿವ್ಯಕ್ತಿಸುತ್ತವೆ.

ನಾವು ನೇರವಾಗಿ ಹೈದರಾಬಾದ್ ಕರ್ನಾಟಕಕ್ಕೆ ಬಂದಾಗ ಮಾಸ್ತಿ ಪರಂಪರೆ ಮೀರಿ ಕಥಾ ಸಾಹಿತ್ಯ ಪ್ರಗತಿಶೀಲ ಪರಂಪರೆಯ ತಿರುವಿನಲ್ಲಿದ್ದಾಗ ಇಲ್ಲಿ ಈ ನೆಲದಲ್ಲಿ ಕಥೆಗಳ ಬೀಜ ಮೊಳಕೆ ಒಡೆಯಲು ಪ್ರಾರಂಭಿಸಿತು. ನವೋದಯ ಕಾಲಘಟ್ಟದಲ್ಲಿ ಈ ಭಾಗವು ಕಥಾ ಸಾಹಿತ್ಯದಿಂದ ವಂಚಿತವಾದರೂ ಪಿ.ಬಿ. ದೇಸಾಯಿ, ಶಾಂತರಸ, ಎ.ಬಿ.ಮುತ್ತಾಳ, ಜಯತೀರ್ಥ ರಾಜಪುರೋಹಿತ, ಸಿದ್ದಯ್ಯ ಪುರಾಣಿಕ ಮುಂತಾದವರು ಕಥಾ ಸಾಹಿತ್ಯವನ್ನು ಮುಂದುವರೆಸಿಕೊಂಡು ಬಂದರು. ನಂತರದಲ್ಲಿ ಶ್ರೀ ಸಗರಕೃಷ್ಣಾಚಾರ್ಯರು, ರಾಜಶೇಖರ ನೀರಮಾನ್ವಿ, ಗೀತಾ ನಾಗಭೂಷಣ, ಬಿ.ಟಿ.ಲಲಿತಾ ನಾಯಕ, ಸರಿತಾ ಕುಸುಮಾಕರ ದೇಸಾಯಿ, ಬಾಲಚಂದ ಜಯಶೆಟ್ಟಿ, ಚೆನ್ನಣ್ಣ ವಾಲೀಕರ, ಜಿ.ಬಿ.ವೀಸಾಜಿ, ಅಮರೇಶ ನುಗಡೋಣಿ, ಮಲ್ಲಿಕಾರ್ಜುನ ಹಿರೇಮಠ, ಲಕ್ಷ್ಮಿದೇವಿಶಾಸ್ತ್ರಿ, ಚಿತ್ರಶೇಖರ ಕಂಠಿ, ಚಿದಾನಂದ ಸಾಲಿ, ದೇವೇಂದ್ರ ಕುಮಾರ ಹಕಾರಿ, ಗುರುನಾಥ ಅಕ್ಕಣ್ಣಿ,

ಕಲಿಗಣನಾಥ ಗುಡದೂರು, ಕೊರಗಲ್ ವಿರೂಪಾಕ್ಷಪ್ಪ, ನೀಲಾ ಕೆ, ಪ್ರಭು ಖಾನಪುರೆ, ಸಂಧ್ಯಾ ಹೊನಗುಂಟಿಕರ್, ಶಿವಕುಮಾರ ನಾಗವರ್ ಇನ್ನೂ ಮೊದಲಾದ ಕಥೆಗಾರರು ಇಲ್ಲಿಯ ಕಥಾ ಸಾಹಿತ್ಯವನ್ನು ಬೃಹದಾಕಾರವಾಗಿ ಬೆಳೆಸಿದ್ದಾರೆ. ಅಧ್ಯನಯನದ ಅನುಕೂಲಕ್ಕಾಗಿ ಆಯ್ದ ಕಥಾ ಸಂಕಲನಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಮಹಿಳಾ ಚಿತ್ರಣದ ವಿಷಯವನ್ನು ಸಂಶೋಧನಕ್ಕೆ ಆಯ್ದುಕೊಳ್ಳುವಲ್ಲಿ ಮಹಿಳಾ ಬದುಕನ್ನು ಒಟ್ಟಂದದಲ್ಲಿ ಅರಿಯಬೇಕೆಂಬ ಕುತೂಹಲ ಮೊದಲನೆಯದು. ಈ ಹೊತ್ತಿನಲ್ಲಿ ಮಹಿಳಾ ಅನನ್ಯತೆಯನ್ನು ಕಟ್ಟಿಕೊಳ್ಳಬೇಕೆನ್ನುವ ಅರಿವು ಮೂಡಿರುವುದರಿಂದ ಶತಮಾನಗಳಿಂದ ಚರಿತ್ರೆಯುದ್ದಕ್ಕೂ ನಿರ್ಲಕ್ಷಕ್ಕೆ ಒಳಗಾಗಿದ್ದ ಮಹಿಳೆಯನ್ನು ಕುರಿತು ವಿವಿಧ ನೆಲೆಯಲ್ಲಿ ಅಧ್ಯಯನಗಳು ನಡೆಯುತ್ತಿವೆ. ಇದು ಈ ಹೊತ್ತಿನ ಜರೂರು ಕೂಡ ಆಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ಬಹುತೇಕ ನಾಯಕ ಪ್ರಧಾನವಾದ ಕಥೆಗಳಲ್ಲಿ ಮಂಡಿತವಾದ ಮಹಿಳಾ ಬದುಕಿನ ಕುರಿತ ಲೋಕದೃಷ್ಟಿಕೋನವನ್ನು ಪ್ರಶ್ನಿಸುತ್ತಾ ವಿಶ್ಲೇಷಿಸುವತ್ತ ಅಧ್ಯಯನವು ಸಾಗುತ್ತದೆ. ಹೀಗೆ ರೂಪಿಸಿಕೊಳ್ಳಲಾದ ಅಧ್ಯಯನವು ಕೆಲವು ಮಹತ್ವದ ಉದ್ದೇಶಗಳನ್ನು ಹೊಂದಿದೆ.

**೧.೨ ಅಧ್ಯಯನದ ಉದ್ದೇಶ :**

ಹೈದರಾಬಾದ್ ಕರ್ನಾಟಕದ ಪ್ರದೇಶ ಮತ್ತು ಅಲ್ಲಿನ ಕಥಾಸಾಹಿತ್ಯ ಹಾಗೂ ಈ ಪ್ರದೇಶದ ಮಹಿಳಾ ಬದುಕು ಇವೆಲ್ಲವೂ ಈ ಹೊತ್ತಿನ ಚಲನಶೀಲ ಅಧ್ಯಯನದ ವಿಷಯಗಳಾಗಿವೆ. ಈ ಹಿನ್ನೆಲೆಯಲ್ಲಿ 'ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಮಹಿಳಾ ಚಿತ್ರಣ' ಎಂಬ ವಿಷಯದ ಮೇಲೆ ಅಧ್ಯಯನ ಕೈಗೊಳ್ಳಲಾಗಿದೆ.

೧. ಹೈದರಾಬಾದ್ ಕರ್ನಾಟಕ ಪ್ರದೇಶವು ಬಹು ವಿಶಿಷ್ಟವಾದ ಪರಂಪರೆ ಹಾಗೂ ಸಂವೇದನೆಗಳನ್ನು ಹೊಂದಿದೆ. ಭೌಗೋಳಿಕವಾಗಿ, ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ತನ್ನದೇ ಆದ ಮಹತ್ವ ಹೊಂದಿದೆ. ಈ ಪ್ರದೇಶ ಬೀದರ, ಕಲಬುರ್ಗಿ, ಯಾದಗಿರಿ, ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳನ್ನೊಳಗೊಂಡ ಪ್ರಾಂತ್ಯವಾಗಿದೆ. ಇಲ್ಲಿಯ ಕಥಾ ಸಾಹಿತ್ಯವು ಈ ಭಾಗದ ಒಂದು ವಿಶೇಷ ಮಾದರಿಯಾಗಿದೆ. ಭಿನ್ನವಾದ ಹೊಸ ಅಭಿವ್ಯಕ್ತಿ ಕ್ರಮ ಇಲ್ಲಿ ಬೆಳೆದು ಬಂದಿದೆ. ಈ ಹಿನ್ನೆಲೆಯಲ್ಲಿ ಕಥಾ ಸಾಹಿತ್ಯವನ್ನು ಆಕರವನ್ನಾಗಿಸಿಕೊಂಡು ಒಂದು ಮಹಿಳಾವಾದಿ ದೃಷ್ಟಿಕೋನದ ಮೂಲಕ ಗ್ರಹಿಸುವ ಉದ್ದೇಶ ಮುಖ್ಯವಾಗಿದೆ.

೨. ಈ ಪ್ರದೇಶದ ಕಥೆಗಾರರು ತಮ್ಮದೇ ಆದ ಸ್ಥಾನ ಕಂಡುಕೊಂಡು ಕನ್ನಡ ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಮೂಲ್ಯವಾದದ್ದು. ಇವರ ಕಥಾ ಸೃಷ್ಟಿಗೆ ತಮ್ಮ ಪರಿಸರದ ಜೀವನದ

ಅನುಭವಗಳು ಹೇಗೆ ಪ್ರಭಾವ ಬೀರಿವೆ. ಇಲ್ಲಿಯ ಆರ್ಥಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ವ್ಯವಸ್ಥೆಯು ವಿಶಿಷ್ಟವಾಗಿದ್ದು, ಇದು ಪುರುಷ ಪ್ರಧಾನವಾಗಿರುತ್ತವೆ. ಇಂದಿಗೂ ಸ್ವಲ್ಪವೂ ಅಲುಗದ ಸ್ಥಿತಿಯಲ್ಲಿದೆ. ಇದರೊಂದಿಗೆ ಅನಕ್ಷರತೆ, ಮೂಡನಂಬಿಕೆ ಬಡತನ ಹಾಗೂ ಶ್ರೇಣೀಕರಣಗಳು ಸೇರಿಕೊಂಡು ಇನ್ನೂ ಭಯಂಕರವಾಗಿ ಗಟ್ಟಿಗೊಳ್ಳುತ್ತಿವೆ. ಈ ಹಿನ್ನೆಲೆಯಲ್ಲಿ ಪರಿಸರದಿಂದ ಪ್ರಭಾವಿತಗೊಂಡ ಕಥೆಗಳು ಬದುಕಿನ ಅನುಭವದ ತೆಕ್ಕೆಗೆ ಸಿಕ್ಕು ಹತ್ತು ಹಲವು ಮಗ್ಗುಲಗಳ ಚಿತ್ರಣಗಳನ್ನು ಕಟ್ಟಿಕೊಡುವ ಕ್ರಮ ಮತ್ತು ರೀತಿ ವಿಶಿಷ್ಟ ಬಗೆಯದು. ಹೀಗಿರುವ ಕಥನ ಕ್ರಮವನ್ನು ಅರ್ಥೈಸುವ ಉದ್ದೇಶ ಹೊಂದಿದೆ.

೩. ಹೈದರಾಬಾದ್ ಕರ್ನಾಟಕ ಪ್ರದೇಶದ ಕಥಾ ಸಾಹಿತ್ಯ ಹಾಗೂ ಮಹಿಳಾ ಸಂವೇದನೆಗೆ ಸಂಬಂಧಿಸಿದ ಕೃತಿಗಳು ನಿರೂಪಿಸಿದ ಕೇಂದ್ರಿತ ಅಂಶವನ್ನು ಸಮೀಕ್ಷೆಯ ಹಿನ್ನೆಲೆಯಲ್ಲಿ ವಿಶ್ಲೇಷಣಾತ್ಮಕವಾಗಿ ಚರ್ಚಿಸಲಾಗಿದೆ. ಪ್ರಧಾನವಾಗಿ ಗಮನಿಸಲಾದ ಕಥಾಸಾಹಿತ್ಯ ಮಾತ್ರವೇ ಅಲ್ಲದೇ ಈ ಅಧ್ಯಯನಕ್ಕೆ ಪೂರಕವಾದ ಸಾಹಿತ್ಯ ಕೃತಿಗಳನ್ನು ಬಲಸಿಕೊಳ್ಳುವುದು ಜೊತೆಗೆ ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ತುಳಿತಕ್ಕೊಳಗಾದ ಮಹಿಳೆಯನ್ನು ಪುರುಷ ಮತ್ತು ಮಹಿಳೆಯರು ಸೇರಿ ಹೊಡೆದೋಡಿಸುವುದೇ ಮಹಿಳಾ-ವಾದ ಎಂಬುದಾಗಿ, ಮಹಿಳಾ ಪರವಾದ ಕಾಳಜಿ, ಕಳಕಳಿ, ನೋವು, ನಲಿವುಗಳಿಗೆ ಸ್ಪಂದಿಸುವುದೇ ಮಹಿಳಾ ಸಂವೇದನೆಯಾಗಿದೆ. ಈ ಹಿನ್ನಲೆಯಲ್ಲಿ ಪ್ರಸ್ತುತ ಮಹಾಪ್ರಬಂಧದ ವಿಷಯದ ಪರಿಕಲ್ಪನೆಯನ್ನು ಬೇರೆ ಬೇರೆ ಜ್ಞಾನ ಶಾಖೆಗಳು ಹೇಗೆ ಅರ್ಥೈಸಿವೆ ಎಂಬುದನ್ನು ಸ್ಪಷ್ಟಪಡಿಸಿಕೊಂಡು ಅದಕ್ಕೆ ಅನುಗುಣವಾಗಿ ಅಧ್ಯಯನ ಸಿದ್ಧಪಡಿಸುವುದು ಈ ಅಧ್ಯಯನ ಉದ್ದೇಶವಾಗಿದೆ.

೪. ಗ್ರಾಮೀಣ ಪ್ರದೇಶದ ಜನ ಜೀವನವು ಹಲವು ಸ್ಥಿತ್ಯಂತರಗಳಿಂದ ಕೂಡಿದೆ. ಈ ಹಿನ್ನೆಲೆಯಲ್ಲಿ ಗ್ರಾಮೀಣ ಪರಿಸರದ ದಟ್ಟ ಚಿತ್ರಣ ಒಳಗೊಂಡ ಬಗೆ ಹಾಗೂ ಸಮಾಜದ ಮಧ್ಯಮ ವರ್ಗದವರ ಬದುಕು ಕೆಳವರ್ಗದವರಿಗಿಂತ ಭಿನ್ನತೆಯಿಂದ ಕೂಡಿದೆ. ಈ ಹಿನ್ನಲೆಯಲ್ಲಿ ಸಾಂಸ್ಕೃತಿಕ ನಿರ್ಧಿಷ್ಟತೆಯನ್ನು ಅವಲೋಕಿಸಿ, ಕಥಾಸಾಹಿತ್ಯ ಕಟ್ಟಿಕೊಟ್ಟ ನೆಲೆಗಳನ್ನು ಕುರಿತು ವಿಶ್ಲೇಷಣೆಗೆ ಒಳಪಡಿಸುವ ಉದ್ದೇಶ ಹೊಂದಿದೆ.

೫. ಹೈದರಾಬಾದ್ ಕರ್ನಾಟಕದ ಕಥಾ ಸಾಹಿತ್ಯದಲ್ಲಿ ಮಹಿಳೆಯನ್ನು ಕೇಂದ್ರಿಕರಿಸಿ ಅಧ್ಯಯನ ಮಾಡುತ್ತಿರುವುದರಿಂದ ಕಥಾ ಸಾಹಿತ್ಯದಲ್ಲಿ ವಿಶಿಷ್ಟವಾದಂತಹ ಸಮಸ್ಯೆಗಳು ಇವೆಯಾ ಎಂಬುದನ್ನು ಶೋಧಿಸುವುದು. ಜಾತಿ, ಲಿಂಗ, ಸಾಮಾಜಿಕ ತಾರತಮ್ಯತೆಗಳನ್ನು ಗ್ರಹಿಸಿಕೊಂಡು ಕಥಾ ಸಾಹಿತ್ಯದಲ್ಲಿ ಮಹಿಳೆಗೆ ಸಂದಿರುವ ಸ್ಥಾನಮಾನ, ನ್ಯಾಯ ಅನ್ಯಾಯಗಳ ಜೊತೆ ಮಹಿಳೆಯ ಸ್ವರೂಪ-ವಿರೂಪಗಳನ್ನು ಚರ್ಚಿಸುವುದು. ಇಲ್ಲಿ ರಚಿತಗೊಂಡ ಕಥೆಗಳು ಮಹಿಳಾ ಬದುಕಿನ ಕುರಿತು ತಳೆದ ಧೋರಣೆಗಳು ಸಾಮಾಜಿಕ ಪ್ರಕ್ರಿಯೆಯಲ್ಲಿ ತಳೆದ ಧೋರಣೆಗಳಿಗಿಂತ ಭಿನ್ನವಾಗಿರುವುದಿಲ್ಲ.

ಈ ಹಿನ್ನೆಲೆಯಲ್ಲಿ ಮಹಿಳಾ ಬದುಕು ಹಿಂದೂಳಿದಿರಲು ಕಾರಣವಾದ ಸ್ಥಿತಿಗಳು ಯಾವ ಬಗೆಯವು ಎಂಬುದನ್ನು ಸ್ತ್ರೀ ದೃಷ್ಟಿಕೋನದಿಂದ ವಿಶ್ಲೇಷಿಸುವ ಉದ್ದೇಶ ಹೊಂದಿದೆ.

೬. ಈ ಭಾಗದ ಕಥಾಸಾಹಿತ್ಯ ಮಂಡಿಸುವ ಕುಟುಂಬ ಮತ್ತು ವಿವಾಹ ಕೇಂದ್ರಿತ ಮಹಿಳಾ ಸಮಸ್ಯೆ, ಶೋಷಣೆಯ ಚಿತ್ರಣ ಅವಳು ಕಟ್ಟಿಕೊಂಡ ಬದುಕು ಈ ಎಲ್ಲಾ ಸಂಗತಿಗಳನ್ನು ಪರಿಶೀಲಿಸುತ್ತಾ ವರ್ತಮಾನದ ಮಹಿಳಾ ಬದುಕಿನ ಸಾಮಾಜಿಕ ವಾಸ್ತವವನ್ನು ಗ್ರಹಿಸುವುದು ಮತ್ತು ತಾತ್ವಿಕವಾಗಿ ಚರ್ಚಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

೭. ಇಲ್ಲಿ ಕಾಣಿಸಿಕೊಂಡ ಮಹಿಳೆಯರು ವಿವಿಧ ವರ್ಗಗಳಿಂದ ವಿವಿಧ ಪರಿಸರದಿಂದ, ವಿವಿಧ ಸಂಸ್ಕೃತಿಗಳಿಂದ ಮೂಡಿಬಂದವರು ವೈವಿಧ್ಯಮಯ ಮಹಿಳಾ ಪಾತ್ರಗಳನ್ನು ಒಂದೇ ಕಡೆಗೆ ಬಂಧಿಸಿ ಇಲ್ಲಿಯ ಪಾತ್ರಗಳು ಕಥೆಯ ವಸ್ತುವನ್ನು ಹೇಗೆ ನಿರೂಪಿಸುತ್ತವೆ. ಕಥೆಗಾರ ಇಲ್ಲಿಯ ಮಹಿಳಾ ಬದುಕನ್ನು ಮುಗ್ಧ ಪಾತ್ರಗಳ ಮೂಲಕ ನೋಡುವ ಬಗೆ ಹೇಗೆ? ಇಲ್ಲಿಯ ಪ್ರಾದೇಶಿಕ ಭಾಷೆಯ ಮೂಲಕ ಆಪ್ತವಾಗಿ ಚಿತ್ರಿಸಿರುವ ಮಹಿಳೆಯ ಪಾತ್ರಗಳನ್ನು ಸಮಯ ಸಂದರ್ಭಕ್ಕೆ ಅನುಗುಣವಾಗಿ ತೋರಿಸಿರುವ ಬಗೆ ಹೇಗೆ ಎಂಬುದನ್ನು ಚರ್ಚಿಸುವ ಉದ್ದೇಶ ಹೊಂದಿದೆ.

೮. ಇಲ್ಲಿಯ ಕಥೆಗಾರರಿಗೆ ಹಳ್ಳಿಯ ಭಾಷೆಯೇ ಜೀವಾಳ. ಇದು ಕಥಾ ಸಾಹಿತ್ಯದಲ್ಲಿ ಪ್ರಮುಖ ಮಾಧ್ಯಮವಾಗಿ ಹೇಗೆ ಬಳಕೆಯಾಗಿದೆ. ಇಲ್ಲಿ ಹಳ್ಳಿಯ ಪಾತ್ರಗಳು ತಮ್ಮದೇ ಆದ ಕಥೆಗಳಲ್ಲಿ ಭಾಷೆ, ತಂತ್ರ-ಶೈಲಿಯಿಂದ ಹೇಗೆ ಚಲಿಸುತ್ತವೆ. ಗ್ರಾಮೀಣ ಭಾಷೆಯ ಸೊಗಡನಿಂದ, ಆಳವಾದ ಚಿಂತನೆಯಿಂದ ಕಥಾ ಹಂದರ ಹೆಣೆದು ಸಾಮಾಜಿಕ ಜ್ವಲಂತ ಸಮಸ್ಯೆಗಳನ್ನು ಅನಾವರಣಗೊಳಿಸುವ ಪರಿ ಹೇಗೆ ಚಿತ್ರಣಗೊಂಡಿದೆ ಎಂಬುದನ್ನು ಚರ್ಚಿಸುವ ಉದ್ದೇಶ ಹೊಂದಿದೆ.

೯. ಯಾವುದೇ ಸೃಜನಶೀಲ ಬರಹವನ್ನು ಅಧ್ಯಯನಕ್ಕೆ ಅಳವಡಿಸಿಕೊಂಡಾಗ ವೈಯಕ್ತಿಕ ನೆಲೆಯಲ್ಲಿ ನಿಂತು ವ್ಯಕ್ತಿನಿಷ್ಠತೆಯಿಂದ ನೋಡದೇ, ಆಯಾ ಬರಹಗಾರರ ಲೋಕಾನುಭವದ ಚಿಂತನೆಯ ಹರವು, ಭಾಷಾ ಪ್ರೌಢಿಮೆ, ತಂತ್ರದ ಹೊಸತನ, ಶೈಲಿಯ ವೈಶಿಷ್ಟ್ಯತೆ ಅವರ ಬರಹದ ಸ್ತರವನ್ನು ಗುರುತಿಸಬೇಕಾಗುತ್ತದೆ. ಇಲ್ಲಿಯ ಕಥಾಗಾರರು ಕನ್ನಡದ ಶಿಷ್ಟ ಸಾಹಿತ್ಯದಿಂದ ತಿರಸ್ಕೃತವಾದ ಜಾನಪದಿಯ ಅಪ್ಪಟ ದೇಶೀಯ ಕನ್ನಡವನ್ನು ತಮ್ಮ ಬದುಕಿನ ಅನುಭವಗಳ ಮುಖಾಂತರ ತಮ್ಮ ಕಥೆಗಳಲ್ಲಿ ಹೇಗೆ ದಾಖಲಿಸಿದ್ದಾರೆ. ಇಲ್ಲಿಯ ಕಥೆಗಾರರು ಅಳವಡಿಸಿಕೊಂಡ ತಂತ್ರ ಯಾವ ಬಗೆಯದು, ತಂತ್ರದ ಜೊತೆಗೆ ಶೈಲಿಯೂ ಕೂಡ ಕಥೆಯ ರಚನೆಯಲ್ಲಿ ಹೇಗೆ ಪ್ರಮುಖ ಪಾತ್ರವಹಿಸಿದೆ ಎಂಬುದನ್ನು ಚರ್ಚಿಸುವ ಉದ್ದೇಶ ಹೊಂದಿರುತ್ತದೆ. ಈ ಹಿನ್ನಲೆಯಲ್ಲಿ ಒಳಗೊಂಡ ಉದ್ದೇಶಗಳನ್ನು ಏಳು ಅಧ್ಯಾಯನಗಳ ಮೂಲಕ ಮಂಡಿಸಲಾಗಿದೆ.

ಈ ಮೇಲಿನ ಕೆಲವು ಉದ್ದೇಶಗಳನ್ನು ಹೊಂದಿರುವ ಅಧ್ಯಯನಕ್ಕೆ ಆಕರವಾದ ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯ ವಿಶಾಲ ವ್ಯಾಪ್ತಿಯನ್ನು ಹೊಂದಿದೆ. ಆದ್ದರಿಂದ ಈ ಅಧ್ಯಯನದ ಕಾಲಮಿತಿಗೆ ಅನುಗುಣವಾಗಿ ಅಧ್ಯಯನದ ವ್ಯಾಪ್ತಿ ಮತ್ತು ಮಿತಿಯನ್ನು ಈ ಕೆಳಗಿನಂತೆ ರೂಪಿಸಿಕೊಳ್ಳಲಾಗಿದೆ.

**೧.೩ ಅಧ್ಯಯನದ ವ್ಯಾಪ್ತಿ :**

ಯಾವುದೇ ಒಂದು ಅಧ್ಯಯನವು ತನ್ನದೇ ಆದ ವ್ಯಾಪ್ತಿಯನ್ನು ಮತ್ತು ಮಿತಿಯನ್ನು ಹೊಂದಿರುತ್ತದೆ. ಅದರಲ್ಲಿಯೂ ಸಾಹಿತ್ಯದಂತಹ ಕ್ಷೇತ್ರದಲ್ಲಿ ಅಧ್ಯಯನಕ್ಕೆ ತೊಡಗಿದಾಗ ಸೀಮಿತ ವ್ಯಾಪ್ತಿ ಅಗತ್ಯವಾಗಿರುತ್ತದೆ. ಕ್ರಿ.ಶ. ೧೯೦೦ ರಿಂದಲೇ ಸಣ್ಣಕಥೆಗಳು ರಚನೆಯಾಗಿರಬಹುದೆಂದು ಊಹಿಸಬಹುದಾಗಿದೆ.

ಸಂಕಲನ ರೂಪದಲ್ಲಿ ನಮಗೆ ದೊರೆಯುವ ಪ್ರಥಮ ಕೃತಿ ಹಣಮಂತರಾವ್ ದೇಸಾಯಿ ಚಿನಪನಹಳ್ಳಿಯವರ 'ಕಥಾ ಗೊಂಚಲು' ಇದು ೧೯೨೪ರಲ್ಲಿ ರಾಯಚೂರು ವಿದ್ಯಾರ್ಥಿ ಸಂಘದರವರು ಪ್ರಕಟಿಸಿದ್ದಾರೆ. ಇಲ್ಲಿಂದೀಚೆಗೆ ಕಾಣಿಸಿಕೊಂಡ ಕಥಾ ಸಾಹಿತ್ಯದ ವ್ಯಾಪ್ತಿ ವಿಶಾಲವಾದದ್ದು, ಈ ಮೂಲಕ ಸಾಹಿತ್ಯದ ವಲಯದಲ್ಲಾದ ಪಲ್ಲಟಗಳು, ಕಥೆಗಾರರ ಪಾಲ್ಗೊಳ್ಳುವಿಕೆ, ಮಹಿಳಾ ಅಸ್ತಿತ್ವದ ಪ್ರಶ್ನೆಗಳನ್ನೂ ಚರ್ಚಿಸುವುದರೊಂದಿಗೆ, ಈ ಅಧ್ಯಯನದಲ್ಲಿ ಮಹಿಳಾ ಬದುಕಿನ ಚಿತ್ರಣವನ್ನು ಗ್ರಹಿಸಲಾಗಿದೆ. ಈ ಕಾರಣವಾಗಿ ಹೈದರಾಬಾದ್ ಕರ್ನಾಟಕದ ಕಥೆಗಾರರು ಎಂದು ಗುರುತಿಸಲ್ಪಡುವ ಎಲ್ಲಾ ಲೇಖಕರ ಕಥೆಗಳ ಚರ್ಚೆಯನ್ನು ಏಕಕಾಲಕ್ಕೆ ಅಧ್ಯಯನಕ್ಕೆ ಒಳಪಡಿಸಲು ಕಷ್ಟಸಾಧ್ಯವಾಗಿರುವುದರಿಂದ ಅಧ್ಯಯನದ ಅನುಕೂಲ ಮತ್ತು ಕಾಲ ಮಿತಿಗೆ ಅನುಗುಣವಾಗಿ ಹೈದರಾಬಾದ್ ಕರ್ನಾಟಕದ ಕಥಾ ಸಾಹಿತ್ಯವನ್ನು ಅವಲೋಕಿಸಿ ಆಯ್ದ ಕಥಾಸಂಕಲನಗಳಿಂದ ಮಹಿಳೆಯ ಚಿತ್ರಣವನ್ನು ಪ್ರತಿನಿಧಿಸುವ ಪ್ರಾತಿನಿಧಿಕ ಕಥೆಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

ಇಲ್ಲಿ ಸ್ಥೂಲವಾಗಿ ಮಹಿಳಾ ಪ್ರಾಧಾನ್ಯತೆಗೆ ಅವಕಾಶ ನೀಡುವ ಕೃತಿ ಹಾಗೂ ಕೃತಿಕಾರರನಷ್ಟೆ ಗಮನಕ್ಕೆ ತರಲಾಗಿದೆ. ಬೀದರ್, ಕಲಬುರ್ಗಿ, ಯಾದಗಿರಿ, ರಾಯಚೂರು, ಕೊಪ್ಪಳ ಜಿಲ್ಲೆಗಳನ್ನೊಳಗೊಂಡ ಪ್ರದೇಶವೇ 'ಹೈದರಾಬಾದ್ ಕರ್ನಾಟಕ' ಈ ಜಿಲ್ಲೆಗಳು ಹೈದರಾಬಾದ್ ನಿಜಾಮನ ಪ್ರಾಂತ್ಯದಿಂದ ಕರ್ನಾಟಕಕ್ಕೆ ಸೇರ್ಪಡೆಗೊಂಡವುಗಳಾದರು ಮದ್ರಾಸ್ ಪ್ರಾಂತ್ಯದಲ್ಲಿದ್ದ ಬಳ್ಳಾರಿ ಆಡಳಿತಾತ್ಮಕವಾಗಿ ಗುಲ್ಬರ್ಗಾ ವಿಭಾಗದ ವ್ಯಾಪ್ತಿಗೊಳಪಟ್ಟಿದೆ. ಈ ಕಾರಣಕ್ಕಾಗಿ ಬಳ್ಳಾರಿ ಜಿಲ್ಲೆಯು ಇಲ್ಲಿ ಸೇರ್ಪಡೆಗೊಂಡರೂ ಕೂಡ ಪ್ರಸ್ತುತ ಅಧ್ಯಯನದ ಲಕ್ಷವಿರುವುದು ನಿಜಾಮ ಆಡಳಿತಕ್ಕೆ ಒಳಪಟ್ಟ ಅಂದಿನ ಹೈದರಾಬಾದ್ ಕರ್ನಾಟಕವನ್ನು ಕುರಿತು ಶೋಧಿಸುತ್ತದೆ.

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಗುರುತಿಸಿಕೊಂಡಿರುವ ಬಳ್ಳಾರಿ ಪ್ರಾಂತ್ಯವನ್ನು ಈ ಅಧ್ಯಯನದಲ್ಲಿ ಕೈಬಿಡಲಾಗಿದೆ. ಬಳ್ಳಾರಿ ಸ್ವಾತಂತ್ರ್ಯನಂತರ ಹೈದರಾಬಾದ್ ಕರ್ನಾಟಕ ಪ್ರಾಂತ್ಯಕ್ಕೆ ಸೇರ್ಪಡೆಯಾಗಿದ್ದು, ಸ್ವಾತಂತ್ರ್ಯ ಪೂರ್ವದಲ್ಲಿ ರಚಿತವಾದ ಕಥಾ ಸಾಹಿತ್ಯಕ್ಕೆ ಹಿನ್ನೆಲೆ ಪ್ರೇರಣೆ ನೀಡಿರುವುದಿಲ್ಲ. ಜೊತೆಗೆ ಪ್ರಬಂಧದ ವಿಷಯಕ್ಕೆ ಕೇಂದ್ರಿಕರಿಸುತ್ತಿರುವುದು ಆರಂಭದ ಕಥೆಗಾರರಿಂದ ಇಂದಿನವರಿಗೂ ರಚಿತವಾಗಿರುವ ಪ್ರಮುಖ ಆಯ್ದ ಕಥಾ ಸಂಕಲನಗಳನ್ನು ಅನುಲಕ್ಷಿಸಿ ನೋಡಲಾಗಿದೆ. ವ್ಯಾಪ್ತಿಯ ವಿಸ್ತಾರದ ತಡೆಯ ಹಿನ್ನೆಲೆಯು ಸಹ ಬಳ್ಳಾರಿ ಪ್ರದೇಶವನ್ನು ಕೈಬಿಡಲು ಇನ್ನೊಂದು ಕಾರಣವಾಗಿದೆ.

ಹೈದರಾಬಾದ್ ಕರ್ನಾಟಕದ ಆಡುಭಾಷೆಯಲ್ಲಿ ಕನ್ನಡ ಭಾಷೆಯನ್ನೇ ಕೇಂದ್ರಿಕರಿಸಿ ರಚಿತವಾದ ಕಥಾ ಸಾಹಿತ್ಯವನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ.

ಪ್ರಸ್ತುತ ಪ್ರಬಂಧದ ಶೀರ್ಷಿಕೆ ಕೇಂದ್ರಿಕರಿಸುವುದು ಮಹಿಳಾ ಚಿತ್ರಣ ಎಂಬುದಾಗಿದೆ. ಈ ಪರಿಕಲ್ಪನೆಯನ್ನು ಮಹಿಳೆ, ಸ್ತ್ರೀ, ಹಾಗೂ ಹೆಣ್ಣು ಇತ್ಯಾದಿ ವಿವಿಧ ಪರಿಭಾಷೆಗಳಲ್ಲಿ ಸಾಂದರ್ಭಿಕ ಹಾಗೂ ಸನ್ನಿವೇಶದ ಹಿನ್ನೆಲೆಯಲ್ಲಿ ಉಚಿತವಾಗಿ ಬಳಸಲಾಗಿದೆ. ಜೊತೆಗೆ ಸ್ತ್ರೀ ಚಿಂತನೆ, ಸ್ತ್ರೀವಾದಿ, ಸ್ತ್ರೀ ಸಂವೇದನೆ ಇತ್ಯಾದಿ ಪರಿಭಾಷೆಗಳನ್ನು ಅನ್ವಯಿಸಿಕೊಂಡಿದೆ.

ಅಧ್ಯಯನಕ್ಕೆ ಕಥಾ ಸಾಹಿತ್ಯ ಪ್ರಕಾರವನ್ನೇ ಆಯ್ದುಕೊಳ್ಳುವಲ್ಲಿ ಅದರ ಲೌಕಿಕ ಗುಣದ ಲೋಕದೃಷ್ಟಿ ಪ್ರಧಾನವಾದದ್ದು ವಾಸ್ತವವನ್ನು ಗ್ರಹಿಸಲು ಹೈದರಾಬಾದ್ ಪ್ರದೇಶದ ಕಥಾ ಸಾಹಿತ್ಯದ ವ್ಯಾಪ್ತಿಯನ್ನು ಮಿತಿಯಾಗಿರಿಸಿಕೊಳ್ಳಲಾಗಿದೆ. ಈ ಪ್ರದೇಶಕ್ಕೆ ಸಂಬಂಧಿಸಿ ಅಧ್ಯಯನದ ದೃಷ್ಟಿಯಿಂದ ಆಯ್ದ ಕಥೆಗಳನ್ನು ಗುರುತಿಸಿಕೊಡಿದೆ.

ಇಲ್ಲಿ ಗುರುತಿಸುವ ಕಥೆಗಾರರು ಇಲ್ಲಿ ಹುಟ್ಟಿ ಬೆಳೆದು ಇಲ್ಲೇ ಇದ್ದವರು/ಬೆರೊಂದು ಕಡೆ ಉದ್ಯೋಗದಲ್ಲಿದ್ದವರು ಜೊತೆಗೆ ಬೇರೆ ಭಾಗದವರು ಉದ್ಯೋಗಕ್ಕಾಗಿ ಈ ಪ್ರದೇಶದಲ್ಲಿ ನೆಲೆಸಿ ಈ ಪರಿಸರದ ಪ್ರಭಾವಕ್ಕೆ ಒಳಗಾಗಿ ಈ ನೆಲದ ಸತ್ವವನ್ನರಿತು ಇಲ್ಲಿಯ ಜನರ ಸಂವೇದನೆಗಳನ್ನು ಸಾಹಿತ್ಯದ ಮೂಲಕ ವ್ಯಕ್ತಪಡಿಸಿದವರ ಕೃತಿಗಳನ್ನು ವ್ಯಾಪ್ತಿಗೆ ಸೇರಿಸಿಕೊಳ್ಳಲಾಗಿದೆ.

ಇಲ್ಲಿ ಗ್ರಾಮೀಣ ಪರಿಸರ, ಧಾರ್ಮಿಕ, ದಲಿತ, ಮಧ್ಯಮವರ್ಗದ ಜನರ ಬದುಕಿನ ವಸ್ತು ವೈವಿಧ್ಯವನ್ನು ನಿರೂಪಿಸುವ ಕಥೆಗಳನ್ನು ಹಾಗೂ ಪ್ರಾತಿನಿಧಿಕವಾಗಿ ಮಹಿಳೆಯ ಸಂವೇದನೆ ನಿರೂಪಿಸುವ ಕಥೆಗಳನ್ನು ಆಯ್ದುಕೊಂಡಿದೆ. ಪುರುಷ ಹಾಗೂ ಮಹಿಳೆಯರೀರ್ವರ ಕೃತಿಗಳನ್ನು ಈ ನೆಲೆಯಲ್ಲಿ ನೋಡಲಾಗಿದೆ.

**೧.೪ ಅಧ್ಯಾಯನದ ವೈಧಾನಿಕತೆಗಳು:**

ಸಾಹಿತ್ಯದ ಕೃತಿಗಳನ್ನು ಆಕಾರವಾಗಿಸಿಕೊಂಡ ಅಧ್ಯಯನಗಳು ವಿಭಿನ್ನ ನೆಲೆಯ ಸಿದ್ಧಾಂತಗಳನ್ನು ಅನ್ವಯಿಸುವ ಮೂಲಕ ಹೊಸ ಓದುಗಳು ರೂಪಗೊಳ್ಳುತ್ತಿವೆ. ಈ ಬಗೆಯ ಅನೇಕ ಹೊಸ

ಓದುಗಳು ಸಮಕಾಲೀನವಾಗಿದ್ದು, ವರ್ತಮಾನದ ಅನೇಕ ಜ್ವಲಂತ ಸಮಸ್ಯೆಗಳನ್ನು ಪರಿಶೀಲಿಸಲು ಪ್ರಯತ್ನಿಸುತ್ತವೆ. ಹಾಗಾಗಿ ಹೊಸ ಓದಿನ ಅಧ್ಯಯನಗಳು ನಿತ್ಯನೂತನವಾದ ಚಲನಶೀಲತೆಗೆ ದಾರಿಮಾಡಿಕೊಡುತ್ತಿರುತ್ತವೆ. ಇಂತಹ ಅಧ್ಯಯನ ಕ್ರಮಗಳೇ ಪ್ರಸ್ತುತ ಅಧ್ಯಯನಕ್ಕೂ ಪ್ರೇರಣೆಯಾಗಿವೆ. ಈ ಹಿನ್ನೆಲೆಯನ್ನು ಆಧರಿಸಿ ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಮಹಿಳಾ ಬದುಕನ್ನು ಕೇಂದ್ರಿಕರಿಸಿದ ಈ ಅಧ್ಯಯನವನ್ನು ಒಂದು ಶಿಸ್ತಿಗೆ ಅಳವಡಿಸಲು ಈ ಕೆಳಗಿನ ವೈಧಾನಿಕತೆಗಳನ್ನು ಅನುಸರಿಸಲಾಗಿದೆ.

ಸಾಂಪ್ರದಾಯಿಕ ಸಂಶೋಧನ ವಿಧಾನವು ಸಂಶೋಧಕರು ತಮ್ಮ ಭಾವನೆ, ಅನುಭವ ಹಂಚಿಕೊಳ್ಳುವುದನ್ನು ಮತ್ತು ಸಂಶೋಧನಾ ವಸ್ತುವಿನೊಂದಿಗೆ ತಮ್ಮನ್ನು ಗುರುತಿಸಿಕೊಳ್ಳುವುದನ್ನು ನಿರಾಕರಿಸುತ್ತದೆ. ಏಕೆಂದರೆ ಸಂಶೋಧನೆಯು ಹೆಚ್ಚು ವಸ್ತು ನಿಷ್ಠವಾಗಿರಬೇಕೆಂದು, ಆದರೆ ಸ್ತ್ರೀವಾದಿ ಸಂಶೋಧನೆಯಲ್ಲಿ ವಸ್ತುನಿಷ್ಠತೆಗಿಂತ ವ್ಯಕ್ತಿ ನಿಷ್ಠತೆಗೆ ಆದ್ಯತೆ ನೀಡಲಾಗುವುದು. ಆದ್ದರಿಂದ ಸಂಶೋಧನೆಯಲ್ಲಿ ವಸ್ತುನಿಷ್ಠ ವಿಧಾನದ ಬಳಕೆ ಮಾತ್ರ ಸೂಕ್ತ ಎಂಬ ಸಾಂಪ್ರದಾಯಿಕ ಗ್ರಹಿಕೆಯನ್ನು ಮೀರಿ ವಸ್ತುನಿಷ್ಠತೆಯೊಂದಿಗೆ ವ್ಯಕ್ತಿನಿಷ್ಠ ವಿಧಾನವನ್ನು ಈ ಅಧ್ಯಯನವು ಬಳಸಿಕೊಂಡಿದೇ ಏಕೆಂದರೆ ಇಂದು ಅಧ್ಯಯನಗಳು ಕೇವಲ ಬೌದ್ಧಿಕ ಚಟುವಟಿಕೆಗಷ್ಟೆ ಸೀಮಿತಗೊಳ್ಳದೆ ಬದುಕನ್ನು ರೂಪಿಸುವ ಚಿಂತನೆಗಳಾಗಿ ವಿಸ್ತೃತಗೊಳ್ಳುತ್ತಿವೆ. ಮಹಿಳಾ ಬದುಕನ್ನು ಆಧರಿಸಿದ ಅಧ್ಯಯನಗಳಲ್ಲಿ ಈ ವಿಧಾನವು ಹೆಚ್ಚು ಅವಶ್ಯಕವಾದುದು ಎಂದು ಬಳಸಿಕೊಳ್ಳಲಾಗಿದೆ.

ಹೈದರಾಬಾದ್ ಕರ್ನಾಟಕದ ಕಥಾ ಸಾಹಿತ್ಯದ ಅಧ್ಯಯನವನ್ನು ಎರಡು ನೆಲೆಗಳಲ್ಲಿ ವಿಶ್ಲೇಷಿಸಲಾಗಿದೆ. ಒಂದು ವಸ್ತುವನ್ನಾಧರಿಸಿ ಆಶಯ ಕೇಂದ್ರಿತ ಚರ್ಚೆ, ಎರಡನೆಯದು ಆಕೃತಿ ಕೇಂದ್ರಿತವಾದದ್ದು, ವಸ್ತು ಕೇಂದ್ರಿತ ಎಂಬಲ್ಲಿ ಸಹಜವಾಗಿಯೇ ವಸ್ತುವಿನಲ್ಲಿ ಸಮಾಜ ಹಾಗೂ ಸಂಸ್ಕೃತಿಯ ಅಂಶಗಳು ಅಡಕಗೊಂಡಿರುತ್ತವೆ. ಈ ಬಗೆಯ ಸಮಾಜಿಕ ವಸ್ತು, ವಿಷಯಗಳು ಲೇಖಕರ ಲೋಕಗ್ರಹಿಕೆಯ ಮೂಲಕ ಮಂಡಿತವಾಗಿರುತ್ತವೆ. ಈ ಬಗೆಯಲ್ಲಿ ಗ್ರಾಮೀಣ ಬದುಕು, ಧಾರ್ಮಿಕ ಚಿತ್ರಣ, ದಲಿತ ಚಿತ್ರಣ ಹಾಗೂ ಸಂಕೀರ್ಣ ವಿಷಯಗಳ ಚಿತ್ರಣ ಕುರಿತಾದ ಗ್ರಹಿಕೆಗಳನ್ನು ಕಥೆಗಳು ಪಲ್ಲಟಗೊಳಿಸುವ ಸಂದರ್ಭಗಳು ಕಂಡುಬರುತ್ತವೆ. ಈ ಎಲ್ಲಾ ಬಗೆಯ ಅಂಶಗಳನ್ನು ಚರ್ಚಿಸಲು ವಿಶ್ಲೇಷಣಾ ವಿಧಾನವನ್ನು ರೂಪಿಸಿಕೊಳ್ಳಲಾಗಿದೆ. ಕಥೆಗಳ ಆಶಯಕ್ಕೂ, ಅದನ್ನು ರೂಪಿಸುವ ಆಕೃತಿಗೂ ಅವಿನಾಭಾವ ಸಂಬಂಧವಿರುತ್ತದೆ. ಕಥೆಗಳ ಆಶಯವನ್ನು ರೂಪಿಸಿದ ಆಕೃತಿಗಳು ಮಹಿಳಾ ಸಂಬಂಧಿಯಾಗಿ ಅಭಿವ್ಯಕ್ತಗೊಂಡ ಬಗೆಯನ್ನು ಚರ್ಚಿಸಲು ಸಹ ವಿಶ್ಲೇಷಣಾ ವಿಧಾನವನ್ನು ಅನುಸರಿಸಲಾಗಿದೆ.

ಪ್ರಸ್ತುತ ಅಧ್ಯಯನವನ್ನು ಪ್ರತಿನಿಧೀಕರಣ ವಿಧಾನದಲ್ಲಿಯೂ ನೋಡಲಾಗಿದೆ. ರೆಮಂಡ ವಿಲಿಯಮ್ಸ್‌ರ–'ಕೀ ವರ್ಡ್ಸ್ ಆಕ್ಸಫರ್ಡ್ ಡಿಕ್ಸನರಿ'ಯು ಪ್ರತಿನಿಧೀಕರಣವೆಂದರೆ ಚಿತ್ರಿಸು, ವರ್ಣಿಸು,

ನಿರೂಪಿಸು, ಮೂಡಿಸು, ಬಿಂಬಿಸು ಎಂದು ಅರ್ಥೈಸುತ್ತದೆ. ಸಂಶೋಧನೆ ಎಂಬುದು ಸತ್ಯಶೋಧನೆ ಎಂದು ಭಾವಿಸಲಾಗಿತ್ತು. ಆದರೆ ಯಾರ ಸತ್ಯ, ಲೇಖಕನ ಸತ್ಯವೆ ಅಥವಾ ಓದುಗನ ಸತ್ಯವೆ ಎಂಬ ಅನುಮಾನಗಳು ಆರಂಭವಾದವು. ಸತ್ಯವೆಂಬುದು ಒಂದಲ್ಲ ಹಲವು ಎಂಬ ವಾದ ಹುಟ್ಟಿಕೊಂಡಿತು. ಪಠ್ಯವನ್ನು ಗ್ರಹಿಸುವವರ ದೃಷ್ಟಿಕೋನವನ್ನು ಆಧರಿಸಿ ವಿಶ್ಲೇಷಣೆ ರೂಪಗೊಳ್ಳುತ್ತದೆ. ಪ್ರತಿನಿಧೀಕರಣವೆಂದರೆ ಯಾವುದೇ ಘಟನೆ, ಲೋಕಾನುಭವ, ವ್ಯಕ್ತಿ ಸಮುದಾಯವನ್ನು ಕುರಿತು ಭಾಷಿಕ, ಭಾಷಿಕೇತರ ಮಾಧ್ಯಮವನ್ನು ಬಳಸಿ ನಿರೂಪಿಸುವುದಾಗಿದೆ. ಹಾಗೇ ಗ್ರಹಿಸಿದ್ದನ್ನು ಪ್ರತಿನಿಧೀಕರಿಸುವಲ್ಲಿ ಆಯಾ ವ್ಯಕ್ತಿಗಳ ದೃಷ್ಟಿಕೋನ ಕೆಲಸ ಮಾಡುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ಮಹಿಳಾ ಬದುಕಿನ ಪ್ರತಿನಿಧೀಕರಣ ಎನ್ನುವಾಗ ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಮಹಿಳೆಯನ್ನು ಯಾವ ರೀತಿ ಪ್ರತಿನಿಧೀಸಲಾಗಿದೆ. ಹೀಗೆ ಪ್ರತಿನಿಧಿಸುವಾಗ ಕಥೆಗಾರರ ಗ್ರಹಿಕೆ ಏನಾಗಿರುತ್ತದೆ. ಹಾಗೂ ಈ ಕಥಾ ಸಾಹಿತ್ಯದಲ್ಲಿ ಮಹಿಳೆಯನ್ನು ಪ್ರತಿನಿಧಿಸುವಲ್ಲಿ ಅದು ರೂಪಿಸುವ ವಾಸ್ತವ ಯಾವುದು ಎಂಬುದನ್ನು ನೋಡುವುದರ ಮೂಲಕ ನನ್ನ ದೃಷ್ಟಿಕೋನ ಹಾಗೂ ಗ್ರಹಿಕೆಯನ್ನು ಇಲ್ಲಿ ಅಭಿವ್ಯಕ್ತಿಸಲಾಗಿದೆ. ಪ್ರತಿನಿಧೀಕರಣವು ಬೌದ್ಧಿಕ ಸಾಂಸ್ಕೃತಿಕ ಪ್ರಭಾವಗಳಿಗನುಗುಣವಾಗಿ ಭಿನ್ನವಾಗಿರುವುದಲ್ಲದೇ ಸಾಮಾಜಿಕ ಚಿಂತನೆಗಳಿಗೆ ಅನುಗುಣವಾಗಿ ಸಾಹಿತ್ಯ ಪ್ರತಿನಿಧೀಕರಣಗೊಳ್ಳುತ್ತದೆ.

ಹೀಗೆ ಮಹಾಪ್ರಬಂಧದ ಅಧ್ಯಯನದಲ್ಲಿ ವಿಧಾನ ಪ್ರಮುಖ ಪಾತ್ರವಹಿಸುತ್ತದೆ. ಪ್ರಸ್ತುತ ಅಧ್ಯಯನವು ಸೀಮಿತವಾದ ಭೌಗೋಳಿಕ ಪ್ರದೇಶ, ಸಣ್ಣ ಕಥಾ ಸಾಹಿತ್ಯ ಪ್ರಕಾರ ಹಾಗೂ ಕಥಾ ಸಾಹಿತ್ಯದಲ್ಲಿನ ನಿರ್ದಿಷ್ಟ ಕಥಾ ವಸ್ತುವನ್ನು ಆಯ್ಕೆಮಾಡಿಕೊಂಡಿರುವುದರಿಂದ ಇವುಗಳ ನಡುವಿನ ಅಂತರ್ ಸಂಬಂಧವನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

ಹೈದರಾಬಾದ್ ಕರ್ನಾಟಕ ಭಾಗದ ಕಥಾ ಸಾಹಿತ್ಯದಲ್ಲಿ ಮಹಿಳೆ ಕಂಡೂಂಡ ಬದುಕಿನ ಚಿತ್ರಣ, ಕಥೆಯಲ್ಲಿ ನಿರೂಪಿತವಾದ ಬಗೆಯನ್ನು ಅಧ್ಯಯನ ಮಾಡಲಾಗಿದೆ. ಜೊತೆಗೆ ಕಥೆಯಲ್ಲಿ ಮಹಿಳಾ ಶೋಷಣೆಗೆ ಕಾರಣವಾಗುವ ಅಂಶಗಳನ್ನು, ಪರಿಣಾಮಗಳನ್ನು ಅರ್ಥೈಸಿಕೊಳ್ಳಲು ಹಾಗೂ ಸಮಾಜದಲ್ಲಿನ ವಾಸ್ತವತೆ ಎಷ್ಟರ ಮಟ್ಟಿಗೆ ಪ್ರಕಟವಾಗಿದೆ ಎಂಬುದನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

ಹೈದರಾಬಾದ್ ಕರ್ನಾಟಕದ ಕಥೆಗಳು ದಲಿತ-ಬಂಡಾಯ ಮತ್ತು ಮಹಿಳಾವಾದಿ ಪ್ರಜ್ಞೆಯನ್ನು ಒಳಗೊಂಡಿವೆ. ಆದ್ದರಿಂದ ಮಹಿಳಾವಾದಿ ದೃಷ್ಟಿಕೋನವನ್ನು ಬಿಟ್ಟು ದಲಿತ ಬಂಡಾಯದ ಹಿನ್ನೆಲೆಯಲ್ಲಿ, ದಲಿತ-ಬಂಡಾಯವನ್ನು ಬಿಟ್ಟು ಮಹಿಳಾವಾದಿ ಹಿನ್ನೆಲೆಯಲ್ಲಿ ನೋಡಲಾಗದು. ಏಕೆಂದರೆ ಈ ಎರಡು ಪ್ರಶ್ನೆಗಳು ಸಹ ಒಂದರೊಳಗೊಂದು ಸೇರಿಹೋಗಿವೆ. ಆದ್ದರಿಂದ ಈ ಎರಡು ರೀತಿಯ ವೈಧಾನಿಕತೆಯನ್ನು ಈ ಪ್ರಬಂಧದಲ್ಲಿ ಅನುಸರಿಸಲಾಗಿದೆ.

**೧.೫. ಅಧ್ಯಯನದ ವಿಭಾಗೀಕರಣ :**

ಪ್ರಸ್ತುತ ಅಧ್ಯಯನವು ಒಟ್ಟು ಏಳು ಅಧ್ಯಾಯನಗಳನ್ನು ಒಳಗೊಂಡಿದೆ. ಮೊದಲನೆಯ ಅಧ್ಯಾಯನವು ಪ್ರಸ್ತಾವನೆಯೂ ಸೇರಿದಂತೆ ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವೈಧಾನಿಕತೆ ಕುರಿತು ಚರ್ಚಿಸುವ ಮೂಲಕ ಅಧ್ಯಯನದ ಸಮಗ್ರ ಸ್ವರೂಪವನ್ನು ಸ್ಥೂಲವಾಗಿ ವಿವರಿಸಲಾಗಿದೆ. ಮಹಾಪ್ರಬಂಧದ ಎರಡನೆಯ ಅಧ್ಯಾಯವು 'ಇದುವರೆಗಿನ ಸಾಹಿತ್ಯ ಸಮೀಕ್ಷೆ' ಈ ಅಧ್ಯಾಯದಲ್ಲಿ ಪ್ರಸಕ್ತ ಅಧ್ಯಯನಕ್ಕೆ ಅಗತ್ಯವಾದ ಕೃತಿಗಳನ್ನು ಪ್ರಸ್ತಾಪಿಸಲಾಗಿದೆ. ಅಲ್ಲದೇ ಈ ಕೃತಿಗಳಲ್ಲಿ ಚರ್ಚಿತವಾದ ಅಗತ್ಯ ಅಂಶಗಳನ್ನು ಅಧ್ಯಯನಗಳಲ್ಲಿ ಬಳಸಿಕೊಳ್ಳಲಾಗಿದೆ. ಅಧ್ಯಯನದ ಸೈದ್ಧಾಂತಿಕೆಯನ್ನು ರೂಪಿಸಿಕೊಳ್ಳಲು ಇಲ್ಲಿನ ಕೃತಿಗಳು ಪೂರಕವಾಗಿವೆ.

ಮಹಾಪ್ರಬಂಧದ ಮೂರನೆಯ ಅಧ್ಯಾಯ "ಪರಿಕಲ್ಪನಾತ್ಮಕ ಚರ್ಚೆ" ಇಲ್ಲಿ ಹೈದರಾಬಾದ್ ಕರ್ನಾಟಕದ ಪರಿಕಲ್ಪನೆಯ ಹಿನ್ನೆಲೆ ವಿವರಿಸಲಾಗಿದೆ. ~~ಅಂದರೆ~~ ಕಲ್ಬುರ್ಗಿ, ಯಾದಗಿರಿ, ಬೀದರ್, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳನ್ನು ಒಳಗೊಂಡ ಪ್ರದೇಶವನ್ನು ಹೈದರಾಬಾದ್ ಕರ್ನಾಟಕವೆಂದು ಕರೆಯಲಾಗಿದೆ. ಇವು ಹಿಂದೆ ನಿಜಾಮನ ಆಳ್ವಿಕೆಗೆ ಒಳಪಟ್ಟಿದವು ಎಂಬುದನ್ನು ಖಚಿತಪಡಿಸಿದೆ. ಮತ್ತು ಪ್ರಸ್ತುತ ಮಹಾಪ್ರಬಂಧವು ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯವನ್ನು ಆಧರಿಸಿ ರಚನೆಗೊಳ್ಳುತ್ತಿರುವುದರಿಂದ ಇದೇ ಅಧ್ಯಾಯದಲ್ಲಿ ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದ ಬೆಳವಣಿಗೆಯನ್ನು ಸಂಕ್ಷಿಪ್ತವಾಗಿ ಗುರುತಿಸಿದೆ. ಜೊತೆಗೆ ಕಥಾ ಸಾಹಿತ್ಯದ ಅಧ್ಯಯನವನ್ನು ಸ್ತ್ರೀವಾದಿ ನೆಲೆಯಲ್ಲಿ ಒಳಪಡಿಸಿರುವುದರಿಂದ ಸ್ತ್ರೀವಾದಿ ಪರಿಕಲ್ಪನೆಗಳನ್ನು ಪರಿಚಯಾತ್ಮಕವಾಗಿ ವಿವರಿಸಲಾಗಿದೆ.

ಮಹಾಪ್ರಬಂಧದ ನಾಲ್ಕನೆಯ ಅಧ್ಯಾಯ 'ಕಥಾ ಸಾಹಿತ್ಯದಲ್ಲಿ ವಸ್ತು-ವೈವಿಧ್ಯ' ಈ ಅಧ್ಯಾಯದಲ್ಲಿ ಹೈದರಾಬಾದ್ ಕರ್ನಾಟಕದ ಕಥಾ ಸಾಹಿತ್ಯವನ್ನು ಗ್ರಹಿಸಿದ ನೆಲೆಯಲ್ಲಿ ಗ್ರಾಮೀಣ ಬದುಕಿನ ಚಿತ್ರಣ, ಧಾರ್ಮಿಕ ಚಿತ್ರಣ, ದಲಿತ ಚಿತ್ರಣ ಹಾಗೂ ಸಂಕೀರ್ಣ ವಿಷಯಗಳ ಚಿತ್ರಣ ಹೀಗೆ ಪ್ರಧಾನ ಅಂಶಗಳನ್ನು ಅನ್ವಯಿಸಿಕೊಂಡು ವಸ್ತು-ಸ್ವರೂಪವನ್ನು ಕೂಲಂಕುಷವಾಗಿ ವಿಶ್ಲೇಷಿಸಲಾಗಿದೆ.

ಮಹಾಪ್ರಬಂಧದ ಐದನೆಯ ಅಧ್ಯಾಯ 'ಕಥಾ ಸಾಹಿತ್ಯದಲ್ಲಿ ಮಹಿಳಾ ಸಂವೇದನೆ' ಇಲ್ಲಿ ಮಹಿಳೆಯರ ಬದುಕು ಬವಣೆಯನ್ನು ವಿಶ್ಲೇಷಿಸಲಾಗಿದೆ. ಮಹಿಳಾ ಬದುಕಿನ ವಿಭಿನ್ನ ನೆಲೆಗಳ ಹಿನ್ನಲೆಯಲ್ಲಿ ಮಹಿಳಾ ಸಂವೇದನೆಯನ್ನು ಮಹಿಳಾ ಲೋಕದ ಸಮಸ್ಯೆಗಳ ಚಿತ್ರಣ, ಮಹಿಳಾ ಕೇಂದ್ರಿತ ಶೋಷಣೆಯ ಚಿತ್ರಣ ಹಾಗೂ ಮಹಿಳಾ ಪಾತ್ರಗಳ ಚಿತ್ರಣವೆಂಬ ಮೂರು ಹಂತಗಳಲ್ಲಿ ವಿಭಾಗಿಸಿ ಚರ್ಚೆಗೊಳಪಡಿಸಲಾಗಿದೆ. ಪುರುಷ ನಿರ್ಮಿತ ಚೌಕಟ್ಟಿನಲ್ಲಿ ಮಹಿಳೆಗೆ ವಿವಾಹ

ಅನಿವಾರ್ಯವೆಂದು ಕಡ್ಡಾಯಗೊಳಿಸಿದೆ. ವಿವಾಹ ಸಂಬಂಧ ಮಹಿಳೆ ಹಲವಾರು ಸಾಮಾಜಿಕ ಸಮಸ್ಯೆಗಳನ್ನು ಎದುರಿಸುತ್ತಾಳೆ. ಸಮಸ್ಯೆಯಿಂದ ಮಹಿಳೆ ಮಾನಸಿಕವಾಗಿ ಹಾಗೂ ದೈಹಿಕವಾಗಿ ಶೋಷಣೆಗೆ ಒಳಗಾಗುತ್ತಾಳೆ. ಈ ಸಮಾಜದ ಶೋಷಣೆಯ ವಿರುದ್ಧ ಸಿಡಿದು ನಿಂತಿರುವುದನ್ನು ಕಾಣಬಹುದು. ಜೊತೆಗೆ ಇಲ್ಲಿಯ ಕಥಾ ಸಾಹಿತ್ಯದಲ್ಲಿ ವಿವಿಧ ರೀತಿಯಲ್ಲಿ ಗುರುತಿಸಬಹುದಾದ ಮಹಿಳಾ ಪಾತ್ರಗಳು ಹೇಗೆ ರಚನೆಯಾಗಿವೆ ಎಂಬುದನ್ನು ಸಹ ವಿಶ್ಲೇಷಿಸಲಾಗಿದೆ. ಈ ಮೂಲಕ ಕಥೆಗಳು ಮಹಿಳಾ ಬದುಕನ್ನು ಗ್ರಹಿಸಿದ ಬಗೆಯನ್ನು ವಿಶ್ಲೇಷಿಸಲಾಗಿದೆ. ಕಥೆಗಾರರ ಲೋಕಗ್ರಹಿಕೆಗಳು ಮಹಿಳೆ ಕುರಿತು ತಳೆದ ನಿಲುವುಗಳಿಗೆ ಕಾರಣಗಳನ್ನು ಪರಿಶೀಲಿಸಲಾಗಿದೆ.

ಮಹಾಪ್ರಬಂಧದ ಆರನೆಯ ಅಧ್ಯಾಯ 'ಕಥಾ ಸಾಹಿತ್ಯದ ಭಾಷಾ ವೈಶಿಷ್ಟ್ಯ' ಈ ಅಧ್ಯಾಯವು ವಸ್ತು, ಭಾಷೆ, ತಂತ್ರ–ಶೈಲಿಯನ್ನು ಕುರಿತದ್ದು, ಇಲ್ಲಿಯ ಕಥೆಗಾರರ ಕಥೆಗಳು ಭಿನ್ನ ಬಗೆಯ ವಸ್ತು, ತಂತ್ರ, ಭಾಷೆಯನ್ನು ನಿರೂಪಿಸುತ್ತವೆ. ಹೈದರಾಬಾದ್ ಕರ್ನಾಟಕ ಪ್ರದೇಶದ ಬಹುಪಾಲು ಕಥಾ ಸಾಹಿತ್ಯದ ಕೃತಿಗಳು ಅಲ್ಲಿಯ ಆಡು ಭಾಷೆಯನ್ನು ಹೇರಳವಾಗಿ ಒಳಗೊಂಡಿವೆ. ವಸ್ತುವನ್ನು ಅಲ್ಲಿನ ಪರಿಸರದಿಂದಲೇ ಆಯ್ದುಕೊಂಡಿರುವುದರಿಂದ ಅವರ ಪ್ರಾದೇಶಿಕ ಭಾಷಾ ಬಳಕೆಯು ಬರಹಕ್ಕೆ ಗಟ್ಟಿತನ ಮತ್ತು ಒಂದು ಬಗೆಯ ವೈಶಿಷ್ಟ್ಯವನ್ನು ತಂದುಕೊಟ್ಟಿದೆ. ಪುರುಷ ರೂಪಿತ ಭಾಷೆಯ ಮಹಿಳಾ ಬದುಕನ್ನು ಪ್ರಭಾವಿಸಿದ ಬಗೆ ನಿರೂಪಿತವಾಗಿದೆ. ಅಭಿವ್ಯಕ್ತಿ ಭಾಷೆಯ ಮೂಲಕ ಮಹಿಳಾ ಬದುಕಿನ ಸತ್ಯಗಳನ್ನು ಅರಿಯಲು ಸಾಧ್ಯವಿದೆ ಎಂಬುದನ್ನು ಈ ಅಧ್ಯಯನದಲ್ಲಿ ನಿರೂಪಿಸಲಾಗಿದೆ.

ಏಳನೆಯ ಅಧ್ಯಾಯ 'ಸಮಾರೋಪ' ಈ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ವಿವರವಾದ ಚರ್ಚೆಯಲ್ಲಿ ಕಂಡುಕೊಂಡ ಫಲಿತಗಳು, ಅಧ್ಯಯನದ ಮುಂದಿನ ಸಾಧ್ಯತೆ ಹಾಗೂ ಮಿತಿಗಳನ್ನು ಚರ್ಚಿಸಲಾಗಿದೆ. ಕೊನೆಯಲ್ಲಿ ಮೂಲ ಆಕರ ಮತ್ತು ಪರಾಮರ್ಶನ ಗ್ರಂಥಗಳ ಪಟ್ಟಿ ನೀಡಲಾಗಿದೆ.

♦♦♦

ಅಧ್ಯಾಯ ೨

# ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಸಾಹಿತ್ಯವನ್ನು ವಿಭಿನ್ನ ಓದಿನ ಸಾಧ್ಯತೆಗೆ ಒಳಗುಮಾಡುತ್ತಿರುವ ಅಧ್ಯಯಗಳು ವ್ಯಾಪಕವಾಗಿ ಕಂಡುಬರುತ್ತಿವೆ. ಸಾಹಿತ್ಯದ ಒಂದು ನಿರ್ದಿಷ್ಟ ಪ್ರಕಾರಕ್ಕೆ ಅನುಗುಣವಾಗಿ ಅಧ್ಯಯನ ಮಾಡುವ ಹಾಗೆಯೇ ಸಾಹಿತ್ಯದ ಪ್ರಕಾರಗಳಲ್ಲಿ ನಿರ್ದಿಷ್ಟ ವಿಷಯವನ್ನು ಕೇಂದ್ರೀಕರಿಸಿ ಅಧ್ಯಯನ ಮಾಡುವ ಎರಡು ಮಾದರಿಗಳು ಕಂಡುಬರುತ್ತವೆ. ಈ ರೀತಿ ಸಾಹಿತ್ಯಿಕ ಓದಿನ ವಿಭಿನ್ನ ದೃಷ್ಟಿಕೋನಗಳನ್ನು ಇಂತಹ ಅಧ್ಯಯನಗಳು ತಿಳಿಸಿಕೊಡುತ್ತವೆ. ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ಕಥಾ ಸಾಹಿತ್ಯವನ್ನು ವಿಭಿನ್ನ ಅಧ್ಯಯನದ ಆಕರವನ್ನಾಗಿಸಿಕೊಂಡಿದೆ. ಅಲ್ಲದೆ ನಿರ್ದಿಷ್ಟ ವಿಷಯಕ್ಕೆ ಕೇಂದ್ರೀಕರಿಸಿಕೊಂಡಿರುವ ಹಿನ್ನೆಲೆಯಲ್ಲಿ ಕಥಾಸಾಹಿತ್ಯದಲ್ಲಿ ಮಹಿಳಾ ಚಿತ್ರಣಕ್ಕೆ ಸಂಬಂಧಿಸಿ ಒಟ್ಟಾರೆ ಸಾಹಿತ್ಯ ಕ್ಷೇತ್ರದಲ್ಲಿ ನಡೆದಿರುವ ಅಧ್ಯಾಯನಗಳನ್ನು ಗಮನಿಸಬೇಕಾದುದ್ದು ಅತ್ಯವಶ್ಯ. ಈ ಬಗೆಯ ಅಧ್ಯಯನವು ಸಂಶೋಧನೆಗೆ ಆಯ್ದುಕೊಂಡ ವಿಷಯದ ಕುರಿತು ವಿಸ್ತೃತ ವ್ಯಾಪ್ತಿಯನ್ನು ಅಧ್ಯಯನಕ್ಕೆ ಹಲವು ಭಿನ್ನ ಆಯಾಮಗಳನ್ನು ಒದಗಿಸಿಕೊಡಲು ಸಹಕಾರಿಯಾಗುತ್ತದೆ.

ಈ ಕಾರಣದಿಂದಾಗಿ ಹೈದರಾಬಾದ್ ಕರ್ನಾಟಕದ ಕಥಾಸಾಹಿತ್ಯದಲ್ಲಿ ಮಹಿಳಾ ಚಿತ್ರಣ ಎಂಬ ವಿಷಯಕ್ಕೆ ಪೂರಕವಾಗಿರುವಂತಹ ಕೆಲವು ಪ್ರಮುಖ ಗ್ರಂಥಗಳ ತಾತ್ವಿಕ ಸಮೀಕ್ಷೆಯನ್ನು ಈ ಅಧ್ಯಯನವು ಒಳಗೊಂಡಿದೆ. ಇಲ್ಲಿ ಅಧ್ಯಾಯನಕ್ಕೆ ಪೂರಕವಾಗಿ ಆಯ್ದುಕೊಂಡ ಗ್ರಂಥಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಪ್ರಮುಖ ಸಂಶೋಧಾನ ವಿಷಯವು ಎರಡು ಪ್ರಮುಖ ಅಂಶಗಳನ್ನು ಒಳಗೊಂಡಿದೆ. ಹೈದರಾಬಾದ್ ಕರ್ನಾಟಕ ಕಥಾಸಾಹಿತ್ಯ ಮತ್ತು ಮಹಿಳಾ ಚಿತ್ರಣ. ಇಲ್ಲಿ ಹೈದರಾಬಾದ್ ಕರ್ನಾಟಕದ ಕಥಾ ಸಂಕಲನಗಳನ್ನು ಮೂಲ ಆಕರವಾಗಿಸಿಕೊಂಡು ಮಹಿಳಾ ಬದುಕನ್ನು ಪರಿಗಣಿಸಿರುವ ನೆಲೆಗಳನ್ನು ಗ್ರಹಿಸುವ ಪ್ರಯತ್ನವಾಗಿದೆ. ಇಲ್ಲಿ ಕಥಾಸಾಹಿತ್ಯ ಮತ್ತು ಮಹಿಳಾ

ಬದುಕು ಎರಡು ಸಂದರ್ಭಗಳನ್ನು ಅನುಲಕ್ಷಿಸಿ ಬೆಳೆದು ಬಂದ ಕೆಲವು ಕೃತಿಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಅವುಗಳಲ್ಲಿ ಸಂಶೋಧನೆಗೆ ಸಂಬಂಧಪಟ್ಟ ಲೇಖನಗಳು, ಸಂಶೋಧನಾ ಮಹಾಪ್ರಬಂಧಗಳು, ವಿಮರ್ಶೆಗಳು ಹಾಗೂ ತಾತ್ವಿಕತೆಯ ಚರ್ಚೆಯನ್ನು ಒಳಗೊಂಡ ಕೃತಿಗಳನ್ನು ಇಲ್ಲಿ ಆಯ್ದುಕೊಳ್ಳಲಾಗಿದೆ. ಸ್ತ್ರೀವಾದವನ್ನು ಅನ್ವಯಿಸಿಕೊಂಡ ಕಥನಗಳ ಚರ್ಚೆ ಮಾಡಿದ ಸಂಶೋಧನಾ ಗ್ರಂಥಗಳನ್ನು ಗಮನಿಸಲಾಗಿದೆ.

'ಬಿಸಿಲ ಹನಿಗಳು' ೧೯೫೪ ರಲ್ಲಿ ಅಮರೇಶ ನುಗಡೋಣಿಯವರ ಸಂಪಾದಕತ್ವದಲ್ಲಿ ಬೆಳಕು ಕಂಡ ಕೃತಿ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು ಇದನ್ನು ಪ್ರಕಟಿಸಿದೆ. ಈ ಕೃತಿಯಲ್ಲಿ ಹೈದರಾಬಾದ ಕರ್ನಾಟಕದ ಇಪ್ಪತ್ತೈದು ಕಥೆಗಾರರ ತಲಾ ಒಂದರಂತೆ ಇಪ್ಪತ್ತೈದು ಪ್ರಾತಿನಿಧಿಕ ಕಥೆಗಳನ್ನು ಆಯ್ದು ಪ್ರಕಟಿಸಲಾಗಿದೆ. ಈ ಕೃತಿಯ ಮುನ್ನುಡಿಯಲ್ಲಿ ಎಚ್.ಎಸ್. ರಾಘವೇಂದ್ರ ರಾವ್ ಅವರು ಒಟ್ಟು ಕಥೆಗಳನ್ನು ವಿಮರ್ಶಿಸುವಾಗ ಮಹಿಳಾ ಪಾತ್ರಗಳನ್ನು ಕುರಿತು ಈ ಸಂಕಲನದ ಮುಖ್ಯ ಕಥೆಗಳ ವಿಶಿಷ್ಟತೆಯಿರುವುದು ಅವರಿವರನ್ನು ಟೀಕಿಸುವುದರಲ್ಲಿ ಕಾಲ ಕಳೆಯದೆ ತಮ್ಮ ತೀವ್ರ ವಿಷಾದದ ಸಿಟ್ಟಿಗೆ ಕಷ್ಟ ಸಹಿಷ್ಣುತೆ ಹಾಗೂ ಧೈರ್ಯಗಳ ಕಾವು ಕೊಟ್ಟು ಹಿಗ್ಗು ಅನುಕಂಪಗಳನ್ನು ಹುಟ್ಟಿಸುವ ರೊಟ್ಟಿಗಳನ್ನು ತಯಾರಿಸಬಲ್ಲ ಪಾತ್ರಗಳಲ್ಲಿ ಅದರಲ್ಲೂ ಹೆಣ್ಣು ಪಾತ್ರಗಳಲ್ಲಿ ಇಂಥವರನ್ನು ಕಥೆಗಾರರು ಬೆರಗು ಮತ್ತು ಕೃತಜ್ಞತೆಗಳಿಂದ ನೋಡಿದ್ದಾರೆ ಆರಾಧಿಸಿದ್ದಾರೆ.(ಮುನ್ನುಡಿಯಿಂದ) ಎಂದು ವಿಶ್ಲೇಷಿಸಿದ್ದಾರೆ.

ಅಮರೇಶ ನುಗಡೋಣಿ ಅವರ ಕೃತಿಯು 'ಹೈದರಾಬಾದ್ ಕರ್ನಾಟಕದ ಸಾಹಿತ್ಯದಲ್ಲಿ ಸಾಮಾಜಿಕ ವಾಸ್ತವ' ಎಂಬುದು ಪಿಎಚ್.ಡಿ. ಸಂಶೋಧನಾ ಪ್ರಬಂಧವಾಗಿದೆ. ಹೈದರಾಬಾದ್ ಕರ್ನಾಟಕ ಪ್ರದೇಶದ ಜನತೆಯ ಬದುಕಿನ ವಾಸ್ತವಿಕ ಚಿತ್ರಣ ಕಂಡುಬರುತ್ತಿರುವ ರೀತಿಯನ್ನು ಕಾಲಘಟ್ಟದ ಒತ್ತಡಗಳಿಗೆ ಅನುಗುಣವಾಗಿಯೇ ವಿಶ್ಲೇಷಿಸಿದ್ದಾರೆ. ನಿಜಾಮ ಆಳ್ವಿಕೆಯ ರಾಜಕೀಯ ಪರಿಸ್ಥಿತಿಗಳು ತಂದೊಡ್ಡಿದ್ದ ರಜಾಕಾರರ ಹಾವಳಿಯಂತಹ ಸಂದಿಗ್ಧತೆಗಳು ಇಲ್ಲಿನ ಜನತೆಯ ಬದುಕಿನ ಮೇಲೆ ಉಂಟುಮಾಡಿದ ದುಷ್ಪರಿಣಾಮಗಳನ್ನು ತಿಳಿಸಿದ್ದಾರೆ. ತತ್ವಪದಕಾರರು ಸಾಹಿತಿಗಳು ಈ ಪ್ರದೇಶದ ಬದುಕನ್ನು ಸಾಹಿತ್ಯದಲ್ಲಿ ಪುನರ್ ರೂಪಿಸಲೇಬೇಕಾಗಿದ್ದರ ತಾತ್ವಿಕತೆಯನ್ನು ಪ್ರಸ್ತುತ ಅಧ್ಯಯನ ಸ್ಪಷ್ಟಪಡಿಸುತ್ತದೆ.

ಜೋಶಿ ಮಧುಸೂದನಾಚಾರ್ಯರ ಕೃತಿಯು 'ಹೈದರಾಬಾದ್ ಕರ್ನಾಟಕ ಬಂಡಾಯ ಸಾಹಿತ್ಯ ಪರಂಪರೆ' ಎಂಬುದು ಪಿಎಚ್.ಡಿ ಸಂಶೋಧನಾ ಪ್ರಬಂಧವಾಗಿದೆ. ಇದು ಹೈದರಾಬಾದ್ ಕರ್ನಾಟಕದ ಬಂಡಾಯ ಸಾಹಿತ್ಯ ನಡೆದು ಬಂದ ದಾರಿ ಹಾಗೂ ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡಿರುವ ಬಂಡಾಯದ ಸ್ವರೂಪವನ್ನು ಅಧ್ಯಯನ ತಿಳಿಸಿಕೊಡುತ್ತದೆ.

ಬಿದರಿ ಚಂದಕಲಾ ಅವರ ಕೃತಿಯು 'ಮಹಿಳಾ ಬದುಕು' ಎಂಬುದು ಪಿಎಚ್.ಡಿ ಸಂಶೋಧನಾ ಪ್ರಬಂಧವಾಗಿದೆ. ಇದು ಹೈದರಾಬಾದ್ ಕರ್ನಾಟಕ ಸಾಹಿತ್ಯ ಪ್ರಕಾರಗಳಲ್ಲಿ ಸ್ತ್ರೀ ಬದುಕಿಗೆ ಸಂಬಂಧಿಸಿದಂತೆ ಕಂಡುಬರುವ ವಿಷಯಗಳನ್ನು ಸ್ತ್ರೀವಾದಿ ಹಿನ್ನಲೆಯಲ್ಲಿ ವಿಶ್ಲೇಷಿಸಿದೆ. ಬದುಕಿನ ಅಸಹಾಯಕತೆಯ ನೆಲೆಗಳನ್ನು ವ್ಯವಸ್ಥೆಯ ಶೋಷಣೆಯನ್ನು ವಿರೋಧಿಸಿ ನಿಲ್ಲುವ ಸ್ತ್ರೀ ಬದುಕಿನ ದಿಟ್ಟತನ ಇತ್ಯಾದಿ ವಿಷಯಗಳನ್ನು ಸಮುದಾಯ ಹಾಗೂ ಸಾಮಾಜಿಕ ಸ್ಥಾನಮಾನಗಳ ಹಿನ್ನಲೆಯಲ್ಲಿ ಗುರುತಿಸಿದೆ.

ಉಮಾದೇವಿ ಎಸ್. ಒಡೆಯರ್ ಅವರ 'ಗ್ರಾಮೀಣ ಮಹಿಳೆಯ ಸಬಲೀಕರಣ ಒಂದು ಸ್ತ್ರೀವಾದಿ ಅಧ್ಯಯನ' (ಹೈದರಾಬಾದ್ ಕರ್ನಾಟಕವನ್ನು ಅನುಲಕ್ಷಿಸಿ) ಎಂಬುದು ಪಿಎಚ್.ಡಿ ಸಂಶೋಧನಾ ಪ್ರಬಂಧವಾಗಿದೆ. ಈ ಅಧ್ಯಯನವು ಸ್ತ್ರೀವಾದದ ಸೈದ್ಧಾಂತಿಕ ಚರ್ಚೆಯೊಂದಿಗೆ ಗ್ರಾಮೀಣ ಮಹಿಳೆಯರ ಸಬಲೀಕರಣದಲ್ಲಿ ಸಂಸ್ಥೆಗಳ ಪಾತ್ರ ಹಾಗೂ ಸ್ವ-ಸಹಾಯ ಗುಂಪುಗಳ ಪಾತ್ರವನ್ನು ತಿಳಿಸಿಕೊಡುತ್ತದೆ. ಗ್ರಾಮೀಣ ಮಹಿಳೆಯ ಸಬಲೀಕರಣದಲ್ಲಿನ ತೊಡಕುಗಳನ್ನು ಇದು ವಿವರಿಸುತ್ತದೆ.

ಡಾ.ಎಲ್.ಜಿ. ಮೀರಾ ಅವರು ೨೦೦೪ರಲ್ಲಿ ಪ್ರಕಟಿಸಿರುವ ತಮ್ಮ 'ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ' ಎಂಬ ಕೃತಿಯ ಒಂದು ಉಪಶೀರ್ಷಿಕೆಯಲ್ಲಿ ಗೀತನಾಗಭೂಷಣರ ದಂಗೆ ಕಾದಂಬರಿಯ ಬಹಳಷ್ಟು ಹೆಣ್ಣುಮಕ್ಕಳು (ವಿದ್ಯಾವಂತ ಸಾತಿಯನ್ನು ಹೊರತುಪಡಿಸಿ) ಬಡ, ದಲಿತ, ಅವಿದ್ಯಾವಂತ ವ್ಯಕ್ತಿಗಳು ಮತ್ತು ಹೊರ ಪ್ರಪಂಚದ ಪರಿಚಯ ಇಲ್ಲದವರು, ತಮ್ಮ ಮೇಲಾಗುತ್ತಿರುವ ಅನ್ಯಾಯ ಅನಾಚಾರಗಳನ್ನು ಇವರಲ್ಲಿ ಬಹಳಷ್ಟು ಜನ ಯಥಾಸ್ಥಿತಿ ಎಂದೇ ತಿಳಿದಿದ್ದಾರೆ. ತೀರಾ ಮೂಲೆಗೆ ದೂಡಲ್ಪಟ್ಟಾಗ ಅನ್ಯಾಯವನ್ನು ಪ್ರತಿಭಟಿಸುವ ಪ್ರಯತ್ನ ಮಾಡುತ್ತಾರಾದರೂ ವ್ಯವಸ್ಥೆಯನ್ನು ಬುಡಮೇಲುಗೊಳಿಸುವ ಶಕ್ತಿ ಅವರ ಪ್ರತಿಭಟನೆಗಿರುವುದಿಲ್ಲ ಎಂದು ಗುರುತಿಸುತ್ತಾರೆ. ಸಂಘಟನೆಯ ಕೊರತೆ ಇದಕ್ಕೆ ಕಾರಣವೆನ್ನುತ್ತಾರೆ.

ಸಖಿ-ಆಖ್ಯಾನ ಎಂಬ ಶಶಿಕಲಾ ಮೊರಬದರವರ ಕೃತಿಯು 'ಜನಪ್ರಿಯ ಸಾಹಿತ್ಯದಲ್ಲಿ ಮಹಿಳಾ ಪ್ರತಿನಿಧೀಕರಣ' ಎಂಬ ಪಿಎಚ್.ಡಿ ಸಂಶೋಧನಾ ಪ್ರಬಂಧವಾಗಿದೆ. ಈ ಕೃತಿ ಜನಪ್ರಿಯ ಎಂದು ಕರೆಯಿಸಿಕೊಂಡ ಸಾಹಿತ್ಯವನ್ನು ಸ್ತ್ರೀವಾದಿ ಚಿಂತನಾಕ್ರಮದ ಅನ್ವಯಿಕತೆಯ ಮೂಲಕ ಅಧ್ಯಯನಕ್ಕೆ ಒಳಪಡಿಸಿದೆ. ಸಾಹಿತ್ಯ ಭಾಷೆ, ವಿಮರ್ಶೆಗಳು ಹೇಗೆ ಪುರುಷ ಪ್ರಧಾನ ನೆಲೆಗಟ್ಟಿನಲ್ಲಿ ಏಕಪಕ್ಷೀಯವಾಗಿ ಚಿಂತನೆಗೊಳಗಾಗಿವೆ. ಎಂಬುದನ್ನು ಸಮರ್ಪಕವಾಗಿ ಇಲ್ಲಿ ದಾಖಲಿಸಿದೆ.

ಮಹಿಳಾ ಬರಹವು ಪ್ರಧಾನಧಾರೆಯ ದೃಷ್ಟಿಯಲ್ಲಿ ಗೌಣವಾಗಿದ್ದು, ಅದು ಎದುರಿಸುತ್ತಿರುವ ಬಿಕ್ಕಟ್ಟುಗಳನ್ನು ಸ್ಪಷ್ಟಪಡಿಸಿದ್ದಾರೆ. ಅದೇ ರೀತಿಯಾಗಿ ವಿಮರ್ಶೆಯ ಮಾನದಂಡಗಳ ಹಿಂದಿರುವ

ಲಿಂಗ ರಾಜಕಾರಣದ ಕುರಿತು ಸ್ತ್ರೀವಾದಿಗಳು ಚರ್ಚಿಸುವುದನ್ನು ಜನಪ್ರೀಯ ಕಾದಂಬರಿಗಳ ಹಿನ್ನಲೆಯಲ್ಲಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ.

'ಶಾಂತಿನಾಥ ದೇಸಾಯಿಯವರ ಸಾಹಿತ್ಯದಲ್ಲಿ ಆಧುನಿಕಾ ಮಹಿಳಾ ಪ್ರಜ್ಞೆ' ಎಂಬ ರೇಖಾ ಈ.ಜಿ.ಯವರ ಮಹಾಪ್ರಬಂಧವು ಶಾಂತಿನಾಥ ದೇಸಾಯಿಯವರ) ಕಥನಗಳಲ್ಲಿ ನಗರ ಜೀವನ ಚಿತ್ರಣವನ್ನು ನೀಡುತ್ತ ಅಸ್ತಿತ್ವವಾದ ಮತ್ತು ಮನೋವಿಜ್ಞಾನದ ನೆಲೆಯಲ್ಲಿ ರಚಿಸಿದ ಸಾಹಿತ್ಯದಲ್ಲಿ ಗಂಡಿನ ಸರಿಸಮವಾಗಿ ಹೆಣ್ಣು ತನ್ನ ಅಸ್ತಿತ್ವವನ್ನು ಕಂಡುಕೊಳ್ಳಬೇಕಾದಂತಹ ಆಧುನಿಕ ಪ್ರಜ್ಞೆಯನ್ನು ಪಡೆದುಕೊಳ್ಳಬೇಕಾದದ್ದು ಅವಶ್ಯಕ. ಆ ಮೂಲಕ ಆಧುನಿಕ ಪ್ರಜ್ಞೆಯನ್ನು ಪಡೆದಂತಹ ಹೆಣ್ಣು ಯಾವ ರೀತಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತಾಳೆ ಎಂಬುದರ ಶೋಧನೆ ನಡೆಸಿದ್ದಾರೆ.

ಶಾಂತಿನಾಥ ದೇಸಾಯಿಯವರ ಸಾಹಿತ್ಯದಲ್ಲಿ ಬರುವ ಸ್ತ್ರೀ ಪಾತ್ರಗಳು ಗಂಡಿನಷ್ಟೇ ಮುಖ್ಯ ಪಾತ್ರವಹಿಸಿವೆ. ಹೆಣ್ಣು ಗಂಡಿನ ಸಂಘರ್ಷದಲ್ಲಿ, ಹೆಣ್ಣು ಗಂಡಿನ ಸಂಘರ್ಷದಲ್ಲಿ ಅವರು ಏಕಮುಖಿಯಾಗಿ ಚಿಂತನೆ ಮಾಡದೇ ಇರುವುದು ಮುಖ್ಯ ಆರ್ಥಿಕ ಬಲವಿಲ್ಲದಿದ್ದಾಗ್ಯೂ ಗಂಡಿನ ಆಶ್ರಯದ್ದೆ ಅಸ್ತಿತ್ವರಹಿತ ಜೀವನ ನಡೆಸಲು ಒಪ್ಪದೇ ತಿರಸ್ಕರಿಸಿ ಹೊರಬರುವುದು ಇಲ್ಲಿನ ಮಹಿಳಾ ಪಾತ್ರಗಳ ದಿಟ್ಟತನ ಹಾಗೆಂದ ಮಾತ್ರಕ್ಕೆ ಅವರು ಸ್ವೇಚ್ಛಾಚಾರಿಗಳಾಗಿರದೇ ಜವಾಬ್ದಾರಿಯಿಂದ ವರ್ತಿಸುವ ಪಾತ್ರಗಳಾಗಿ ಕಂಡುಬರುತ್ತವೆ. ಸ್ತ್ರೀವಾದಿ ನೆಲೆಯಿಂದ ಶೋಧಿಸಿದಾಗಲೂ ಆ ಪಾತ್ರಗಳೆಲ್ಲಕ್ಕೂ ನ್ಯಾಯ ದೊರಕಿಸಿದ್ದನ್ನು ಗುರುತಿಸುತ್ತಾರೆ.

'ಮಹಿಳಾ ಅಸ್ತಿತ್ವ ಸಂಕಥನ ಒಂದು ಪರಿಕಲ್ಪನಾತ್ಮಕ ಅಧ್ಯಯನ' ಎಂಬುದು ಕವಿತಾ ರೈ ಬಿ.ಆರ್. ಅವರು ೨೦೦೫ರಲ್ಲಿ ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ. ಈ ಪ್ರಬಂಧದ ಅಧ್ಯಯನಕ್ಕೆ ಕವಿತಾ ಅವರು ವಿವಾಹ ಮತ್ತು ಕುಟುಂಬ ಪರಿಕಲ್ಪನೆಗಳನ್ನು ಆಯ್ದುಕೊಂಡಿದ್ದು ಗೀತಾ ನಾಗಭೂಷಣರ ಮೂರು ಕಾದಂಬರಿಗಳ ತಲಸ್ಪರ್ಶಿ ಅಧ್ಯಯನವಾಗಿದೆ. ವಿವಾಹ, ಕೂಡಿಕೆ, ಲೈಂಗಿಕತೆ, ದಾಂಪತ್ಯಗಳ ಸವಿವರ ಅಧ್ಯಯನದಲ್ಲಿ ಗಂಡಸರಿಗೆ ಶತಮಾನಗಳಿಂದಲೇ ಬೇಡವಾಗಿರುವ ಕುಟುಂಬ ವ್ಯವಸ್ಥೆ ಹೆಂಗಸರ ಆತ್ಮಸ್ಥೈರ್ಯ, ತ್ಯಾಗ, ಜೀವನದ ಮೇಲೆ ಮಾತ್ರವೇ ನಿಂತಿರುವಂತೆ ಕಾಣಬರುತ್ತದೆ. ಇದನ್ನು ಅತಿಶಕ್ತವಾಗಿ ಗೀತಾ ನಾಗಭೂಷಣ ಅವರ ಎಲ್ಲಾ ಕಾದಂಬರಿಗಳು ಬಿಂಬಿಸುತ್ತವೆ ಎನ್ನುತ್ತಾರೆ.

ಡಾ.ಎಂ.ಉಷಾರವರ ಆಧುನಿಕ ಮಹಿಳಾ ಸಾಹಿತ್ಯ ಇನ್ನಷ್ಟು ಪುಟಗಳು ಕೃತಿಯಲ್ಲಿ "ಮಹಿಳೆಯ ಚರಿತ್ರೆಯ ಶೋಧ ಮತ್ತು ಪುನಾರಚನೆಯಲ್ಲಿ ಸ್ತ್ರೀವಾದಕ್ಕಿರುವ ಆಸಕ್ತಿಯಂತೆ ಸ್ತ್ರೀವಾದಿ ಮಿವರ್ಶೆಗೆ ಮಹಿಳಾ ಸಾಹಿತ್ಯ ಪರಂಪರೆಯಲ್ಲಿ ಆಸಕ್ತಿಯಿದೆ. ಇಂಥದೊಂದು ಪರಂಪರೆಯ ಪ್ರಜ್ಞೆ ಹೂತು ಹೋದ ಸ್ತ್ರೀಯರ ಆತ್ಮವಿಶ್ವಾಸವನ್ನು ಎತ್ತಬಹುದು. ನ್ಯಾಯ ಪಡೆಯದ ಲೇಖಕಿಯರು

ನ್ಯಾಯ ಪಡೆಯಬಹುದು. ಪರಂಪರೆಯ ಗುಣಮಿತಿಗಳು ಮುಂದಿನ ದಾರಿಯ ಮೇಲೆ ಬೆಳಕು ಚೆಲ್ಲಬಹುದು. ಇಂದಿನ ಸ್ತ್ರೀಯನ್ನು ಅರ್ಥಮಾಡಿಕೊಳ್ಳಲು ನೆರವಾಗಬಹುದು. ಹೀಗೆ ಪರಂಪರೆಯ ತಿಳಿವಿಗೆ ರಚನಾತ್ಮಕ ಪಾತ್ರವಿದೆ.

ಸ್ತ್ರೀವಾದ ಮತ್ತು ಸ್ತ್ರೀವಾದಿ ವಿಮರ್ಶೆಯ ಆಸಕ್ತಿಯನ್ನು ಮಹಿಳಾ ಸಾಹಿತ್ಯ ಆಕರವನ್ನಾಗಿಸಿಕೊಂಡು ವಿಶ್ಲೇಷಣೆಗೆ ತೊಡಗುವತ್ತ ಈ ಕೃತಿ ಸಾಗುತ್ತದೆ. ಅಲ್ಲದೆ ಇಂತಹ ಸಾಹಿತ್ಯ ಪರಂಪರೆಯನ್ನು ಬೆನ್ನಟ್ಟಿ ಹೊರಟರೆ ಮಹಿಳಾ ಚರಿತ್ರೆಯೊಂದನ್ನು ರೂಪಿಸಿಕೊಳ್ಳಲು ಸಹಾಯಕವಾಗುತ್ತದೆ. ಆದ್ದರಿಂದಲೇ ಸ್ತ್ರೀವಾದದ ಪ್ರಾರಂಭ ಕನ್ನಡದಲ್ಲಿ ಈ ನೆಲೆಯಿಂದ ಮುಂದುವರೆಯುತ್ತಿದೆ. ಮಹಿಳಾ ಸಾಹಿತ್ಯ ಪ್ರಧಾನಧಾರೆಯಲ್ಲಿ ಪರಿಗಣಿತವಾಗುವ ಬಗೆ ಮತ್ತು ಅದನ್ನು ವಿಭಿನ್ನ ನೆಲೆಯಲ್ಲಿ ಗ್ರಹಿಸುವ ಅಗತ್ಯತೆಯನ್ನು ಈ ಕೃತಿ ಪ್ರೇರೇಪಿಸುತ್ತದೆ.

ಕಾವ್ಯಶ್ರೀ ಅವರು 'ಹೈದರಾಬಾದ ಕರ್ನಾಟಕ ಪ್ರದೇಶದ ಕಾದಂಬರಿಗಳು' ಎಂಬ ಸಂಶೋಧನ ಮಹಾಪ್ರಬಂಧಗಳನ್ನು ೨೦೦೫ರಲ್ಲಿ ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗಿದೆ. ಇಲ್ಲಿ ಅಧ್ಯಯನದ ಒಂದು ಭಾಗವಾಗಿ ಸ್ತ್ರೀ ಸಂವೇದನೆಯನ್ನು ಶೋಧಿಸಿದ್ದಾರೆ. ಇಲ್ಲಿ ಅವರು ಶಾಂತರಸ, ಚನ್ನಣ್ಣ ವಾಲೀಕಾರ, ಗೀತಾ ನಾಗಭೂಷಣ ಹಾಗೂ ಬಿ.ಟಿ.ಲಲಿತಾ ನಾಯಕರ ಕಾದಂಬರಿಗಳನ್ನು ಅಧ್ಯಯನಕ್ಕೆ ಆಯ್ದುಕೊಂಡಿದ್ದಾರೆ ಮಹಿಳಾ ಬದುಕನ್ನು ಸ್ತ್ರೀವಾದಿ ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ.

ಗಿರಿಜಾಶಾಸ್ತ್ರಿ ಅವರ "ಆಧುನಿಕ ಕನ್ನಡ ಕಥೆಗಳು ಒಂದು ಸ್ತ್ರೀವಾದಿ ಅಧ್ಯಯನ" ಎಂಬುದು ಪಿಎಚ್.ಡಿ ಸಂಶೋಧನಾ ಪ್ರಬಂಧವಾಗಿದೆ. ಆಧುನಿಕ ಕನ್ನಡ ಕಥಾ ಸಾಹಿತ್ಯದಲ್ಲಿ ವಸ್ತುವಿನ ವೈವಿಧ್ಯತೆಯಲ್ಲಿ ಆದ ವಿಸ್ತಾರ, ವೇಶ್ಯೆಯರು, ವಿಧವೆಯರು, ಭಿಕ್ಷುಕಿಯರು, ಹೆಣ್ಣು ಜೀತದಾಳು, ಸ್ತ್ರೀ ಕಾರ್ಮಿಕರು, ವೈವಾಹಿಕ ಚೌಕಟ್ಟಿನಾಚೆಗೆ ಬರಲೆತ್ನಿಸುವ ಅತೃಪ್ತ ಗೃಹಿಣಿಯ ಸಂವೇದನೆಯ ವಿವಿಧ ಮಗ್ಗಲುಗಳನ್ನು ಆಧುನಿಕ ಕನ್ನಡ ಸಣ್ಣಕಥೆಗಳಲ್ಲಿ ಪ್ರತಿಬಿಂಬಿಸುವ ಪ್ರಯತ್ನವನ್ನು ಇಲ್ಲಿ ವಿವೇಚಿಸಲಾಗಿದೆ. ಇಲ್ಲಿ ನವೋದಯದಿಂದ ಹಿಡಿದು ನವ್ಯೋತ್ತರದವರೆಗಿನ ಕಥೆಗಳ ಸಮೀಕ್ಷೆ ನಡೆಸಿ, ಸ್ತ್ರೀ ಪರಿಕಲ್ಪನೆಯಲ್ಲಿ ಆದ ವಿಕಾಸವನ್ನು ಸೂಕ್ಷ್ಮವಾಗಿ ವಿಶ್ಲೇಷಿಸುವ ಪ್ರಯತ್ನವಿದೆ.

ಈ ಕೆಲವು ಅಧ್ಯಯನಗಳು ಹೈದರಾಬಾದ್ ಕರ್ನಾಟಕ ಸಾಹಿತ್ಯ ಅಲ್ಲಲ್ಲಿ ಚದುರಿದಂತೆ ಅಂಶಿಕವಾಗಿ ಅಧ್ಯಯನಕ್ಕೆ ಒಳಪಟ್ಟಿವೆ. ಕೆಲವು ಅಧ್ಯಯನಗಳು ಏಕಮುಖಿಯಾಗಿದ್ದು ಸೀಮಿತವಾಗಿವೆ. ಕೆಲವು ಬಹುಶಿಸ್ತೀಯ ಅಧ್ಯಯನಗಳಾಗಿದ್ದರೂ ಈ ಭಾಗದ ಕೆಲ ಕೃತಿಗಳಿಗೆ ಸೀಮಿತವಾಗಿವೆ. ಈ ಎಲ್ಲಾ ಕೃತಿಗಳು ಪ್ರಸ್ತುತ ಅಧ್ಯಯನಕ್ಕೆ ಉಪಯುಕ್ತವಾದ ಮಾಹಿತಿಯನ್ನು ನೀಡಿವೆ. "ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಮಹಿಳಾ ಚಿತ್ರಣ" (ಆಯ್ದ ಕಥಾ ಸಂಕಲನಗಳನ್ನು ಅನುಲಕ್ಷಿಸಿ)

ಎಂಬ ಶೀರ್ಷಿಕೆಯಡಿ ಕೈಗೊಳ್ಳುತ್ತಿರುವ ಈ ಅಧ್ಯಯನವು ಈವರೆಗೂ ಕಂಡುಬಂದ ಅಧ್ಯಯನಗಳಿಗಿಂತ ಭಿನ್ನವಾಗಿದೆ. ಕಥೆಗಳಲ್ಲಿ ಮಹಿಳಾ ಬದುಕು ಪರಿಗಣಿತಗೊಂಡಿರುವ ಬಗೆಯನ್ನು ಆಯ್ದ ಕಥೆಗಳನ್ನು ಚರ್ಚಿಸುವ ಮೂಲಕ ಶೋಧಿಸಲಾಗುತ್ತದೆ. ಮಹಿಳಾ ಬದುಕಿನ ವಿಸ್ತೃತ ಚರ್ಚೆಯನ್ನು ಕೈಗೊಳ್ಳಲಾಗಿದೆ. ಈ ನಿಟ್ಟಿನಲ್ಲಿ ಒಂದು ಆಶಾದಾಯಕ ಪ್ರಯತ್ನವಾಗಿದೆ.

♦ ♦ ♦

## ಅಧ್ಯಾಯ ಮೂರು

# ಪರಿಕಲ್ಪನಾತ್ಮಕ ತಾತ್ವಿಕ ಚರ್ಚೆ

**ಹೈದರಾಬಾದ್ ಕರ್ನಾಟಕದ ಪರಿಕಲ್ಪನೆಯ ಹಿನ್ನೆಲೆ :**

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಕಲ್ಬುರ್ಗಿ, ಬೀದರ್, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳು ಸೇರಿವೆ. ಇವು ಹಿಂದೆ ನಿಜಾಮನ ಆಳ್ವಿಕೆಗೆ ಒಳಪಟ್ಟವು. ನವೆಂಬರ್ ೧, ೧೯೫೬ರಲ್ಲಿ ಭಾಷಾವಾರು ಪ್ರಾಂತ ರಚನೆಯಾಗಿ ಕರ್ನಾಟಕದಲ್ಲಿ ಸೇರಿದಂದಿನಿಂದ ಈ ಪ್ರದೇಶವನ್ನು 'ಹೈದರಾಬಾದ್ ಕರ್ನಾಟಕ'ವೆಂದು ಕರೆಯಲಾಗುತ್ತದೆ.

ಸ್ವತಂತ್ರಪೂರ್ವ ಭಾರತ ಸ್ಥಳೀಯ ಆರಸರ ಆಳ್ವಿಕೆಯಲ್ಲಿ ಹಂಚಲ್ಪಟ್ಟಿತ್ತು. ಸುಮಾರು ಐದುನೂರು ಐವತ್ತಾರು ಸಂಸ್ಥಾನಗಳು ಭಾರತದಲ್ಲಿದ್ದವು. ಬ್ರಿಟೀಷರ ಸಹಯೋಗದಲ್ಲಿಯೇ ಆಳ್ವಿಕೆ ನಡೆಸುತ್ತಿದ್ದ ಸ್ಥಳಿಯ ಅರಸು ಮನೆತನಗಳಲ್ಲಿ ಹೈದರಾಬಾದ್ ನಿಜಾಮನ ಮನೆತನವೂ ಒಂದು. ಇನ್ನೂರೈವತ್ತು ವರ್ಷಗಳವರೆಗೆ ಆಳಿದರೂ ನಿಜಾಮರು ಬ್ರಿಟೀಷರ ಅಧೀನದಲ್ಲಿದ್ದುಕೊಂಡೇ ಅಧಿಕಾರ ನಡೆಸಿದರು. ಭಾರತದ ಸಂಸ್ಥಾನಗಳಲ್ಲೆಲ್ಲ ಹೈದರಾಬಾದ್ ಸಂಸ್ಥಾನವೇ ದೊಡ್ಡದು. ಈ ಸಂಸ್ಥಾನದ ನಿಜಾಮರು ಬ್ರಿಟಿಷರಿಗೆ ಅನೇಕ ಬಗೆಯಲ್ಲಿ ನೆರವಾಗಿ ನಾಡಿನ ಸ್ವಾತಂತ್ರ್ಯಕ್ಕಾಗಿ ನಡೆದ ಅನೇಕ ಚಳುವಳಿಗಳನ್ನು ಹತ್ತಿಕ್ಕಿದರು. ಅವರ ಸಹಾಯಕ ಸೈನ್ಯ ಪದ್ಧತಿಯ ನೀತಿಯಿಂದಾಗಿ ಜನ ಸಮುದಾಯ ಆರ್ಥಿಕ ಭಾರ ಹೋರಬೇಕಾಯಿತು. ೧೯೪೭ ಆಗಸ್ಟ್ ೧೫ರಂದು ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯಬಂದರೂ ಈ ಪ್ರಾಂತ್ಯವು ನಿಜಾಮರ ಆಳ್ವಿಕೆಯಿಂದ ಮುಕ್ತಿ ಪಡೆಯಲಿಲ್ಲ. ನಿಜಾಮನು ಹೈದರಾಬಾದ್ ಸಂಸ್ಥಾನವನ್ನು ಸ್ವತಂತ್ರಸಾಮ್ರಾಜ್ಯವನ್ನಾಗಿ ಉಳಿಸಿಕೊಂಡು ಆಳಲು ನಿರ್ಧರಿಸಿದನು. ಇದರಿಂದಾಗಿ ಸ್ವತಂತ್ರ ಭಾರತದಲ್ಲಿ ಈ ಪ್ರಾಂತ್ಯವು ಸೇರಿಕೊಳ್ಳಲಿಲ್ಲ. ನಿಜಾಮನ ನಿರ್ಧಾರವನ್ನು ಬೆಂಬಲಿಸಿದ ಮತೀಯ ಮನಸ್ಸಿನ "ರಜಾಕಾರರು" ಈ ಪ್ರಾಂತ್ಯದಲ್ಲಿ ಸ್ವೇಚ್ಚಾಚಾರದಿಂದ ವರ್ತಿಸಿದರು. ಈ ರಜಾಕಾರರ ದೌರ್ಜನ್ಯದಿಂದ ಇಡೀ ಪ್ರದೇಶವು ತತ್ತರಿಸಿತು. ಅತ್ಯಾಚಾರ,

ದರೋಡೆ, ಕೊಲೆ, ಸುಲಿಗೆ, ದಿನನಿತ್ಯ ಸಹಜವೆಂಬಂತೆ ನಡೆದವು. ಇದರಿಂದರ ಬೇಸತ್ತ ಜನರು ನಿಜಾಮ ಪ್ರಾಂತ್ಯ ತೊರೆದು ರಕ್ಷಣೆ ಪಡೆದರು. ಜನರೇ ಸಂಘಟಿತರಾಗಿ ರಜಾಕಾರರ ವಿರುದ್ಧ ಯುದ್ಧಗಳನ್ನು ಹೂಡಿದರು. ಇದರಿಂದ ಈ ಪ್ರದೇಶದಲ್ಲಿ ಬದುಕಿದ್ದ ಎಲ್ಲ ಜನ ಸಮುದಾಯಗಳು ದೌರ್ಜನ್ಯವನ್ನು ಅನುಭವಿಸಿದವು. ಕೊನೆಗೆ ಸ್ವತಂತ್ರ್ಯ ಭಾರತದ ಪೋಲಿಸ್ ಕಾರ್ಯಚರಣೆಯಿಂದ ಈ ಪ್ರದೇಶ ಸ್ವಾತಂತ್ರ್ಯ ದೊರೆಯುವಂತಾಯಿತು.

ಸ್ವಾತಂತ್ರ್ಯ ಪೂರ್ವದಲ್ಲಿ ಮೈಸೂರು ಸಂಸ್ಥಾನ, ಮುಂಬಯಿ ಕರ್ನಾಟಕ, ಮದರಾಸು ಕರ್ನಾಟಕ ಮತ್ತು ಕೊಡಗು ಈ ಪ್ರಾಂತ್ಯಗಳ ಸ್ಥಿತಿಗಿಂತ ಹೈದರಾಬಾದ್ ಕರ್ನಾಟಕದ ಸ್ಥಿತಿ ಭಿನ್ನವಾಗಿತ್ತು. ಕರ್ನಾಟಕದ ಈ ಪ್ರದೇಶಗಳಲ್ಲಿ ಬ್ರಿಟೀಷರ ಮತ್ತು ಸ್ಥಳೀಯ ಅರಸರ ಆಳ್ವಿಕೆಯಿತ್ತು. ಪರಂಪರಾಗತ ಸಂಸ್ಕೃತಿಯ ಮುಂದುವರಿಕೆಗೆ ಯಾವ ಅಡ್ಡಿಗಳಿರಲಿಲ್ಲ. ಬ್ರಿಟೀಷರ ವಸಾಹತು ವ್ಯವಸ್ಥೆಯಿಂದ, ಆಧುನಿಕತೆ ಸಮಾಜದಲ್ಲಿ ಮೂಡುತ್ತಿದ್ದರಿಂದ ಬದಲಾವಣೆಯ ಪ್ರಕ್ರಿಯೆಗೂ ಜನರು ಸ್ಪಂದಿಸತೊಡಗಿದರು. ಆದರೆ ಹೈದರಾಬಾದ್ ಕರ್ನಾಟಕ ಪ್ರದೇಶವು ನಿಜಾಂ ಅಧೀನದಲ್ಲಿದ್ದದ್ದರಿಂದ ಪರಕೀಯ ಭಾಷೆ ಮತ್ತು ಸಂಸ್ಕೃತಿಯೇ ಅರಸರದ್ದಾಗಿರುವಾಗ ಕನ್ನಡಿಗರ ಭಾಷೆ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ಅನೇಕ ಅಡ್ಡಿ ಆತಂಕಗಳು ಇದ್ದವು. ಮೈಸೂರು ಸಂಸ್ಥಾನದಲ್ಲಿ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಯ ಬೆಳವಣಿಗೆಗೆ ಆಳರಸರ ಪ್ರೋತ್ಸಾಹವಿತ್ತು. ಅಂಥ ವಾತಾವರಣವು ಈ ಪ್ರಾಂತ್ಯದಲ್ಲಿ ಎಂದೋ ಮಾಯವಾಗಿ ಹೋಗಿತ್ತು. ಪರಂಪರಾಗತ ಜ್ಞಾನಕ್ಕೂ ಹೊಸ ಜ್ಞಾನ ಪಡೆಯುವುದಕ್ಕೂ ಅವಕಾಶಗಳು ಬೇರೆ ಪ್ರಾಂತ್ಯಗಳಲ್ಲಿದಂತೆ ಹೈದರಾಬಾದ್ ಕರ್ನಾಟಕ ಪ್ರಾಂತ್ಯಕ್ಕೆ ಇರಲಿಲ್ಲ. ಈ ಶತಮಾನದ ಆಡಿಯಲ್ಲಿ ಬ್ರಿಟಿಷರ ವಸಾಹತುಶಾಹಿ ಆಡಳಿತದಿಂದ ಪಶ್ಚಿಮ ದೇಶಗಳಿಗೆ ಸಂಪರ್ಕ ಸಾಧ್ಯವಾಗಿ ಹೊಸ ಚಿಂತನ ಕ್ರಮಗಳು ಲಭ್ಯವಾಗತೊಡಗಿದವು. ರಾಜಕೀಯ ಸಾಮಾಜಿಕ ಆರ್ಥಿಕ, ಧಾರ್ಮಿಕ ಶೈಕ್ಷಣಿಕ ಚಿಂತಕರಿಗೆ ಹೊಸ ಜ್ಞಾನ ಚಿಂತನೆಗಳು ದಕ್ಕತೊಡಗಿದವು. ಇದರಿಂದಾಗಿ ಅನೇಕ ಕ್ಷೇತ್ರಗಳಲ್ಲಿ ಹೊಸ ವಾತಾವರಣ ಮೂಡಿ ಹೊಸ ಹಾದಿ ಹಿಡಿದವು. ಸಾಹಿತ್ಯ ಕಲೆಗಳಿಗೂ ಇದು ಪ್ರೇರಕವಾಯಿತು. ಇಂಥ ಹೊಸ ಗಾಳಿ ಹೈದರಾಬಾದ್ ಕರ್ನಾಟಕ ಪ್ರಾಂತ್ಯದೊಳಗೆ ನುಗ್ಗಲು ಸಾಧ್ಯವಾಗಿಲಿಲ್ಲ. ಈ ಪ್ರಾಂತ್ಯದ ಒಡಲೊಳಗೇ ಅನೇಕ ಸಮಸ್ಯೆಗಳು ಆತಂಕ, ತಲ್ಲಣಗಳು ಇದ್ದವು. ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟ ತೀವ್ರವಾದಾಗ ಈ ಪ್ರಾಂತ್ಯದಲ್ಲಿ ನಿಜಾಂಶಾಹಿ ವಿರುದ್ಧ ಹೋರಾಟ ತೀವ್ರವಾಗತೊಡಗಿತ್ತು.

ಹೈದರಾಬಾದ್ ಕರ್ನಾಟಕ ಪ್ರದೇಶವು ಕರ್ನಾಟಕಕ್ಕೆ ಸೇರಿ ಅರ್ಧ ಶತಮಾನ ಕಳೆದರೂ, ಕರ್ನಾಟಕದ ಉಳಿದ ಭಾಗಗಳಿಗೆ ಸರಿಸಮವಾಗಿ ಮುನ್ನಡೆಯಲು ಸಾಧ್ಯವಾಗಿಲ್ಲ. ಶೈಕ್ಷಣಿಕ, ಆರ್ಥಿಕ ಮತ್ತು ಸಾಂಸ್ಕೃತಿಕವಾಗಿ ಈಗಲೂ ಹಿಂದುಳಿದ ಪ್ರದೇಶವೆಂದೇ ಗುರುತಿಸಲ್ಪರಡುತ್ತದೆ. ರಾಜಸತ್ತೆ ಕಳೆದು ಪ್ರಜಾಸತ್ತೆ ಜಾರಿಗೊಂಡರೂ ಈ ಪ್ರದೇಶದ ಸ್ಥಿತಿಗತಿಗಳು ಹೆಚ್ಚೇನು

ಸುಧಾರಣೆಗೊಂಡಿಲ್ಲ. ಆ ಕಾರಣದಿಂದಲೇ ಇಂದು ಕೇಂದ್ರ ಸರಕಾರ ೩೭೧ ಜೆ ವಿಧಿ ಅನ್ವಯ ವಿಶೇಷ ಸೌಲಭ್ಯ ನೀಡಿದೆ.

**ಕಥಾ ಸಾಹಿತ್ಯದ ಬೆಳವಣಿಗೆ :**

ಕನ್ನಡ ಸಾಹಿತ್ಯದಲ್ಲಿ ಕಥಾಗುಚ್ಛ ಇಂದಿಗೆ ಒಂದು ಸಾವಿರ ವರ್ಷಕ್ಕೂ ಹಿಂದೆಯೇ ರಚಿತವಾಯಿತೆಂದರೆ ನಂಬುಲು ಕಷ್ಟಕರವಾದ ಮಾತಾಗಿ ಕಾಣಬಹುದು. ಸು. ೯೨೫ ರಲ್ಲಿ ರಚಿತವಾದ ಶಿವಕೋಟ್ಯಾಚಾರ್ಯ ಎಂಬ ಜೈನ ಲೇಖಕನ ವಡ್ಡರಾಧನೆ ಕನ್ನಡದ ಮೊತ್ತ ಮೊದಲ ಸಣ್ಣಕಥೆಗಳ ಸಂಗ್ರಹ. ಇಂಗ್ಲಿಷ ಸಾಹಿತ್ಯದಲ್ಲಿ ಸಣ್ಣಕಥೆ ಪ್ರಾರಂಭವಾಗಲು ೧೭ನೇ ಶತಮಾನದವರೆಗೂ ಕಾಯಬೇಕಾಯಿತು ಎಂದರೆ ಕನ್ನಡ ವಡ್ಡರಾಧನೆಯ ಮಹತ್ವ ಅರಿವಾಗುತ್ತದೆ.

ಇಷ್ಟೊತ್ತು ಅತ್ಯಂತ ಜನಪ್ರಿಯವಾದ ಸಾಹಿತ್ಯದ ಪ್ರಕಾರವೆನಿಸಿ, ತನ್ನ ಆಂತರಿಕ ಶಿಸ್ತಿನ ಮೂಲಕ ಸ್ವಯಂಪೂರ್ಣವಾದ ಒಂದು ಕಲಾಕೃತಿಯಾಗಿ ಮಹತ್ತರ ಸ್ಥಾನವನ್ನು ಪ್ರಾಪ್ತವಾಗಿಸಿಕೊಂಡಿರುವುದು ಸಣ್ಣಕಥೆಯ ಹೆಗ್ಗಳಿಕೆಯಾಗಿದೆ. ಭಾಷೆ, ತಂತ್ರಗಳಷ್ಟೇ ಅಲ್ಲ ಸತ್ವದ ದೃಷ್ಟಿಯಿಂದ ಕಥೆಗಾರರು ಕಟ್ಟಿಕೊಡುವ ವಿಶಿಷ್ಟ ಅನುಭವಗಳಿಂದ ಸಂಸ್ಕೃತಿ, ತಾತ್ವಿಕ ನೆಲೆಯಿಂದ ಹೊಸ ಆಯಾಮವನ್ನು ದಕ್ಕಿಸಿಕೊಂಡಿರುವ ಸಣ್ಣಕಥೆ ತನ್ನದೆ ಆದ ಸ್ಥಾನದಲ್ಲಿ ಗಮನಾರ್ಹವೆನಿಸಿದೆ.

ಹೈದರಾಬಾದ್ ಕರ್ನಾಟಕದ ಕಥಾ ಸಾಹಿತ್ಯದಲ್ಲಿ ಮೊದಲಿಗೆ ದೊರೆಯುವ ಪ್ರಥಮ ಕೃತಿ ಚನಪನಹಳ್ಳಿ ಹಣುಮಂತರಾವ ದೇಸಾಯಿವರ "ಕಥಾ ಗೊಂಚಲು" ಸಂಕಲನವಾಗಿದೆ. ಇದನ್ನು ೧೯೨೫ರಲ್ಲಿ ರಾಚಯೂರು ವಿದ್ಯಾರ್ಥಿ ಸಂಘದವರು ಪ್ರಕಟಿಸಿದ್ದಾರೆ. ೧೯೫೫ರಲ್ಲಿ ರಂಗಪೇಟೆ, ಕನ್ನಡ ಸಾಹಿತ್ಯ ಸಂಘದಿಂದ "ಮಧುರ ಮಿಲನ" ಎಂಬ ಕಥಾ ಸಂಕಲನ ಪ್ರಕಟವಾಗಿದೆ. ಇದರಲ್ಲಿ ಸಗರ ಕೃಷ್ಣಾಚಾರ್ಯ, ಕೊಳ್ಳುರು ಶ್ರೀನಿವಾಸಚಾರ್ಯ ಮತ್ತು ಶಿವಕುಮಾರರ ಕಥೆಗಳಿವೆ. ಇವುಗಳೆಲ್ಲ ನವೋದಯದ ಆಶಯಗಳನ್ನು ಹೊತ್ತ ಕಥೆಗಳಾಗಿವೆ. ಹಳ್ಳಿಗರ ಪ್ರೇಮ, ಸೌಜನ್ಯದ ನಡತೆ, ವಿಷಮ ವಿವಾಹದಿಂದ ಸಮಾಜಕ್ಕೆ ತಗಲುವ ಹಾನಿ ಇದರಲ್ಲಿ ಚಿತ್ರಿತವಾಗಿದೆ.

೧೯೫೧ ರಲ್ಲಿ ಕೊಪ್ಪಳದ ಎ.ಬಿ. ಮುತ್ತಾಳರ 'ಕಳಚಲಿದೆ ರತ್ನ', 'ಶಿವಲೆಂಕರ 'ಅವಳೇ ಇವಳು' ೧೯೫೩ ರಲ್ಲಿ ದೇವೇಂದ್ರಕುಮಾರ ಹಕಾರಿ ಅವರು ಸಂಪಾದಿಸಿದ 'ಒರೆಗಲ್ಲು', ೧೯೬೦ ರಲ್ಲಿ ಸಗರ ಕೃಷ್ಣ ಅವರ 'ಆದರ್ಶ', ಪದ್ಮ ಪ್ರಕಟನಾಲಯದಿಂದ 'ತೊಟ್ಟಿಲು ತೂಗಿತು', ಭಾಗ್ಯೋದಯ ಗ್ರಂಥ ಮಾಲೆಯಿಂದ 'ಕತೆಗಾರ್ತಿ' ಎಂಬ ಸಂಕಲನಗಳು ಪ್ರಕಟಗೊಂಡ ವಿಷಯ ತಿಳಿದುಬರುತ್ತದೆ. ೧೯೫೮ರಲ್ಲಿ ಅ.ನ.ಕೃ. ನೆನಪಿಗಾಗಿ 'ಸನ್ಮಾನ' ಎಂಬ ಕಥಾ ಸಂಕಲನವೂ ಹೊರಬಂದಿತು. "ಕಥಾ ಸಮೂಹ" ಎಂಬ ಸಂಕಲನವನ್ನು ವಸಂತ ಕುಷ್ಟಗಿ, ಸ್ವಾಮಿರಾವ ಕುಲಕರ್ಣಿ, ರವೀಂದ್ರ ಕರ್ಜಗಿ ಎ.ಕೆ. ರಾಮೇಶ್ವರರ ಸಂಪಾದಕತ್ವದಲ್ಲಿ ೧೯೮೮ರಲ್ಲಿ ಹೊರತಂದರು. ರವೀಂದ್ರ ಕರ್ಜಗಿ ಅವರ ಸಂಪಾದನೆಯಲ್ಲಿ "ಅನುಭವ" ಎಂಬ ಸಂಕಲನ ಹೊರಬಂದಿತು.

ಮುಂದೆ ಚಿತ್ರಶೇಖರ ಕಂಠಿಯವರ ಸಂಪಾದಕತ್ವದಲ್ಲಿ "ಕಥಾ ಸೌಗಂಧ" ಎಂಬ ಸಂಕಲನ ಹಾಗೂ ೧೯೯೫ರಲ್ಲಿ ಅಮರೇಶ ನುಗಡೋಣಿಯವರ ಸಂಪಾದಕತ್ವದಲ್ಲಿ "ಬಿಸಿಲಹನಿಗಳು" ಎಂಬ ವಿಶಿಷ್ಟ ಮಾದರಿಯ ಸಂಕಲನ ಹೊರಬಂದಿವೆ. ಇದರಲ್ಲಿ ಇಪ್ಪತ್ತೈದು ಕಥೆಗಾರರ ಕಥೆಗಳಿಗೆ ನಾಡಿನ ಖ್ಯಾತ ವಿಮರ್ಶಕರಿಂದ ವಿಮರ್ಶಾ ಟಿಪ್ಪಣಿ ಸೇರಿಸಲಾಗಿದೆ. ಇದನ್ನು ಅಂದಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪಂಪಯ್ಯ ಶೆಟ್ಟಿ ಪ್ರಕಟಿಸಿದರು. ಇವೆಲ್ಲವೂ ಹೈದರಬಾದ್ ಕರ್ನಾಟಕ ಕಥಾಸಾಹಿತ್ಯದ ಬೆಳವಣಿಗೆಗೆ ಮೂಲ ನೆಲ ಹದ ಮಾಡಿದ ಹೆಜ್ಜೆಗುರುತುಗಳಾಗಿವೆ.

ಹೈದರಬಾದ್ ಕರ್ನಾಟಕದ ಕಥೆಗಾರರು ಹಾಗೂ ಅವರ ಕಥಾಸಂಕಲನಗಳು ಹೀಗಿವೆ.

ಅಮರೇಶ ಎನ್- ಮಣ್ಣು ಸೇರಿತು ಬೀಜ, ತಮಂಧದ ಕೇಡು, ಸವಾರಿ ಹಾಗೂ ಒಡಲ ಹಂಗು; ಅಪ್ಪರಾವ್ ಅಕ್ಕೋಣಿ - ಬಂಗಾರಿ, ಅರುಂಧತಿ; ಚಾಂದಕವಠೆ- ಬಾಂದವ್ಯ; ಅಲ್ಲಭಕ್ಷ ಲಾಡಸಾಬರ- ಬಾಳಸಂಗಾತಿ; ಆನಂದ ಸಿ.ಎಸ್- ಹಡೆದವ್ವ; ಆಂಜನೇಯ ಜಾಲಿಬೆಂಚಿ ಅಪ್ಪಮಗನ ಕಥೆಗಳು; ಬಸವರಾಜ ಮಠಪತಿ(ಕ್ಷಿತಿಜ)- ನೆರಳಿನಷ್ಟೇ ಕತ್ತಲು, ಅನರ್ಥ; ಬಾಲಚಂದ್ರ ಜಯಶೆಟ್ಟಿ ಕೋಡ್ಗಲ್ಲಿನ ಕೂಗು, ಮಿರ್ಚಿಬಾಬಾ ಮತ್ತು ಇತರ ಕಥೆಗಳು; ಬಿರೇದಾರ್ ಮ.ಗು.- ಬೆಳೆ-೨; ಬಸವರಾಜ ಕಂಠಿ ಗುಲಬಿಯ ಗುಚ್ಚ; ಚಂದ್ರಕಾಂತಪಾಟೀಲ- ಪರಿವರ್ತನೆ; ಚನ್ನಣ್ಣವಾಲೀಕಾರ- ಸಮಗ್ರ ಕಥಾಸಂಪುಟ; ದೇವೇಂದ್ರ ಕುಮಾರಹಕಾರಿ ಚಾಟಿ, ಒರೆಗಲ್ಲು; ದೇಶಪಾಂಡೆ ಎಂ.ಜಿ.- ಭ್ರಮೆ, ಪಾರಿಜಾತ, ದೇವಯಾನಿ, ಯಾವುದು ಸತ್ಯ; ಗಣಪತಿ ಭೂರೆ- ಸರಿದ ನಕ್ಷತ್ರ; ಗೀತಾ ನಾಗಭೂಷಣ ಕ್ಯಾದಿಗೆ ಬನದಾಗ ಕತೆಯಾಗಿ ನಿಂತವರು (ಸಮಗ್ರ ಕಥೆಗಳು); ಗುರುನಾಥ ಅಕ್ಕಣ್ಮ ಕಲ್ಲಣ್ಣನ ಕಾಂಪ್ಲೆಂಟ ಪ್ರಕರಣ ಮತ್ತು ಇತರ ಕಥೆಗಳು, ಯಾರನ್ನು ಪ್ರೀತಿಸಬೇಡ, ಇದು ಎಂಥಲೋಕವಯ್ಯಾ; ಜಯತೀರ್ಥರಾಜ ಪುರೋಹಿತ- ಪಾರವ್ವನ ಪಂಚಾಯಿತಿ, ರೋಹಿಣಿ, ಮೌಲ್ಯಗಳು ಶಿಥಿಲಶೀಲೆ; ಜ್ಯೋತಿ ಕುಲಕರ್ಣಿ ಜಗದಮಂಟಪದಮೇಲ್ಲೆ; ಕಲಿಗಣನಾಥ ಗುಡದೂರು ಉಡಿಯಲ್ಲಿಯ ಉರಿ, ಗಾಂಧಿ ಟೋಪಿ, ತೂತುಬೋಟ್ಟು, ಮಾಮೂಲಿ ಗಾಂಧೀ; ಕೃಷ್ಣಾನಾಯಕ ಕತ್ತಲು ಕರಗುವಪರಿ, ಲಧೇಣಿಯಾ; ಕೊರಗಲ್ ವಿರೂಪಾಕ್ಷಪ್ಪ-ನ್ಯಾಯ, ಮಣ್ಣಿನ ಗುಣ; ಖಬಾ ಬಿ.ಎಸ್.- ಪುರಸ್ಕಾರ, ಬಿಂಬ ಪ್ರತಿಬಿಂಬ; ಲಕ್ಷ್ಮೀದೇವಿ ಶಾಸ್ತ್ರಿ ಎಲ್ಲಾನಿನ್ನ ಹೆಸರಲಿ, ಹೃದಯಕ್ಕೆ ಹತ್ತಿರಾದವರು ಮತ್ತು ಇತರ ಕಥೆಗಳು, ಸುಸಂಸ್ಕೃತರು; ಲಲಿತಾನಾಯಕ ಬಿ.ಟಿ.- ಹಬ್ಬ ಮತ್ತು ಬಲಿ; ಲಲಿತಾ ಧೇಮಶೆಟ್ಟಿ ಮಾತಂಗಿ ಮತ್ತು ಇತರ ಕಥೆಗಳು, ವೈದೇವಿ; ಮಚ್ಛೇಂದ್ರ ಅಣಕಲ್- ಲಾಟರಿ; ಮಲ್ಲಪ್ಪ ಜಿ.ಎನ್.- ಪ್ರಪಾತ; ಮಲ್ಲಿಕಾರ್ಜುನ ಹಿರೇಮಠ ಅಮೀನಪುರದ ಸಂತೆ, ಲಕ್ಕವ್ವನಮಂದಿ; ಮಹಿಪಾಲರೆಡ್ಡಿ ಮೂನ್ನೂರ- ಬೆಳದಿಂಗಳ ಬೇಗುದಿ; ಮಹಾಂತೇಶ ಮಲ್ಲನಗೌಡ ಯುಟೋಪಿಯಾ; ನಿಂಗಣ್ಣ ಎಸ್.ಪಾಟೀಲ್- ಬರಿದಾದಮಡಿಲು; ನೀಲಾ. ಕೆ. ತಿಪ್ಪೆಯನರಸಿ ಮತ್ತು ಇತರ ಕಥೆಗಳು, ಕೊಂದಹರು ಉಳಿದರೆ; ಪಂಚಾಕ್ಷರಿ ಹಿರೇಮಠ- ಎನ್ನಲೇಕ ಮತ್ತು

ಇತರ ಕಥೆಗಳು, ಕ್ಷಿತಿಜ ಮತ್ತು ಇತರ ಕಥೆಗಳು (ಅನು), ಕಾಶ್ಮೀರದಹೂ (ಅನು), ಗುಲಾಬಿಹೂ (ಅನು); ಪ್ರಭು ಖಾನ್‌ಪುರೆ– ಒಡಲ ಕಿಡಿ ವುರಿಯಾಗಿ; ಪ್ರಮೀಳಾ ಜಾನಪ್ಪಗೌಡರ– ಮೊಗ್ಗು ಅರಳಿತು; ಪಾಟೀಲ್ ಎನ್.ಎಸ್. – ಸಾರ್ಥಕತೆ ಅರಸುತ್ತ; ಪ್ರಭಾಕರ ಜೋಶಿ – ರ್‍ಯಾಗಡೆಮಣ್ಣು; ರಕ್ಕೋದ್ದಿನ ಇಸ್ಲಾಂಪುರ– ಕಾರ್ಗತ್ತಲೆಯಿಂದ ಮಂಜು ಬೆಳಕಿನೆಡೆಗೆ; ರಾಜಶೇಖರ ನಿರಮಾನ್ವಿ– ಹಂಗಿನರಮನೆಯ ಹೊರಗೆ, ಕರ್ಪೂರದ ಕಾಯದಲ್ಲಿ; ರಾಜಶೇಖರ ಹತಗುಂದಿ– ಬಿಸಿಲ ಉಡಿಯ ಕಥೆಗಳು, ಹನಿ ತುಂಬಿದ ಮೊಡಗಳು; ರೂಪ ಕುಲಕರ್ಣಿ– ದೂಷಿತರು; ಸಗರ ಕೃಷ್ಣಚಾರ್ಯ– ಆದರ್ಶ, ಶಹಾಪುರ, ಸರಿತಾ ಕುಸಮಾಕರ ದೇಸಾಯಿ– ಕಾಶಿಯಲ್ಲಿ ಕಂಡದ್ದೇನು, ಮಿಡಿಗಾದ ಮಿಡುಕು, ಧ್ರುವ ಮಿಲನ, ನಾನುಲೆಕ್ಕಿ; ಸಂಧ್ಯಾಹೊನ ಗುಂಟಿಕರ್– ಕಡಲ ಒಡಲು ಬಗೆದಷ್ಟು, ಹಾರಲಾರದ ನೊಣ, ಹರಿದ ಹಾಸಿಗೆಯ ಹಂಗು; ಸಿದ್ಧಯ್ಯ ಪುರಾಣಿಕ– ತುಷಾರ ಹಾರ, ಕಥಾಮಂಜರಿ; ಸಿದ್ಧರಾಮ ಹೊನ್ಕಲ್– ಬಯಲಜಿತ್ತನೆ, ನೆಲದಮರೆಯ ನಿಧಾನ, ಕಥೆ ಕೇಳು ಗೆಳೆಯ; ಸುಬ್ಬಣ್ಣ ಅಂಬೆಸಂಗೆ– ಕಾಡಿನಲ್ಲಿ ಹಿಡಿದ ಗ್ರಹಣ ಗಂಗೆಯಲ್ಲಿ ಬಿಟ್ಟಿತು, ಅರಳು, ಚೇತನ; ಸೂಗಯ್ಯ ಹಿರೇಮಠ– ಅಂತರ, ಹುಳಗಳು, ಕಂಗಳಮುಂದಣ ಕತ್ತಲೆ, ನೀನ್ಯಾಕೊ ನಿನ್ನ ಹಂಗ್ಯಾಕೋ, ಅಂತರಂಗದ ಗುಡಿಯ ಒಳಗೆ; ಶಂಕರರಾವ್ ಉಭಾಳೇ– ನೀರಿಗೆ ಪಾಚಿವೈರಿ; ಶಾಂತರಸ– ಶಾಂತರಸರ ಸಮಗ್ರ ಕಥೆಗಳು; ಶಾಂತದೇವಿ ಕಣವಿ– ಜಾತ್ರೆ ಮುಗಿದಿತ್ತು; ಶ್ರೀಕಾಂತ ಪಾಟೀಲ್– ಬೆಂಕಿ ಮರೆಯ ತಂಪು, ಸರಣಿ ಕಥಾ ಸಂಕಲನ; ಶಿವಕುಮಾರ ನಾಗವರ್– ಏಳೂರು ಸರಪಂಚ, ಹಣದಿ; ಶಿವಪ್ರಸಾದ್ ಹಾದಿಮನಿ– ಹೆಜ್ಜೆ; ಶಿವರಾಜ ಪಾಟೀಲ– ಶಿವರಾಜ ಪಾಟೀಲರ ಕಥೆಗಳು; ಶಿವಲೆಂಕರ (ಶಂಕ್ರಪ್ಪ)– ಅವಳೇ–ಇವಳು; ಶ್ರೀನಿವಾಸ ಕುಲಕರ್ಣಿ– ಬಾಳುನಂಜು ಬಯಕೆಮಂಜು, ಫಲಿತಾಂಶ, ಅಂಗೈ ತುಂಬಾ ಆಕಾಶ, ಚಿತ್ತಾ ಚಿತ್ತಾರಗಳು, ಯಾರು ಹೊಣೆ; ವಾಡಪ್ಪಿ ಬಿ.ಆರ್.– ಜೀವನ ತರಂಗ, ಯಾರುಹೊಣೆ; ವಿಠ್ಠಪ್ಪ ಗೋರಂಟ್ಲಿ– ಸೆರೆವೀರನಗೌಡ ಗುಮಗೇರಿ– ಬರಿಮೈ ಭರಮಣ್ಣ, ಬಿರುಕು ಭೂಮಿ; ವಿಸಾಜಿ ಜೆ.ಬಿ. ಅನಂತಸಂಗಮ. ಹೀಗೆ ಕಥಾಸಂಕಲನಗಳು ಕಾಣಸಿಗುತ್ತವೆ. ಜೊತೆಗೆ ಸಾಕಷ್ಟು ಬಿಡಿ ಕಥೆಗಳು ಸಹ ಪ್ರಕಟವಾಗಿವೆ.

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ನೆಲೆಸಿ ಆ ಸ್ಥಳೀಯ ಪ್ರಭಾವಕ್ಕೆ ಪ್ರೇರಣೆಗೆ ಒಳಗಾಗಿ ರಚಿಸಿದ ಕಥೆಗಾರರ ಕಥಾ ಸಂಕಲನಗಳು ಜೊತೆಗೆ ಬೇರೆ ಕಡೆಯಿಂದ ಬಂದು ಈ ಪರಿಸರಕ್ಕೆ ಹೊಂದಿಕೊಂಡು ಇಲ್ಲಿಯ ಪ್ರೇರಣೆಯಿಂದ ರಚಿಸಲಾದ ಕಥಾ ಸಂಕಲನಗಳನ್ನು ಇಲ್ಲಿ ಗುರಹುತಿಸಲಾಗಿದೆ.

**ಸ್ತ್ರೀವಾದಿ ಪರಿಕಲ್ಪನೆ :**

ಸಾಹಿತ್ಯದಲ್ಲಿ ಹೆಣ್ಣನ್ನು ಪ್ರತಿನಿಧಿಸುವಾಗ ಆಕೆಯನ್ನು ಅನ್ಯವೆಂದು, ಕೊರತೆಯೆಂದು, ನಿಸರ್ಗದ ಭಾಗವೆಂದು ಚಿತ್ರಿಸುವುದನ್ನು ಪ್ರಶ್ನಿಸುವುದು ಸ್ತ್ರೀವಾದದ ಕಾರ್ಯವಾಗಿದೆ. ಸ್ತ್ರೀವಾದದ ಅಂತಿಮ

ಗುರಿ ಮಹಿಳಾ ಸಮಾನತೆ, ಸ್ತ್ರೀ ಕೇಂದ್ರಿತವಾದ ಚಿಂತನೆಯಲ್ಲಿ ತೊಡಗುವ ಸ್ತ್ರೀವಾದ ಈ ಆಶಯವನ್ನು ಹೊಂದಿದೆ. ಈ ಹಿನ್ನೆಲೆಯಲ್ಲಿ ಕೆಲವು ಪರಿಕಲ್ಪನೆಗಳನ್ನು ಸ್ಪಷ್ಟಪಡಿಸಿಕೊಳ್ಳುವುದು ಉಚಿತ, ಅವುಗಳೆಂದರೆ ಸ್ತ್ರೀ, ಸ್ತ್ರೀತ್ವ ಮತ್ತು ಸ್ತ್ರೀವಾದಿತ್ವ

ಸ್ತ್ರೀ : ಇದು ಜೈವಿಕ ಸಂಬಂಧಿಯಾಗಿ ಬಳಕೆಯಾಗುವ ಪದ.

ಸ್ತ್ರೀತ್ವ : ಇದು ಸಾಂಸ್ಕೃತಿಕವಾಗಿ ಕಟ್ಟಲಾದುದು ಎಂದರೆ ಸ್ತ್ರೀಯಲ್ಲಿ ಏನೇನು ಗುಣಗಳು, ಲಕ್ಷಣಗಳು ಇರಬೇಕು ಎಂದು ಸಮಾಜ ಒಪ್ಪಿ ನಿರ್ದೇಶಿಸಿ ರೂಪುಗೊಳಿಸಿರುತ್ತದೋ ಅವೆಲ್ಲವುಗಳ ಮೊತ್ತ.

ಈ ಸ್ತ್ರೀತ್ವದ ಪರಿಕಲ್ಪನೆಯು ನೈಸರ್ಗಿಕವಾಗಿ ಬಂದುದಲ್ಲ. ಜೈವಿಕ ಭಿನ್ನತೆಯನ್ನೇ ಕೇಂದ್ರವಾಗಿಟ್ಟುಕೊಂಡು, ಸಾಮಾಜಿಕ ನೆಲೆಯ ತಾರತಮ್ಯವೇ ಸ್ತ್ರೀತ್ವದಂಥ ಪರಿಕಲ್ಪನೆಯನ್ನು ಹುಟ್ಟುಹಾಕಿದೆ 'ಸ್ತ್ರೀತ್ವ' ಎಂಬುದು ಸಾಮಾಜಿಕತೆಯ ಸೃಷ್ಟಿ ಎಂಬುದನ್ನು ಸ್ತ್ರೀವಾದಿಗಳು ಸ್ಪಷ್ಟಪಡಿಸಿದ್ದಾರೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿಗೆ ಹೊರಿಸಲಾದ ಸ್ತ್ರೀತ್ವದ ಪಟ್ಟಿಯು ಅವಳ ಸಾಮಾಜಿಕ ನೆಲೆಯ ಗುಣಗಳನ್ನು ಪ್ರತಿನಿಧಿಸುವಂತಾಗಿದೆ. ಪುರುಷ ಸಂಸ್ಕೃತಿಯು ಸ್ತ್ರೀತ್ವದ ಹೆಸರಿನಲ್ಲಿ ಹೆಣ್ಣಿಗೆ ಕೆಲವು ಗುಣಗಳನ್ನು ಆರೋಪಿಸಿ ನಿಗದಿಪಡಿಸಲಾಗಿದೆ. ಅಲ್ಲದೇ ಸಾಮಾಜಿಕ ವ್ಯವಸ್ಥೆಯಲ್ಲಿ ಅಧಿಕಾರ ನೆಲೆಯಿಂದ ವಂಚಿತಳಾದ ಹೆಣ್ಣು ಸಹಜವಾಗಿಯೇ ಅವುಗಳೆಲ್ಲವುಗಳನ್ನು ಹೆಣ್ಣು ಗುಣಗಳೆಂದು ಆವಾಹಿಸಿಕೊಳ್ಳುವಂತಾಗಿದೆ. ಹೀಗೆ ವಹಿಸಲಾದ ಜವಾಬ್ದಾರಿಗಳನ್ನು ಮರೆಮಾಚುವುದಕ್ಕೆ ಅವುಗಳನ್ನು ಹುಟ್ಟಿಸಿ, ಅದನ್ನು ಪೋಷಿಸುತ್ತಲೇ ಇದೆ. ಹಾಗಾಗಿ ಸ್ತ್ರೀವಾದವು ಸ್ತ್ರೀತ್ವದ ಅಡಿಯಲ್ಲಿ ನಿರ್ವಹಿಸಲಾಗುವ ಪಾತ್ರಗಳನ್ನು 'ಸ್ಥಿರಮಾದರಿ' ಪಾತ್ರಗಳೆಂದು ಹೆಸರಿಸಿದೆ. ಜನನದಿಂದ ಮರಣದವರೆಗೂ ಅವಳು ಅನಿವಾರ್ಯವಾಗಿ ಅವುಗಳನ್ನು ನಿಭಾಯಿಸಬೇಕಾಗಿದೆ. ವಾಸ್ತವದಲ್ಲಿನ ಹೆಣ್ಣು ಜೀವಿಗಳನ್ನು ಗಮನಿಸಿದರೆ, ನಿಜವಾಗಿಯೂ ಅವುಗಳು ಹೆಣ್ಣು ಗುಣಗಳೇ ಎಂಬಷ್ಟು ಗಾಢವಾದ ತರಬೇತಿಯನ್ನು ಹೆಣ್ಣಿನಿಂದ ಹೆಣ್ಣಿಗೆ ಪುರುಷ ಸಮುದಾಯಕ್ಕೋಸ್ಕರ ನೀಡಲಾಗುತ್ತದೆ. ಆದ್ದರಿಂದಲೇ ಮಗಳು, ಅಕ್ಕ, ತಂಗಿ, ಹೆಂಡತಿ, ಸೊಸೆ, ವೇಶ್ಯೆ ಮೊದಲಾದ ಪಾತ್ರಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಇವುಗಳಿಗೆ ಪೂರಕವಾಗಿ ತಾಳ್ಮೆ, ತ್ಯಾಗ, ಸೇವಾ ಮನೋಭಾವ ಚಂಚಲತೆ, ಭಾವುಕತೆಯಂತಹ ಗುಣಗಳೇ ಹೆಣ್ಣಿನ ಗುಣಗಳು ಇವುಗಳು ಸ್ತ್ರೀತ್ವವನ್ನು ಪ್ರತಿನಿಧಿಸುತ್ತವೆ. ಸ್ತ್ರೀವಾದಿಗಳು ಇದರ ಹಿಂದೆ ಇರುವ ಪುರುಷ ರಾಜಕಾರಣವನ್ನು ಶೋಧಿಸಿ, ಗಂಡು ತನ್ನ ಅನುಕೂಲಗಳಿಗೆ ತಕ್ಕಂತೆ ಒದಗಿಸುವ ಸೇವೆಗಳಿಗಾಗಿ ಸ್ತ್ರೀತ್ವ ಎಂಬ ಹೆಸರಿನಡಿಯಲ್ಲಿ ಹೆಣ್ಣು ಗುಣಗಳೆಂಬಂತೆ ಹೆಣ್ಣನ್ನು ಸಾಮಾಜಿಕ ವ್ಯವಸ್ಥೆಯಲ್ಲಿ ಬಿಂಬಿಸಲಾಗಿದೆ. ಇದನ್ನು ನಿವಾರಿಸಲು ಅದರೊಳಗಿದ್ದೇ ತನ್ನನ್ನು ತಾನು ಗುರುತಿಸಿಕೊಳ್ಳಬೇಕು ಎಂದು ಸ್ತ್ರೀವಾದಿಗಳು ವಾದಿಸುತ್ತಾರೆ. ಆದರೆ ಸ್ತ್ರೀತ್ವವೆಂಬುದು

ಪುರುಷಾರೋಪಿತ ಗುಣ, ಇದರಡಿಯಲ್ಲಿಯೇ ವ್ಯಾಖ್ಯಾನಿಸಿಕೊಳ್ಳಲು ಹೋಗಿ ಇದರ ಸುತ್ತಲು ಸುತ್ತುವರಿಯುವುದನ್ನು ಹೊರತುಪಡಿಸಿ ವಿವೇಚನೆಯ ಮಾರ್ಗಗಳನ್ನು ಕಂಡುಕೊಳ್ಳುವುದು ಸೂಕ್ತ ಎಂಬುದು ಸ್ತ್ರೀವಾದಿಗಳ ವಾದ.

ಸ್ತ್ರೀವಾದಿತ್ವ : ಸಮಾಜ ಮತ್ತು ಸಂಸ್ಕೃತಿಗಳೊಳಗೆ ಅಡಕವಾಗಿರುವ ಲಿಂಗಾಧರಿತ ಅಸಮಾನತೆನಗಳನ್ನು ಹುಡುಕಿ ತೆಗೆದು, ಅವುಗಳನ್ನು ವಿರೋಧಿಸುವ ಮತ್ತು ನಿವಾರಿಸಬಯಸುವ ನೆಲೆ, ಇದೊಂದು ರಾಜಕೀಯ ಸಿದ್ಧಾಂತವಾಗಿ ಕೂಡ ಕೆಲಸ ಮಾಡುತ್ತದೆ.

ಸ್ತ್ರೀವಾದಿ ತಾತ್ವಿಕತೆಯು ಏಕಕಾರ ಹೊಂದಿದ್ದಲ್ಲ. ಅದು ಬಹುಮುಖಿ, ಬಹು ವ್ಯಾಪಕವಾದ ಶಿಸ್ತು ಅದೇ ರೀತಿಯಲ್ಲಿ ಸ್ತ್ರೀವಾದ ವಿಮರ್ಶೆಯ ಕುರಿತು ಇದಮಿತ್ಥಂ ಎಂದು ಹೇಳಲು ಬರುವುದಿಲ್ಲ. ಈ ಬಗೆಯ ಸಂಕೋಚನ ವಿಕಸನಕ್ಕೆ ಒಗ್ಗಿಕೊಳ್ಳುವ ಚಿಂತನೆಗೆ ಹಲವು ಪ್ರಯೋಜನಗಳಿರುವಂತೆ ಮಿತಿಗಳು ಇರುತ್ತವೆ. ಆದುದರಿಂದ ಸ್ತ್ರೀವಾದಿ ತಾತ್ವಿಕತೆಯನ್ನು ಸ್ತ್ರೀವಾದಿ ಚಿಂತಕಿಯರು, ಲೇಖಕಿಯರು, ಮಹಿಳಾ ಚಳುವಳಿಯ ಧೋರಣೆಗಳು ಇವೆಲ್ಲವುಗಳ ನೆಲೆಯಲ್ಲಿ ವಿವೇಚಿಸಬೇಕಾಗುತ್ತದೆ.

**ಮಹಿಳಾ ಸಂವೇದನೆ :**

ಮಹಿಳಾ ಸಂವೇದನೆ ಎಂದರೇನೇ ಈ ಹೊತ್ತು ಮಹಿಳಾಪರ ಚಿಂತನೆ, ಕಾಳಜಿ, ಹೋರಾಟ ಎಂದು ಅರ್ಥೈಸುವುದರೊಂದಿಗೆ ಮಹಿಳೆಯರ ಸೂಕ್ಷ್ಮಾತಿಸೂಕ್ಷ್ಮ ಭಾವನಾತ್ಮಕ ಎಳೆಗಳ ತಂತುಗಳನ್ನು ಗುರುತಿಸುವುದು ಎಂದು ತಿಳಿದುಕೊಂಡರೆ ಹೆಚ್ಚು ಫಲದಾಯಕವೆಂದು ತೋರುತ್ತದೆ. ಇತ್ತೀಚೆಗೆ ಎರಡೂವರೆ ದಶಕಗಳಿಂದ ಮಹಿಳಾವಾದಿ ಚಿಂತನೆಯು ಹುಟ್ಟಿಕೊಂಡಿದೆ. ಪರಿಣಾಮ ಮಹಿಳಾಪರ ಹೋರಾಟಗಳು, ಮಹಿಳಾವಾದಿ ಚಳುವಳಿಗಳು, ಮಹಿಳಾವಾದಿಚಿಂತಕರ ವಿಚಾರಧಾರೆಗಳು ಸ್ಫೂರ್ತಿಯಾಗಿರುವುದನ್ನು ಮನಗಾಣಬಹುದು.

ಮಹಿಳಾ ಸಂವೇದನೆಯ ಮಾತು ಇತ್ತೀಚಿನದಾದರೂ ಸಂವೇದನೆ ಇತ್ತೀಚಿನದಲ್ಲ, ಅದರ ಸ್ವರೂಪ ಕಾಲದಿಂದ ಕಾಲಕ್ಕೆ ಬೇರೆಯಾಗಿರಬಹುದು. ಮಹಿಳಾ-ಸಂವೇದನೆ ಎಂದು ಈಗ ಗುರುತಿಸುವ ಪರಿಭಾಷೆ ಕಲ್ಪನೆಗಳನ್ನು ಸ್ಪಷ್ಟಪಡಿಸಿಕೊಂಡು ಹಿಂದಿನ ಸಾಹಿತ್ಯದ ಅಭಿವ್ಯಕ್ತಿಯನ್ನು ನೋಡಿದಾಗ, ಇದಕ್ಕೆ ಒಪ್ಪದ ಅನೇಕ ವಿಷಯಗಳು ಹೊರಬೀಳಬಹುದು. ಇಂಥ ಅಧ್ಯಯನದ ನೆಲೆಯಲ್ಲಿ ಹೊರಹಾಕುವ ಪ್ರಕ್ರಿಯೆಯೇ ಈ ಚಿಂತನೆಯ ತುಡಿತವಾಗಿದೆ.

ಅನಾದಿಕಾಲದಿಂದಲೂ ಮಹಿಳೆ ತನ್ನೆಲ್ಲವನ್ನು ಇಲ್ಲವಾಗಿಸಿಕೊಂಡು, ಪುರುಷ ಪ್ರಧಾನ ವ್ಯವಸ್ಥೆಯ ವಿಷಚಕ್ರದಲ್ಲಿ ಬಂಧಿಯಾಗಿ ಪಶುವಿನಂತೆ ಬದುಕು ಸವೆಸಿದ್ದಾಳೆ. ಜ್ಞಾನದ ಕೊರತೆಯಿಂದ ಮಹಿಳೆಯು ತನ್ನ ಸ್ಥಿತಿಗತಿಯ ಬಗ್ಗೆ ಎಚ್ಚೆತ್ತುಕೊಳ್ಳಲು ಸಾಧ್ಯವಾಗಿರಲಿಲ್ಲ. ಆದರೆ ಪ್ರಸ್ತುತ ಪರಿಸ್ಥಿತಿಯಲ್ಲಿ

ಮಹಿಳೆ ಪುರುಷನಿಗೆ ಸಮಾನವಾಗಿ ಎಲ್ಲಾ ಕ್ಷೇತ್ರದಲ್ಲಿ ದುಡಿಯುತ್ತಿದ್ದಾಳೆ. ಇದಕ್ಕೆ ಆಕೆಗೆ ದೊರೆತಿರುವ ಜ್ಞಾನ ಮತ್ತು ವಿಚಾರವೇ ಕಾರಣ ಅಕ್ಷರ ಜ್ಞಾನ ಪಡೆದು ಪುರುಷನ ಸರಿಸಮಾನ ನಿಂತ ಸ್ತ್ರೀಯರ ಪ್ರಮಾಣ ಕಡಿಮೆ ಎಂದೇ ಹೇಳಬಹುದು.

ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ತುಳಿತಕ್ಕೊಳಗಾದ ಮಹಿಳೆಯನ್ನು ಸಾಹಿತ್ಯದ ಮೂಲಕ ಶೋಷಣೆಯನ್ನು ಕಳಚಲು ಪುರುಷ ಮತ್ತು ಮಹಿಳೆಯರು ಸೇರಿ ಹೊಡೆದೋಡಿಸುವುದೇ ಮಹಿಳಾ-ವಾದ ಎಂಬುದಾಗಿ, ಮಹಿಳಾ-ಪರವಾದ ಕಾಳಜಿ, ಕಳಕಳಿ, ನೋವು, ನಲಿವುಗಳಿಗೆ ಸ್ಪಂದಿಸುವುದೇ ಮಹಿಳಾ ಸಂವೇದನೆಯಾಗಿದೆ ಎಂದು ತಿಳಿಯಬಹುದು.

♦ ♦ ♦

## ಅಧ್ಯಾಯ : ನಾಲ್ಕು

# ಕಥಾ ಸಾಹಿತ್ಯದ ವಸ್ತು ವೈವಿಧ್ಯತೆ

ಸಾಹಿತಿ ಸಮಾಜದ ಒಂದು ಅಂಗ. ಅವನಿಗೆ ಮನಸ್ಸಿರಲಿ ಬಿಡಲಿ ಅದರ ಆಗು ಹೋಗುಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾನೆ. ತನ್ನ ಸುತ್ತಮುತ್ತಲಿನ ಸಾಮಾಜಿಕ ಪರಿಸರದ ಪ್ರಭಾವಕ್ಕೊಳಡುತ್ತಲೇ ಅವನು ಹೆಚ್ಚು ಸಂವೇದನಾ ಶೀಲನಾಗಿರುವುದರಿಂದ ಸಮಾಜದಲ್ಲಿ ನಡೆಯುವ ಪ್ರತಿಯೊಂದು ಸೂಕ್ಷ್ಮಕ್ರಿಯೆಗಳಿಗೂ ತೀಕ್ಷ್ಣವಾಗಿ ಸ್ಪಂದಿಸುತ್ತಾನೆ. ಅದನ್ನು ಬರಹದ ಮೂಲಕ ಅಭಿವ್ಯಕ್ತಿಸುವಾಗ ಸಾಮಾಜಿಕ ವ್ಯವಸ್ಥೆಯನ್ನು ಸಮರ್ಥಿಸಿ ಕೊಳ್ಳಬಹುದು. ಅಥವಾ ಪ್ರತಿರೋಧಿಸಬಹುದು, ವಿಮರ್ಶಿಸಬಹುದು. ಹೀಗೆ ಏನನ್ನು ಮಾಡುವ ಸ್ವಾತಂತ್ರ್ಯ ಅವನಿಗಿರುತ್ತದೆ. ಸಾಮಾಜಿಕ ಸಮಸ್ಯೆಗಳನ್ನು ವಸ್ತುವಾಗಿಟ್ಟುಕೊಂಡು ಒಬ್ಬ ಸಾಹಿತಿ ಬರೆಯುವಾಗ ಆ ಸಮಸ್ಯೆಗೆ ತನ್ನದೆಯಾದ ರೀತಿಯಲ್ಲಿ ಉತ್ತರ ಹುಡುಕುತ್ತಾನೆ. ಅಥವಾ ಸಮಸ್ಯೆಗಳನ್ನು ಅನಾಮತ್ತಾಗಿ ಎತ್ತಿಟ್ಟು ಉತ್ತರವನ್ನು ಕಂಡುಕೊಳ್ಳುವ ಕೆಲಸ ಓದುಗನಿಗೆ ಬಿಡಬಹುದು. ನಿಂತ ನೀರಿನಂತೆ, ಕೊಳೆತುನಾರುವ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಸೃಜನಶೀಲ ಸಾಹಿತಿ ಯಾವಾಗಲೂ ಸಂಘರ್ಷಕ್ಕಿಳಿಯುತ್ತಿರುತ್ತಾನೆ. ತನ್ನ ಸಂಘರ್ಷವನ್ನು ವಸ್ತುವನ್ನಾಗಿಸಿಕೊಂಡು ಕೃತಿಗಿಳಿಸುವ ಕ್ರಿಯೆಯನ್ನೇ ಸಾಮಾಜಿಕ ಪ್ರಜ್ಞೆ ಎನ್ನಲಾಗಿದೆ.

ಅನುಭವಗಳು ಅಭಿವ್ಯಕ್ತಿಯೇ ಸಾಹಿತ್ಯ ಎಂದರು ಸಹ ಒಬ್ಬ ಸೃಜನಶೀಲ ಬರಹಗಾರನ ಎಲ್ಲ ಅನುಭವಗಳು ಸಾಹಿತ್ಯವಾಗುವುದಿಲ್ಲ. ಅನುಭವದ ಅಭಿವ್ಯಕ್ತಿಯು ಕಲಾತ್ಮಕವಾಗಿರಬೇಕಾದದ್ದು ಅವಶ್ಯಕ. ಒಬ್ಬ ಸೃಜನಶೀಲ ಬರಹಗಾರನ ಅನುಭವಗಳು ಸ್ವಾನುಭವಗಳಾಗಿರಬಹುದು ಅಥವಾ ಇನ್ನೊಬ್ಬರಿಂದ ಕೇಳಿ ಇಲ್ಲವೇ ನೋಡಿ ಮತ್ತು ಓದಿ ತಿಳಿದುಕೊಂಡವುಗಳಾಗಿರಬಹುದು. ಹೀಗೆ ಅನುಭವಿಸಿದ್ದು, ಕಂಡದ್ದು, ಕಲ್ಪಿಸಿದ್ದು ಸೇರಿ ಕುಸುರಿನ ರೂಪತಾಳಿ ಯಾವುದೇ ಒಂದು ಮಾಧ್ಯಮದಲ್ಲಿ ಅದು ಮೂಡಿನಿಂತಾಗ ಅದಕ್ಕೊಂದು ವಿಶಿಷ್ಟವಾದ ಹೆಸರು ಪ್ರಾಪ್ತವಾಗುತ್ತದೆ.

ಹೀಗೆ ಹೆಸರಿನ್ನಿಟ್ಟುಕೊಂಡು ಮೂಡಿಬಂದ ಕನ್ನಡದ ಹಲವು ಸಾಹಿತ್ಯ ರೂಪಗಳಲ್ಲಿ ಸಣ್ಣ ಕಥೆಯೂ ಒಂದಾಗಿದೆ. ಕಥಾ ಸಾಹಿತ್ಯದಲ್ಲಿ ವಸ್ತುವಿಗೆ ಬಹಳ ಮಹತ್ವವಿದೆ. "ಕಥೆಗಾರ ತಾನು ನೋಡುವ ರೀತಿ ತನ್ನ ಸಂಸ್ಕಾರ, ತನ್ನ ಪರಿಸರ, ಪ್ರಭಾವ, ತನ್ನ ವರ್ಗ ಪ್ರಭಾವ, ಭಾಷೆ ಇವುಗಳ ಹಿನ್ನೆಲೆಯಲ್ಲಿ ಕಥಾವಸ್ತುವನ್ನು ಆಯ್ದುಕೊಳ್ಳುತ್ತಾನೆ."[೧] "ಸಾಹಿತ್ಯ ಬದುಕಿನ ಚಿತ್ರಶಾಲೆ. ಅಲ್ಲಿ ಬದುಕಿನ ವಿಭಿನ್ನ ಚಿತ್ರಣಗಳನ್ನು ಕಾಣಲು ಸಾಧ್ಯ ಇಲ್ಲಿ ಕಲೆಗಾಗಿ ಕಲೆ ಎಂಬ ನಂಬಿಕೆಯನ್ನು ಹುಸಿಯಾಗಿ, ಬದುಕಿಗಾಗಿ ಕಲೆ ಎಂಬ ಹೊಸ ಸಿದ್ಧಾಂತವನ್ನು ಸೃಜಿಸುತ್ತದೆ. ಈ ದೃಷ್ಟಿಯಿಂದ ಸಾಹಿತ್ಯ ದೇಹಕ್ಕೆ ಬದುಕೇ ಉಸಿರು"[೨] ಎನ್ನುವುದು ಸತ್ಯವಾಗಿದೆ.

ಬದುಕೇ ಸಾಹಿತ್ಯದ ವಸ್ತು-ವಿಷಯ ಎಂಬುದು ನಿಜವಾದರೂ ಇದು ಅಸ್ಪಷ್ಟ, ಬದುಕನ್ನು ನೋಡುವ ಮಟ್ಟಿಗೆ ಮಾತ್ರ ಅನುಭವವು ಸಾಹಿತಿಗೆ ಅವಶ್ಯಕ. ಆದರೆ ಸ್ವಂತ ಅನುಭವವೊಂದೇ ಸಾಹಿತ್ಯದ ವಸ್ತುವಾಗುವುದಿಲ್ಲ. ಒಬ್ಬನ ಅನುಭವವು ಅವನ ಮಟ್ಟಿಗೆ ಎಷ್ಟೇ ಮಹತ್ವದ್ದಾದರೂ ಅದು ಸಾರ್ವತ್ರಿಕ ಅನುಭವವಾಗಿ ಬದಲಾಗುವ ತನಕ ಅದಕ್ಕೆ ಜೀವನವೆಂಬ ವಿಶೇಷ ಮೌಲ್ಯ ಬರುವುದಿಲ್ಲ. ಅಲ್ಲದೆ ಅದು ಸಾಹಿತ್ಯದ ವಸ್ತವಾಗುವುದಿಲ್ಲ. "ಒಮ್ಮೆ ಸಾರ್ವತ್ರಿಕ ಬದುಕಿನೊಂದಿಗೆ ತನ್ನ ಅರ್ಥವನ್ನು ಕಂಡು ಕೊಂಡಿತೆಂದರೆ ಆಗ ಅದು ಶುದ್ಧ ವೈಯಕ್ತಿಕವಾಗಿ ಉಳಿಯುವುದಿಲ್ಲ"[೩] ಈ ಮಾತಿನ ಅರ್ಥ ವೈಯಕ್ತಿಕ ಆಯಾಮದಿಂದ ಸಾರ್ವತ್ರಿಕ ವಲಯ ಪ್ರವೇಶಿಸಿದಾಗ ಇಂಥ ಅನುಭವಗಳು ಸಾಹಿತ್ಯಕ್ಕೆ ವಸ್ತುಗಳಾಗುತ್ತವೆ. ಈ ಹಿನ್ನೆಲೆಯಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದ ಕಥಾ ಸಾಹಿತ್ಯವನ್ನು ಈ ವಿಷಯ ವಸ್ತುಗಳ ಮೇಲೆ ಚರ್ಚಿಸಲಾಗುತ್ತದೆ.

**ಗ್ರಾಮೀಣ ಬದುಕು:**

ಗ್ರಾಮೀಣ ಜನರ ಜೀವನ, ನಗರ ಜನರ ಜೀವನಕ್ಕಿಂತ ತುಂಬಾ ಭಿನ್ನವಾಗಿದ್ದು, ತನ್ನದೇ ಆದ ವಿಶಿಷ್ಟತೆಯಿಂದ ಕಂಗೊಳಿಸುತ್ತದೆ. ಸಮಾಜದ ಹಲವಾರು ವರ್ಗಗಳು ಗ್ರಾಮಗಳಲ್ಲಿ ಸಹಕಾರ, ಸಹೋದರತೆ, ಪ್ರೀತಿ, ವಿಶ್ವಾಸದಿಂದ ಒಬ್ಬರಿಗೊಬ್ಬರು ಸೌಹಾರ್ದತೆಯಿಂದ ಜೀವನ ಸಾಗಿಸುತ್ತಿರುವ ನಮ್ಮ ಮುಗ್ಧ ಹಳ್ಳಿಗರದು ಉನ್ನತ ಸಂಸ್ಕೃತಿಯಾಗಿದೆ. ಎಲ್ಲಾ ವರ್ಗದ ಜನರು ತಮ್ಮ ಸಂಸ್ಕೃತಿ, ಆಚಾರ, ವಿಚಾರ, ನಂಬಿಕೆಗಳ ತಳಪಾಯದಲ್ಲಿಯೇ ಬದುಕುತ್ತಾ ಮತ್ತೊಬ್ಬರೊಂದಿಗೆ ಸಹಕಾರ ಭಾವನೆಯಿಂದ ನಡೆದುಕೊಳ್ಳುವ ಅಂಶ ಪ್ರಸ್ತುತ ಬದುಕಿನಲ್ಲಿ ಕಂಡು ಬರುತ್ತದೆ. ಸಮಾಜದಲ್ಲಿ ಸಣ್ಣ-ಪುಟ್ಟ ಜಗಳ, ಸಂಘರ್ಷ, ಸಿಟ್ಟು-ಸಿಡುಕುಗಳು ಇರುವುದು ಸಹಜ. ಏಕೆಂದರೆ ಹಲವಾರು ಜನಾಂಗದ ಜನರು ಕೂಡಿಯೇ ವ್ಯವಹರಿಸುತ್ತಾರೆ. ಆದರೆ ಇಂಥ ಕ್ಷುಲ್ಲಕ ವಿಷಯಗಳಿಗೆ ಹೆಚ್ಚಿನ ಗಮನ ಕೊಡದೇ ಗ್ರಾಮದ ಸಮಸ್ತ ಹಿರಿಯರು ಮುಂದೆ ಬಂದು ಪರಸ್ಪರರಲ್ಲಿ ಭಾತೃತ್ವ ಭಾವನೆ ಬೆಳೆಸಿ ಒಟ್ಟಿಗೆ ನಗು-ನಗುತ್ತಾ ಹಬ್ಬ-ಹರಿದಿನ, ಜಾತ್ರೆ-ಉತ್ಸವಗಳನ್ನು ಆಚರಿಸುವುದು ಕಂಡು

ಬರುತ್ತದೆ. ಇದು ನಮ್ಮ ಹಳ್ಳಿಗರಲ್ಲಿಯ ಒಕ್ಕಟ್ಟನ್ನು ಸೂಚಿಸುತ್ತದೆ. ಈ ಒಗ್ಗಟ್ಟೆ ಒಂದು ನಾಡಿನ ಪ್ರಗತಿಯ ಆಧಾರ ಸ್ತಂಭವಾಗಿದೆ.

ಗ್ರಾಮೀಣ ಜನರ ಜೀವನದ ಜೀವಂತ ಚಿತ್ರಣವನ್ನು ಒಳಗೊಂಡ ಹಲವಾರು-ಕಥೆಗಳನ್ನು ಹೈದರಬಾದ್ ಕರ್ನಾಟಕದ ಕಥೆಗಾರರು ಬರೆದಿದ್ದಾರೆ. ಅಂಥವರಲ್ಲಿ ಗೀತಾ ನಾಗಭೂಷಣ, ಚೆನ್ನಣ್ಣ ವಾಲೀಕಾರ, ಚಿತ್ರಶೇಖರ ಕಂಠಿ, ಸೂಗಯ್ಯ ಹಿರೇಮಠ, ಭಾಲಚಂದ್ರ ಜಯಶೆಟ್ಟಿ, ಸುಬ್ಬಣ್ಣ ಅಂಬೆಸಂಗೆ, ಶ್ರೀಕಾಂತ ಪಾಟೀಲ, ಶಿವಕುಮಾರ ನಾಗವಾರ, ಬಿ.ಟಿ. ಲಲಿತಾ ನಾಯಕ, ಅಮರೇಶ ನುಗಡೋಣಿ, ಶಾಂತರಸ, ಮಲ್ಲಿಕಾರ್ಜುನ ಹಿರೇಮಠ ಮುಂತಾದವರು ಪ್ರಮುಖರಾಗಿದ್ದಾರೆ. ಇವರ ಕಥೆಗಳಲ್ಲಿ ಗ್ರಾಮ ಜೀವನದ ಸಮಸ್ತ ಮುಖಗಳು ಜೀವಂತ ಮುಖವೆತ್ತಿವೆ. ಅಲ್ಲಿಯ ಪ್ರೀತಿ- ಪ್ರೇಮ, ಪ್ರಾಮಾಣಿಕತೆ, ಮುಗ್ಧತೆ, ದ್ವೇಷ, ಮಡಿ-ಮೈಲಿಗೆ, ಮೇಲು-ಕೀಳು, ದೇವಿ-ದುರ್ಗಿ, ಸಂತೆ, ಜಗಳ, ಜಾತ್ರೆ, ದುಡಿತ, ಕುಡಿತ ಮುಂತಾದವುಗಳ ವಾಸ್ತವ ಪರಿಣಾಮಕಾರಿಯಾಗಿ ಚಿತ್ರಿಸುವಲ್ಲಿ ಅಕ್ಷರಶಃ ಯಶಸ್ವಿಯಾಗಿದ್ದಾರೆಂದರೆ ತಪ್ಪಾಗಲಾರದು.

ಚೆನ್ನಣ್ಣ ವಾಲೀಕಾರರ 'ಕೂಸು' ಕಥೆಯು ಒಬ್ಬ ಅಸಹಾಯಕ ಬಡಸ್ತ್ರೀಯ ದಾರುಣ ಬದುಕಿನ ಚಿತ್ರಣ ಒಳಗೊಂಡಿದೆ. ಗೌಡರ ಮನೆಯಲ್ಲಿ ಜೀತದಾಳಾಗಿದ್ದ ನೀಲವ್ವಳ ಗಂಡ ಕಳ್ಳತನದ ಆರೋಪಕ್ಕೊಳಗಾಗಿ ಜೇಲು ಸೇರುತ್ತಾನೆ. ಆ ಸಂದರ್ಭದಲ್ಲಿ ಗರ್ಭಿಣಿಯಾಗಿದ್ದ ನೀಲವ್ವಳನ್ನು ಅವಳ ಅತ್ತೆ ಮಾವಂದಿರು ಆಕೆಯ ಶೀಲದ ಮೇಲೆ ಶಂಕೆಪಟ್ಟು ತವರಿಗೆ ಅಟ್ಟುತ್ತಾರೆ. ಜೇಲಿನಿಂದ ಬಿಡುಗಡೆಯಾದ ಈಕೆಯ ಗಂಡನು ತವರಿನಲ್ಲಿಯೇ ಜನ್ಮವೆತ್ತಿದ್ದ ತನ್ನ ಮಗು ಹಾಗೂ ಮಡದಿಯನ್ನು ಪುನಃ ತನ್ನೂರಿಗೆ ಕರೆ ತರುತ್ತಾನೆ. ಅವನು ಮತ್ತೆ ಗೌಡರಲ್ಲಿ ದುಡಿದು ಬದುಕಲು ಆರಂಭಿಸಿದಾಗ ಗೌಡನ ದಾಯಾದಿಗಳು ಅಂತಃಕಲಹಕ್ಕಾಗಿ ಇವನಿಗೆ ಹಾವು ಕಡಿಸಿ ಕೊಲ್ಲುತ್ತಾರೆ. ಇದರಿಂದ ದುಃಖಿತಳಾದ ನೀಲವ್ವ ತನ್ನ ಮಗುವಿಗೋಸ್ಕರ ಜೀವಂತವಾಗಿರುತ್ತಾಳೆ. ಮುಂದೆ ಅನಾರೋಗ್ಯದಿಂದ ಮಗು ತೀರಿಕೊಂಡಾಗ ಕಲ್ಲಿಗೆ ತಲೆ ಜಜ್ಜಿಕೊಂಡು ಪ್ರಾಣ ಬಿಡುವುದು ಈ ಕಥೆಯ ವಸ್ತುವಾಗಿದೆ. ಇಲ್ಲಿ ಕಥೆಗಾರರು ನೀಲವ್ವಳ ಅಸ್ಥಿರ ಬದುಕನ್ನು ಕಟ್ಟಿಕೊಡುವುದರ ಜೊತೆಗೆ ಅವಳ ಮೇಲಾಗುವ ನಿಂದನೆಗಳು ಹಾಗೂ ತನ್ನ ಕರುಳಿನ ಕುಡಿಯ ಮಮತೆಯನ್ನು ತೋರಿಸಿದ್ದಾರೆ. ಗಂಡ ಜೇಲಿನಲ್ಲಿರುವಾಗ ನೀಲವ್ವಳಿಗೆ ಊರಿನ ಜನರು ಮನ ನೋಯುವಂತೆ ಮಾತಾಡಿದರೂ ಕಲ್ಲು ಜೀವ ಮಾಡಿಕೊಂಡು ತನ್ನ ಆಪ್ತರೆನಿಸಿದವರ ಹತ್ತಿರ "ಎಂಥೆಂಥೋರಿಗೆ ಕಷ್ಟ ಬರತಾದ ನನ್ನಂತಕಿಗೇನು? ಅಡವ್ಯಗ ಸೀತಮ್ಮ ಮಕ್ಕಳಿಗಿ ತೊಗೊಂಡು ಇರಂಗ ನಾ ಇರತೀನಿ. ಇವತ್ತಿಲ್ಲ ನಾಳೆ ಹಾಲಿದ್ದ ಹಾಲು ಆಗ್ತಾದ: ನೀರಿದ್ದ ನೀರು ಆಗ್ತದ ಸತ್ಯಕ್ಕೆ ಜಯ ಸಿಗ್ತಾದ"[1] ಎಂದು ಅವಳಾಡುವ ಮಾತುಗಳಲ್ಲಿ ಪ್ರಾಮಾಣಿಕತೆಯು ಮಡುಗಟ್ಟಿ ನಿಂತಿದೆ.

ಸೂಗಯ್ಯ ಹಿರೇಮಠರ 'ರೋಗ' ಕಥೆ ಒಂದು ಸಮಾಜದ ಅಂತರಂಗವನ್ನು ತಲಸ್ಪರ್ಶಿಯಾಗಿ ಸ್ಪರ್ಶಿಸಿರುವ ಮಹತ್ವದ ಕಥೆಗಳಲ್ಲೊಂದಾಗಿದೆ. ಹಳ್ಳಿಯ ಬದುಕು ತೋರಿಕೆಗೆ ತುಂಬಾ ಸರಳವೆಂದು ಕಂಡು ಬರುತ್ತದೆ. ಒಳಹೊಕ್ಕು ಪರಿಶೀಲಿಸಿದರೆ ಅಲ್ಲಿಯ ಭಯಂಕರ ದ್ವೇಷ ಇಡೀ ಹಳ್ಳಿಯನ್ನೇ ಬಲಿ ತೆಗೆದುಕೊಂಡಿದ್ದು ಅರಿವಿಗೆ ಬರುತ್ತದೆ. ಇಲ್ಲಿ ಬಸಪ್ಪ, ಧೂಳಪ್ಪನಂತಹ ಢೋಂಗಿ ರಾಜಕಾರಣಿಗಳಿದ್ದಾರೆ. ಡಾ॥ ರಿಚರ್ಡನಂತಹ ಸಮಾಜ ಸೇವಕರು ಇದ್ದಾರೆ. ಮತ್ತು ಖಾಸಿಂಬಿಯಂತಹ ಕುತಂತ್ರಿಗಳು ಜೀವಂತವಾಗಿದ್ದಾರೆ. ಈ ಎಲ್ಲ ವೈವಿಧ್ಯಮಯ ಪಾತ್ರಗಳಿಂದ ಕಥೆಗೆ ಲವಲವಿಕೆ ದೊರೆತಿದೆ. ತಮ್ಮ ನಾರು ರೋಗವನ್ನು ವಾಸಿಮಾಡಿದ ಡಾ.ರಿಚರ್ಡರನ್ನು ದೇವರೆಂದು ಭಾವಿಸಿದ ಜನತೆ ಕೊನೆಗೆ ಅವರನ್ನು ಹಳ್ಳಿಯಿಂದ ಹೊರ ಹೋಗುವಂತೆ ನಡೆದುಕೊಂಡಿರುವುದು ಅವರಿಗಂಟಿದ ಇನ್ನೊಂದು ಭಯಂಕರ ರೋಗವೆಂದೇ ಹೇಳಬೇಕು. ದೇಹಕ್ಕಂಟಿದ ರೋಗವನ್ನು ವಾಸಿ ಮಾಡಿದ ಡಾ.ರಿಚರ್ಡರು ಹಳ್ಳಿಗರ ಮನಸ್ಸಿಗೆ ಅಂಟಿಕೊಂಡಿದ್ದ ರೋಗವನ್ನು ಗುಣಪಡಿಸುವಲ್ಲಿ ವಿಫಲರಾದರೆಂದೇ ಹೇಳಬೇಕಾಗುತ್ತದೆ. "ದುಡಿಯುವ ಜನ ನೀವು ದಿನಾ ಹೆಂಡ ಕುಡಿಯುವುದರಿಂದ ನಿಮ್ಮ ಹಣ ಖರ್ಚಾಗುವುದಲ್ಲದೆ ದೇಹವು ಕೆಡುತ್ತದೆ"[೫] ಎಂದು ಬುದ್ಧಿ ಹೇಳಿದ ಡಾ.ರಿಚರ್ಡರ ಮಾತಿಗೆ ಆ ಹಳ್ಳಿಯ ಜನರು ಸ್ಪಂದಿಸದೆ ಹೋದದ್ದು ಅವರ ದುರಾದೃಷ್ಟ ಮಾತ್ರವಾಗದೆ, ಇಡೀ ನಾಡಿನ ಹಳ್ಳಿಗರ ದುರಾದೃಷ್ಟವು ಆಗಿದೆ ಎನ್ನಬಹುದು. ಅವರು ಹೆಂಡದ ಅಮಲಿನಲ್ಲಿ ನಿಜವಾದ ದೇವರ ಮಾತನ್ನೇ ತಿರಸ್ಕರಿಸಲಾಯಿತು. ಹೀಗೆ ಕಥೆ ಗ್ರಾಮೀಣ ಬದುಕಿನ ಒಂದೊಂದು ಮಗ್ಗಲುಗಳನ್ನು ಎಳೆ-ಎಳೆಯಾಗಿ ಕಣ್ಮುಂದೆ ನಿಲ್ಲುವಂತೆ ಚಿತ್ರಿಸಿರುವುದು ಕಥೆಗಾರರ ಗಟ್ಟಿ ಅನಭವಕ್ಕೆ ಸಾಕ್ಷಿಯಾಗಿದೆ.

ಚಿತ್ರಶೇಖರ ಕಂಠಿಯವರು 'ಗೌಡ್ರ ಗೌರಿ ಗುಂಡನ ಚೆನ್ನಿ' ಕಥೆಯಲ್ಲಿ ಮಾನವೀಯತೆಯನ್ನು ಅರಿಯದ ಗೌಡನೊಬ್ಬನ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ಮೂಡಿಸಿದ್ದಾರೆ. ತನ್ನ ಆಳು ಮಗನ ಹೆಂಡತಿ ಮಗುವಿಗೆ ಜನ್ಮಕೊಡುವ ಸಂದರ್ಭದಲ್ಲಿ ಸ್ವಾರ್ಥಿ ಗೌಡ ಆತನನ್ನು ಅದೇ ಸಂದರ್ಭದಲ್ಲಿ ಕರು ಹಾಕುತ್ತಿರುವ ಆಕಳ ಯೋಗಕ್ಷೇಮ ನೋಡಿಕೊಳ್ಳಲು ಸೂಚಿಸಿದ್ದು ಗೌಡನ ಅಮಾನವೀಯತೆಗೆ ಸಾಕ್ಷಿಯಾಗಿದೆ. ತನ್ನ ಕರುಳ ಬಳ್ಳಿಯನ್ನು ಕಾಣುವ ಕನಸುಳ್ಳ ಚೆನ್ನನ ಮನಸ್ಸು ಈ ಸಂದರ್ಭದಲ್ಲಿ ಅನುಭವಿಸುವ ಮಾನಸಿಕ ಹಿಂಸೆ ವರ್ಣಿಸಲಾಗದು. ಮೇಲ್ವರ್ಗದ ಜನ ತಮ್ಮ ಆಳು ಮಕ್ಕಳನ್ನು ಹೀನಾಯವಾಗಿ ದುಡಿಸಿಕೊಳ್ಳುವ ಚಿತ್ರಣ ಈ ಕಥೆಯಲ್ಲಿದೆ. ಬಡವರ ಸುಖ, ಸಂತೋಷದ ಘಟನೆಗಳನ್ನು ಅರ್ಥ ಮಾಡಿಕೊಳ್ಳದ ಇಂಥವರು ತಮ್ಮ ಸುಖ ಸಂತೋಷಕ್ಕಾಗಿ ಸದಾ ಹಾತೊರೆಯುವುದು ಈ ನೆಲದ ಒಂದು ದುರಂತವೆಂದರೆ ತಪ್ಪಾಗಲಿಕ್ಕಿಲ್ಲ. ಗುಂಡ ತನ್ನ ಹೆಂಡತಿಯನ್ನು ಕಳೆದುಕೊಂಡದ್ದು ಗೌಡನಿಂದಲೇ ಎಂಬುದು ಇಲ್ಲಿ ಸ್ಪಷ್ಟ. ಹೆಂಡತಿ ಚೆನ್ನಿ ಪ್ರಸವ ವೇದನೆ ಅನುಭವಿಸುವ ಸಂದರ್ಭದಲ್ಲಿ ಗುಂಡ ಅಲ್ಲಿ ಹಾಜರಿದ್ದರೆ ಆಕೆಯನ್ನು ಜೀವಂತವಾಗಿ ಉಳಿಸಿಕೊಳ್ಳಬಹುದಾಗಿತ್ತು. ಆದರೆ ಗೌಡ ಅದಕ್ಕೆ ಆಸ್ಪದ ಕೊಡದೆ ತನ್ನ ಆಕಳ ಹೆರಿಗೆ ಮಾಡಲು ಹಚ್ಚಿ ಬಡವರ ಜೀವನದ ಜೊತೆ ಚೆಲ್ಲಾಟವಾಡುತ್ತಾನೆ.

ಇಂತಹ ಹೃದಯ ಹೀನರಿಂದ ಸಮಾಜದಲ್ಲಿ ಬಡವರ ಬಾಳು ಗೋಳಿನ ಗೂಡಾಗಿದೆ. ಎನ್ನುವುದು ಈ ಕಥೆಯ ಆಶಯವಾಗಿದೆ. ಒಟ್ಟಾರೆ ಇಲ್ಲಿ ಗೌಡರ ಚೆಲ್ಲಾಟ ಬಡವರಿಗೆ ಪ್ರಾಣ ಸಂಕಟವಾಗಿ ಪರಿಣಮಿಸಿದೆ ಎನ್ನಬಹುದು. ಮತ್ತೊಬ್ಬರ ಸಾವಿಗೆ, ದುಃಖಕ್ಕೆ ಸ್ಪಂದಿಸದ ವ್ಯಕ್ತಿ ತನಗೆ ಆಕಸ್ಮಿಕವಾಗಿ ಒದಗಿದ ದುಃಖಕ್ಕೆ ಸಾಯುವ ಸ್ಥಿತಿಗೆ ಹೇಗೆ ಮರಗುತ್ತಾನೆ. ಬೆಚ್ಚಿ ಬೀಳುತ್ತಾನೆ ಎನ್ನುವ ಅಂಶವನ್ನು ಚಿತ್ರಶೇಖರ ಕಂಠಿಯವರು ತಮ್ಮ 'ಸಾವು' ಕಥೆಯಲ್ಲಿ ಹಿಡಿದಿಟ್ಟಿದ್ದಾರೆ.

'ಖಂದೀಲು ಕಳಸಪ್ಪ' ಕಥೆಯಲ್ಲಿ ಚಿತ್ರಶೇಖರ ಕಂಠಿಯವರು ಸಮಾಜದ ಏಳಿಗೇಗಾಗಿ, ಐಕ್ಯತೆಗಾಗಿ, ಹೋರಾಡಿ, ದುಡಿದ ವ್ಯಕ್ತಿಯೊಬ್ಬನ ದುರಂತಮಯ ಬದುಕಿನ ಚಿತ್ರಣ ನೀಡಿದ್ದಾರೆ. ಜೀವನದುದ್ದಕ್ಕೂ ಊರಿನ ಲೇಸಿಗಾಗಿಯೇ ದುಡಿದು, ತನ್ನ ಸಂಸಾರದ ಸರ್ವಸ್ವವನ್ನೇ ಕಳೆದುಕೊಂಡು ಖಂದೀಲು ಕಳಸಪ್ಪನ ಹೆಣ ಅನಾಥವಾಗಿ ಬಿದ್ದದ್ದು ಸಮಾಜ ಸೇವಕರಿಗೆ ಬದ್ಧ ಒಂದು ಚೇತರಿಸಲಾಗದ ಪಟ್ಟು ಎಂದು ಹೇಳಬಹುದು. "ಕತ್ತಲದಾಗ ಕೆಟ್ಟ ಕೆಲಸಗೋಳು ಆಗಬಾರ್ದು ಅಂತ ಈ ಖಂದೀಲಿ ಹಿಡದಿರತೀನರಿ"[೬] ಎಂದು ಹೇಳುವ ಖಂದೀಲು ಕಳಸಪ್ಪನ ಮಾತಿನ ಹಿಂದೆ ಸಮಾಜ ಪರವಾದ ಕಾಳಜಿ ಅಡಗಿರುವುದು ಕಂಡು ಬರುತ್ತದೆ. ಪರರ ಬದುಕಿನ ಹೆಜ್ಜೆ ಹೆಜ್ಜೆಗೂ ಬೆಳಕು ಹಿಡಿದ ಕಳಸಪ್ಪನ ತ್ಯಾಗ ನಿಸ್ವಾರ್ಥತೆ ಅನುಕರಣೀಯವಾಗಿದೆ. ಆದರೆ ಪರಜನರ ಸಂಸಾರವನ್ನು ಒಂದುಗೂಡಿಸಿದ ಕಳಸಪ್ಪ ತನ್ನ ಬಾಳು ಸರಿಪಡಿಸಲಿಕ್ಕಾಗಲಿಲ್ಲವಲ್ಲವೆಂಬ ಕೊರಗಿನಲ್ಲಿಯೇ ಜೀವ ಬಿಟ್ಟದ್ದು ವಿಷಾದ ಮೂಡಿಸುತ್ತದೆ. ಇವರ 'ಹೀಗೊಂದು ಊರಿನ ಕಥೆ'ಯು ಸರ್ವಧರ್ಮ ಸಮನ್ವಯವನ್ನು ಸಾರುವಂತಹದ್ದಾಗಿದೆ. ಇಲ್ಲಿ ಕಲ್ಲೂರು ಸರ್ವಧರ್ಮಗಳನ್ನು ಸಮಾನವಾಗಿ ಕಂಡ ಮಾದರಿ ಗ್ರಾಮವಾಗಿದೆ. ಈ ಕಥೆಯ ನಾಯಕನಾದ ಶಿವರಾಮುವಿನ ಸಾವಿನ ನಂತರ ಊರಿನ ಜನ ಒಂದಾದ್ದು ಕಲ್ಲೂರಿನ ದುರಂತವೆನಿಸುತ್ತದೆ.

ಸತ್ಯವು ಸತ್ತು ಲಲಿತಾ ನಾಯಕರ ಪ್ರಸ್ತುತ 'ಕಳ್ರು', ಮರು ಮದುವೆ ಕಥೆಗಳು ಗ್ರಾಮೀಣ ಪರಿಸರದಿಂದ ಹೆಕ್ಕಿಕೊಂಡ ವಸ್ತುಗಳಾಗಿವೆ. ಸುಳ್ಳು ಕಳ್ಳತನಗಳೇ ಸತ್ಯದ ಸ್ಥಾನವನ್ನು ಆಕ್ರಮಿಸುತ್ತವೆ. ಪ್ರಚಲಿತ ಜಗತ್ತಿನಲ್ಲಿ ಸುಳ್ಳು-ಕಳ್ಳತನ ಎಂಬ ಸತ್ಯವನ್ನು ವಸ್ತುವಿನಲ್ಲಿ ಮೇಳೈಸಿ. ಬಡವರ ಚಿಕ್ಕಮುಟ್ಟ ತಪ್ಪುಗಳು ಅಪರಾದವಾಗುವ, ಉಳ್ಳವರು ಕಳ್ಳರಾಗಿದ್ದಾಗ್ಯೂ ಅವರಿಗೆ ಘನ, ಸ್ಥಾನಮಾನಗಳು ದೊರಕುವ ಈ ಸಮಾಜದಲ್ಲಿ ಕಳ್ಳರಲ್ಲದವರೂ ಯಾರು? ಎಂಬುದೇ ಯಕ್ಷ ಪ್ರಶ್ನೆಯಾಗಿರುವುದನ್ನು ಹೇಳುವ ಕಥೆ ಕಳ್ರು.

ಮೇಲ್ನೋಟಕ್ಕೆ ವರ್ಗ ಸಂಘರ್ಷದ ಕಥೆಯಂತೆ ಕಂಡರೂ ಹಬ್ಬ ಮತ್ತು ಬಲಿಯ 'ಸಣ್ಣು'ವಿನಂತೆ ಇಲ್ಲಿಯೂ 'ಗುಂಡ'ನ ಅಧಃಪತನದ ಮೂಲ ಧರ್ಮವೇ ಆಗುತ್ತದೆ. ಹೀಗಾಗಿ ಧಾರ್ಮಿಕ ಅಂಶಗಳು ಗ್ರಾಮೀಣ ಪರಿಸರದ ಆರ್ಥಿಕ, ನೈತಿಕ ಅಧಃಪತನಕ್ಕೆ ಕಾರಣವಾಗಿರುವುದನ್ನು

ಹೊರಹಾಕುವ ವಿಶಿಷ್ಟ ಕಥೆಯಿದು. ಇನ್ನೊಂದು ಮುಖ್ಯ ಆಶಯವೆಂದರೆ ಲಂಬಾಣಿ ಜನಾಂಗ ಸಾಂಸ್ಕೃತಿಕ ಪರಿವರ್ತನೆಯೆಡೆಗೆ ಮುಖ ಮಾಡಿರುವುದನ್ನು ದಾಖಲಿಸುತ್ತಾ ಆಧುನಿಕ ಜೀವನದ ಪ್ರಭಾವ ಮತ್ತು ಪರಿಣಾಮಗಳನ್ನು ಈ ಕಥೆಯಲ್ಲಿ ಒಡಮೂಡಿಸಿದ್ದಾರೆ.

ಅರಣ್ಯ ಇಲಾಖೆಯಲ್ಲಿ ಕೆಲಸಮಾಡುತ್ತಿರುವ ಹನುಮಣ್ಣ ಅಕ್ರಮವಾಗಿ ಶ್ರೀಗಂಧದ ಮರಗಳ ಸಾಗಣಿಕೆ ಮಾಡಲು ಗುಂಡನನ್ನು ಬಳಸಿಕೊಂಡು ಪೋಲಿಸರಿಂದ ಪಾರಾಗುತ್ತಾನೆ. ಎರಡು ಹೊತ್ತು ಊಟಕ್ಕೂ ಪರದಾಡುವ ಗುಂಡ, ಸಂಸಾರದ ತಾಪತ್ರೆಯ ಪರಿಹಾರವಾಗಲಿ ಎಂದು ೬೦೦/- ರೂಪಾಯಿ ಸಾಲ ಮಾಡಿ ತಿರುಪತಿ ಯಾತ್ರೆ ಮಾಡುತ್ತಾನೆ. ಆದರೆ ತಾಪತ್ರೆಯ ಇನ್ನೂ ಹೆಚ್ಚಾಗಿ ವಾಸ್ತವದ ಅರಿವಾದಾಗ ಜೀತಕ್ಕೆಂದು ಗೌಡನ ಮನೆಗೆ ಹೋಗಬೇಕಾಗುತ್ತದೆ. ಮನೆಯಲ್ಲಿ ಮಡದಿ ಮಕ್ಕಳು ಊಟಕ್ಕೆ ತೊಂದರೆ ಅನುಭವಿಸುವಂತಾಗಿ ಮಗ 'ಮಿಂಚ' ಹನುಮಣ್ಣನ ಮನೆಯಲ್ಲಿ ಸಾರನ್ನು ಕದ್ದು ತರುತ್ತಾನೆ. ಅದೇ ದೊಡ್ಡ ತಪ್ಪೆಂದು ಜಮುನತ್ತೆ ಪಂಚಾಯ್ತಿ ಕೂಡಿಸುವುದಾಗಿ ಹೇಳಿದ್ದನ್ನು ಕೇಳಿದ ಗುಂಡ-ಶಾಂತಿ ಅಸಹಾಯಕರಾಗುತ್ತಾರೆ.

ಲಲಿತಾನಾಯಕರು ಇಲ್ಲಿ ಉಳ್ಳವರ ಇಲ್ಲದವರ ನಡುವಿನ ಸಂಘರ್ಷವನ್ನು ಹೇಳುತ್ತಲೇ ಅದಕ್ಕೆ ಪೂರಕವಾಗಿ ಆರ್ಥಿಕ, ಧಾರ್ಮಿಕ ಅಂಶಗಳು ಮೇಲಿನವರಿಗೆ ಸಹಾಯಕವಾಗಿ ಕೆಳಗಿನವರಿಗೆ ಮಾರಕವಾಗಿರುವುದನ್ನು ಸಾಂದರ್ಭಿಕವಾಗಿ ವಿಷದೀಕರಿಸಿರುವುದು ತುಂಬಾ ಅಚ್ಚುಕಟ್ಟಾಗಿ ಬಂದಿದೆ.

ಮದುವೆಯು ಹೆಣ್ಣಿನ ಮಾನಸಿಕ ತುಮುಲಗಳನ್ನು ಸೂಕ್ಷ್ಮವಾಗಿ ಹಿಡಿದಿಡುತ್ತಲೇ ಬಂಜೆತನ ಗಂಡನ ಪ್ರೀತಿಗೆ ದೂರ ಮಾಡುವ 'ಮರುಮದುವೆ'ಯ ಶೋಷಣೆಗೆ ಸಿಲುಕಿದ ಹೆಣ್ಣಿನ ಮಾನಸಿಕ ಹೊಯ್ದಾಟಗಳನ್ನು ಹೇಳುತ್ತಾ ಸಾಗುವ ಕಥೆಯೇ "ಮರು ಮದುವೆ".

ರಾಮಣ್ಣ ಗೌರಿಯನ್ನು ಮದುವೆಯಾಗಿ ಹನ್ನೆರೆಡು ವರ್ಷಗಳಾದರೂ ಗಂಡು ಮಗುವಿನ ತಂದೆಯಾಗಲಿಲ್ಲ. ಗಂಡು ಮಗುವಿಲ್ಲದ ನಮ್ಮ ಮನೆತನ ಬೆಳೆಯೋದು ಹೆಂಗೆ?... "ಸಾಯೋದೊಳಗ ಒಬ್ಬ ಮೊಮ್ಮಗನ್ನಾರ ಕಾಣ್ತೇವಿ"೭ ಎಂದು ತಂದೆ ತಾಯಿಗಳು ಮಗನಿಗೆ ಒತ್ತಾಯಿಸಿ ಎರಡನೇ ಮದುವೆಗೆ ಅಣಿಗೊಳಿಸುತ್ತಾರೆ. ಗೌರಿ ತನ್ನ ಮುಂದಿನ ದುಃಖ ಸ್ಥಿತಿಯನ್ನು ನೆನೆದು ಕೊರಗುತ್ತಾಳೆ. ಮದುವೆಗೆಂದು ಹೆಣ್ಣಿನ ಊರು ಬೆಳವಳ್ಳಿಗೆ ಹೊರಟಾಗ ತನ್ನ ಮದುವೆಯ ಕಾಲದ ಸಂಭ್ರಮಗಳನ್ನು ನೆನೆಯುತ್ತಾ ದುಃಖಿಸುತ್ತಾಳೆ. ಊರ ಮುಂದೆ ದನ ಕಾಯುವ ಹುಡುಗರಿಂದ 'ಮದುಮಗಳು ಚೆನ್ನವ್ವ' ಕಾಳಿಂಗನೊಂದಿಗೆ ಓಡಿಹೋಗಿದ್ದನ್ನು ತಿಳಿದಾಗ ತನಗೆ ಬೀಳಬೇಕಾಗಿದ್ದು ಪೆಟ್ಟು ಗಂಡನಿಗೆ ಬಿದ್ದುದನ್ನು ಕಂಡು ಮಾನಸಿಕ ವೇದನೆಗೆ ತೆರೆಬೀಳುತ್ತದೆ.

ಸ್ತ್ರೀಪರ ನಿಲುವುಳ್ಳ ಲಲಿತಾನಾಯಕರು ಗಂಡು ಹೆಣ್ಣಿನಲ್ಲಿ ಬೇದ ಕಲ್ಪಿಸಿರುವ ಸಮಾಜದ ತಾರತಮ್ಯ ನೀತಿಯನ್ನು ಎತ್ತಿ ತೋರಿಸುವ ಆಶಯವನ್ನು ಹೊಂದಿದ್ದರಿಂದ ಕೊನೆಯಲ್ಲಿ ಗೌರಿಗೆ ಅನ್ಯಾಯವಾಗದಿರುವಂತೆ ಕಥೆ ಮುಗಿಸಿರುವುದನ್ನು ಕಾಣಬಹುದು.

ಶ್ರೀಕಾಂತ ಪಾಟೀಲರ 'ಜರ್ದ ರುಮಾಲ' ಈ ಕಥೆಯು ದಿ॥ಜಯತೀರ್ಥ ರಾಜಪುರೋಹಿತ ದತ್ತಿ ಕಥಾ ಸ್ಪರ್ಧೆಯಲ್ಲಿ ೧೯೯೧ ರಲ್ಲಿ ಉತ್ತಮ ಕಥೆಯಾಗಿ ಪ್ರಶಸ್ತಿ ಪಡೆದಿದೆ. ಈ ಕಥೆಯಲ್ಲಿ ಅವರ ತಂದೆ ಗೌಡನಾಗಿ, ಆಳುಮಗ ಮಲ್ಲಣ್ಣನಾಗಿ, ಚಂದ್ರಕಾಂತ ಕಥೆಗಾರರೇ ಆಗಿ ತಮ್ಮಲ್ಲಿ ನಡೆದ ಘಟನೆಯನ್ನೇ ಈ ಕಥೆಗೆ ವಸ್ತುವಾಗಿಸಿಕೊಂಡಿದ್ದಾರೆ.

ಮಲ್ಲಣ್ಣ ಗೌಡರ ಆಳುಮಗ, ತನ್ನ ಧಣಿಯ ಮಗ ಚಂದ್ರಕಾಂತ ಬಾಲ್ಯದಿಂದಲೂ ತನ್ನಕೂಡ ಆಡಿ ಬೆಳೆದವನಾಗಿದ್ದನು, ಗೌಡರ ಹೊಲದ ಪ್ರತಿಯೊಂದು ಜವಾಬ್ದಾರಿಯೂ ಮಲ್ಲಣ್ಣನ ಮೇಲಿರುತ್ತದೆ. ಒಮ್ಮೆ ಮಲ್ಲಣ್ಣ ಚಂದ್ರಕಾಂತನನ್ನು 'ಜರ್ದ ರುಮಾಲ' ತುರವುದಕ್ಕೆ ಹೇಳುತ್ತಾನೆ. ಹಬ್ಬ-ಹರಿದಿನಗಳಲ್ಲಿ ತಾನೂ ಕೂಡ ಎಲ್ಲರಂತೆ ರುಮಾಲನ್ನು ಕಟ್ಟಿಕೊಂಡು ಓಡಾಡಬೇಕೆಂಬ ಆಸೆ ಇಟ್ಟುಕೊಂಡೇ ಇರುವವನು. ಹಾಗೆಯೇ ಚಂದ್ರಕಾಂತ ತನಗೆ 'ಜರ್ದ ರುಮಾಲ' ತಂದೇ ತರುತ್ತಾನೆ ಎಂಬ ಬರವಸೆಯಲ್ಲಿ ಆಸೆಯನ್ನು ಇಟ್ಟುಕೊಂಡು ಹೊಲದ ಎಲ್ಲಾ ಕೆಲಸವನ್ನು ಬೇಗ ಬೇಗ ಮುಗಿಸಿ ಕಾಯುತ್ತಾ ಕುಳಿತ ಮಲ್ಲಣ್ಣ, ಕೊನೆಗೂ ಉಗಾದಿ ಹಬ್ಬಕ್ಕೆ ಬಂದಾಗ ಧಣಿಯ ಮಗ 'ಜರ್ದ ರುಮಾಲ' ತರದೆ ಇದ್ದುದನ್ನು ಕಂಡು, ಅದು ತನಗೆಂದು ಸಿಗಲಾರದೆಂದು ಹನಿ ಕಣ್ಣೀರು ಸುರಿಸುತ್ತಾನೆ.

ಇಲ್ಲಿ ಶಿಕ್ಷಿತ ಜನರು ಹಳ್ಳಿಯ ಮುಗ್ಧ ಜನರನ್ನು ಹೇಗೆ ನೋಡುತ್ತಾರೆ. ಅವರನ್ನು ಆಸೆಯ ಬಲೆಗೆ ಕೆಡವಿ ದುಡಿಸಿಕೊಳ್ಳುವುದನ್ನು ಹೇಳುತ್ತಾರೆ. ಮನುಷ್ಯ-ಮನುಷ್ಯನನ್ನು ಮೋಸ ಮಾಡಬಹುದು, ಆದರೆ ನಿಸರ್ಗದಲ್ಲಿಯ ಪ್ರಾಣಿ ಸಸ್ಯವರ್ಗವು ಎಂದಿಗೂ ಮೋಸಮಾಡುವುದಿಲ್ಲ ಎಂಬ ಮೂಕ ವೇದನೆ ಇಲ್ಲಿದೆ.

ಶ್ರೀಕಾಂತ ಪಾಟೀಲರು ದಿನನಿತ್ಯ ಜೀವನದ ಸಾಮಾನ್ಯ ಘಟನೆಗಳನ್ನು ಹೆಣೆದು, ಇದು ಬದುಕಿನ ತುಂಡು ಎನಿಸುವಂತೆ ನಮ್ಮ ಮುಂದಿಡುತ್ತಾರೆ. ಉಳ್ಳವರು ಬಡವರ ಮೇಲೆ ಮಾಡುವ ಅನ್ಯಾಯ ಹಾಗೂ ಫ್ಯೂಡಲ್ ವ್ಯವಸ್ಥೆಯ ದೊರೆಗಳ ಅಟ್ಟಹಾಸವನ್ನು 'ಹಕ್ಕಲ ಶೇಂಗಾ' ಕಥೆಯಲ್ಲಿ ಹೆಣೆದಿದ್ದಾರೆ.

ಒಂದು ಹೊತ್ತು ಉಟಕ್ಕೂ ಒಂದು ತುಂಡು ಬಟ್ಟೆಗೂ ಗತಿ ಇಲ್ಲದ ನೀಲವ್ವ ಮತ್ತು ಯಮುನವ್ವ ಇಬ್ಬರು ಆತ್ಮೀಯ ಗೆಳತಿಯರಾಗಿದ್ದರು. ತಮ್ಮ ಮಕ್ಕಳಿಗಾಗಿ ಅಂಗಿ ತರಲು ಹಣ ಜಮಾಯಿಸುವುದಕ್ಕೆ ಸಾಹುಕಾರರ ಹೊಲಕ್ಕೆ ನಸುಕಿನಲ್ಲಿಯೇ ಹಕ್ಕಲ ಶೇಂಗಾ ಆರಸಲು ಹೋಗುತ್ತಾರೆ. ಇಂಥ ಆಸೆಯನ್ನು ಇಟ್ಟುಕೊಂಡು ಶೇಂಗಾ ಆಯ್ದುಕೊಂಡು ಕೂತಾಗ ಸಾಹುಕಾರ ಬಂದು ಅವರು ಆಯ್ದ ಶೇಂಗಾ ಕಸಿದುಕೊಂಡು ಕೆಟ್ಟ ರಿತಿಯಿಂದ ಬೈದು ಓಡಿಸುತ್ತಾನೆ. ಹಕ್ಕಲ ಶೇಂಗಾ ಆರಿಸಿ ತಮ್ಮ ಮಕ್ಕಳಗೆ ಬಟ್ಟೆ ತರೋಣವೆಂದು ಹೋಗಿದ್ದವರು ನಿರಾಶೆಯಿಂದ ಮರಳಿ ಮನೆಗೆ

ಬರುತ್ತಾರೆ. ಇಲ್ಲಿ "ಗೌಡನ ಹಿಂದಿನ ದುರುದ್ದೇಶ ನೀಲವ್ವ-ಯಮುನವ್ವರ ಅಸಹಾಯಕತೆ, ಅವರ ಶೋಷಿತ, ದುಃಖಿತ ಮನಸ್ಸುಗಳು"[೮] ಈ ಕಥೆಯಲ್ಲಿ ವ್ಯಕ್ತವಾಗಿವೆ. ಈ ಕಥೆಯಲ್ಲಿ ಎರಡು ಅಂಶವನ್ನು ಪ್ರತಿಬಿಂಬಿಸುವ ಪ್ರಯತ್ನವನ್ನು ಕಥೆಗಾರರು ಮಾಡಿದ್ದಾರೆ. ಗ್ರಾಮೀಣ ಪರಿಸರ ನೀಡುವುದರೊಂದಿಗೆ ದಲಿತಮಹಿಳೆಯರ ಶೋಷಣೆ ಒಂದು ರೀತಿಯಾದರೆ, ಅನುಕೂಲಸ್ಥರು 'ನಿರ್ಗತಿಕರಿಗೆ ಎಂದಿಗೂ ಸಹಾಯ ಮಡಲಾರರು' ಎಂಬ ಅಂಶ ಎರಡನೆಯ ರೀತಿಯದು.

'ಬೆಂಕಿ ಮರೆಯ ತಂಪು' ಕಥೆ ಸಂಕಲನದ ಶೀರ್ಷಿಕೆ ಹೊತ್ತ ಈ ಕಥೆ ಪ್ರಾತಿನಿಧಿಕವು ಹೌದು. ಇಂದು ಹಳ್ಳಿಗಳಲ್ಲಿ ಮೇಲ್ಜಾತಿ ಕೆಳಜಾತಿಗಳ ಜನರ ನಡುವೆ ಯಾವ ರೀತಿಯ ಜಗಳಗಳು, ಕೊಲೆ, ಸುಲಿಗೆಗಳು ನಡೆಯುತ್ತಲಿವೆ ಎಂದು ಹೇಳುತ್ತಾ, ತುಳಿತಕ್ಕೊಳಗಾದವರಿಗೂ ತುಳಿಯುವವರಗೂ ಸಮಾನತೆ ಹೇಗೆ ಇರಬೇಕು ಎಂಬುದನ್ನು ಕಥೆ ಧ್ವನಿಸುತ್ತದೆ.

ಬಸಂತರಾಯ ಊರಿನ ಒಬ್ಬ ದೊಡ್ಡ ಒಕ್ಕಲಿಗ, ತನ್ನ ಹೊಲದ ಆಳಾದ ಅರ್ಜುನ ವಿಶ್ವಾಸದಿಂದ ಒಕ್ಕಲುತನ ಮಾಡುತ್ತಲಿದ್ದ. ಅರ್ಜುನ ಕೆಳಜಾತಿಯವನಾದರೂ ಹಬ್ಬ-ಹರಿದಿನಗಳಲ್ಲಿ ಬಸಂತರಾಯ ತನ್ನೊಂದಿಗೆ ಊಟ ಉಪಚಾರ ಹಬ್ಬದಾಚರಣೆಯಲ್ಲಿ ಸಮಾನತೆ ನೀಡುತ್ತಿದ್ದನು. ಅವರಿಬ್ಬರ ಸ್ನೇಹ ಹೇಗಿತ್ತೆಂದರೆ, ಮುಂದೆ ಅರ್ಜುನ ಬಸಂತರಾಯನ ಮನೆಯಲ್ಲಿ ದುಡಿಯುವುದು ಬಿಟ್ಟರೂ ಸಹ, ಪ್ರತಿ ಹಬ್ಬಗಳಿಗೆ ಆತನಿಗೆ ಊಟಕ್ಕೆ ಕರೆಯುವುದು ವಾಡಿಕೆಯಿತ್ತು ಅರ್ಜುನನಿಲ್ಲದೆ ಹಬ್ಬದ ಊಟ ಮಾಡುವುದಿಲ್ಲ. ರಾಶಿ ಮಾಡುವ ಹಾಗಿಲ್ಲ, ಹುದಕಾರರಿಗೆ ರಾಶಿದಾನ ಕೊಡುವುದಿಲ್ಲ ಅಂತವನು ತನ್ನ ಮಗನ ಮಣಿದು ಧಣಿಯ ಮನೆ-ಹೊಲಗಳ ಸಂಬಂಧ ಕಳೆದುಕೊಳ್ಳುವಾಗಿನ ಹೊಯ್ದಾಟ, ತುಳಿತಕ್ಕೊಳಗಾದವರು ಮಾಡುವ ಕ್ರಾಂತಿ ಬೆಂಕಿಯಿಂದ ತನ್ನ ಧ್ವನಿಯನ್ನು ಕಾಪಾಡುತ್ತಾನೆ. ಆವಾಗಿನ ಹೋರಾಟದಲ್ಲಿ ಅರ್ಜುನ ಗೆದ್ದಸಂದರ್ಭದಲ್ಲಿ ಇಬ್ಬರದು ತಂದೆ ಮಗನ ಸಂಬಂಧಂತೆ ಬೆಳೆದಿರುತ್ತದೆ. ಇಲ್ಲಿ "ಜಾತಿ ದೊಡ್ಡದಲ್ಲ, ಗುಣ ದೊಡ್ಡದ್ದು ಮಾನವೀಯತೆ ದೊಡ್ಡದ್ದು" ಎಂಬ ಆಶಾಯವನ್ನಿಟ್ಟುಕೊಂಡು ಬರೆದಿದ್ದಾರೆ.

ನಾಗವಾರರ ' ಬಸ್ಯಾ' ಈ ಕಥೆ ತರಂಗ ವಾರ ಪತ್ರಿಕೆಯಲ್ಲಿ ಪ್ರಕಟಗೊಂಡು ಬಹುಮಾನಿತ ಕಥೆಯಾಗಿದೆ. ಧನ ಕಾಯುವ ಹುಡುಗನ ದಿನಚರಿಯೊಂದಿಗೆ ಹೇಣೆಯುವ ಕಥೆ, ನಿರೂಪಕರ ಊರಿನಲ್ಲಿ ಜೋಳದ ಸಸಿ ತಿಂದು ಎಮ್ಮೆ ಸಾಯಲು, ಮತ್ತೆ ಮುಂದಿನ ವರ್ಷವು ಸಹ ಆ ಹುಡುಗನಿಗೆ ಜೀತಕ್ಕೆ ಇಟ್ಟುಕೊಳ್ಳುವುದು ಸತ್ಯ ಘಟನೆಯ ಮೇಲೆ ಆಧಾರಿತಗೊಂಡ ಕಥೆಯಾಗಿದೆ. ಬಸ್ಯಾನ ತಂದೆಯು ಗೌಡರಲ್ಲಿ ದನಗಳನ್ನು ಕಾಯುವುದಕ್ಕಾಗಿ ನೇಮಿಸುತ್ತಾನೆ. ಬಸ್ಯಾ ಮೊದ ಮೊದಲು ನಾನು ಗೌಡರ ಎಷ್ಟೊಂದು ದನಗಳನ್ನು ಮೇಯಿಸುತ್ತೇನೆ ಹಾಗೂ ಗೌಡರ ಮನೆಯಲ್ಲಿ ಕೆಲಸಕ್ಕಿರುವುದೇ ಒಂದು ಹೆಮ್ಮೆಯ ವಿಷಯ ಎಂಬುದು ಅವನ ನಿಲುವಾಗಿತ್ತು. ಆದರೆ ಮುಂದೆ

ಇದೇ ಆಸಕ್ತಿ ಬಸ್ಯಾನಿಗೆ ಇರಲಿಲ್ಲ. ಸ್ವಲ್ಪ ದಿನಗಳಲ್ಲಿಯೇ ಬೇಜಾರು ಪಟ್ಟುಕೊಳ್ಳುತ್ತಾನೆ. ಗೌಡರ ಮನೆಯಲ್ಲಿದ್ದ ಪಂಜರದ ಗಿಳಿಯನ್ನು ನೋಡಿ, ಈ ಗಿಳೀಯು ತನಗಿಂತಲೂ ಎಷ್ಟು ಸುಖವಾಗಿದೆ ಎಂದು ಅವನ ಮನಸ್ಸು ತುಡಿಯುತ್ತದೆ. ಒಮ್ಮೆ ದನಗಳನ್ನು ಮೇಯಿಸುವಾಗ ಒಂದು ಎಮ್ಮೆ ಮಣಕ ಸಸಿ ತಿಂದು ಸತ್ತುದ್ದಕ್ಕಾಗಿ ಇಷ್ಟವಿಲ್ಲದ್ದಾದರೂ ಮತ್ತೆ ಮರುವರ್ಷವೂ ಗೌಡರಲ್ಲಯೇ ದುಡಿಯುವ ಪರಿಸ್ಥಿತಿ ಬರುತ್ತದೆ. ಹೀಗೆ ಗ್ರಾಮೀಣ ಪರಿಸರದಲ್ಲಿ ಇರುವ ಕೆಲವುಂದು ಅನಿಷ್ಟ ಪದ್ದತಿಗಳು ಬದಲಾಗಲು ಇನ್ನು ಎಷ್ಟು ವರ್ಷಗಳು ಬೇಕಾಗುವವೋ? ಕಾದು ನೋಡಬೇಕಾಗಿದೆ! ಎಂಬ ನಿಲುವು ಕಥೆಗಾರರದು.

ಇವರ ಇನ್ನೊಂದು ಕಥೆಯಾದ 'ನಿಂಗ', ಕಥೆಗಾರರೇ ಹೇಳಿಕೊಂಡಂತೆ ಇಲ್ಲಿ ಬೀದರ್ ಜಿಲ್ಲೆಯ ಭಾಷೆಯನ್ನು ಸೆರೆಹಿಡಿಯುವ ಬಯಕೆಯಿಂದಲೇ ಕಥೆ ಹೆಣೆದುದಾಗಿದೆ ಎಂದಿದ್ದಾರೆ. ಗೌಡರ ಮನೆಯಲ್ಲಿ ಜೀತದಾಳಾಗಿದ್ದ ನಿಂಗ ಅವರ ಮನಸ್ಸಿನ ಒಪ್ಪುವ ಹಾಗೆ ಹೊಲದ ಕೆಲಸಗಳನ್ನು ಮಾಡುತ್ತಲಿದ್ದ. ಬಿತ್ತಣೀಕೆ ಕಾರ್ಯಕ್ಕೆ ಹಳ್ಳಿಯಲ್ಲಿಯೇ ಈತನೇ ಪ್ರವೀಣನಾಗಿದ್ದ. ಈತನ ಕೈಯಿಂದಲೇ ಭೂಮಿಯ ಮೇಲೆ ಬೀಜ ಹಾಕಬೇಕು ಎಂಬುದು ಎಲ್ಲರ ವಿಶ್ವಾಸದ ವಿಚಾರವಾಗಿತ್ತು ಸಂಸಾರದ ಯಾವ ಹಂಗಿಗೂ ಒಳಗಾಗದ ನಿಂಗಣ್ಣ ವಿವಾಹದ ನಂತರದಲ್ಲಿ ಬರುವ ಕುಟುಂಬದ ಸಮಸ್ಯೆಗಳನ್ನು ಕಷ್ಟದಿಂದ ಎದುರಿಸಿ ಜೀವನ ಸಾಗಿಸುತ್ತಾನೆ.

ನಾಗವಾರರ ಕಥೆಯ ಇನ್ನೊಂದು ವೈಶಿಷ್ಟ್ಯವೆಂದರೆ ಶಿರ್ಷಿಕೆಗೆ ಇಟ್ಟಿರುವ ಹೆಸರುಗಳೇ ಇಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಅವರವರ ಬುದ್ಧಿ ವರ್ತನೆಗಳಿಗೆ ತಕ್ಕದಾದ ಪಾತ್ರಗಳೇ ಇವರ ಕಥೆಗಳಲ್ಲಿ ಕಾಣಿಸಿಕೊಳ್ಳುತ್ತವೆ. ಕಥೆಗಳಲ್ಲಿಯ ಹೆಚ್ಚು ಪಾತ್ರಗಳು ಜೀತದಾಳಾಗಿ ದುಡಿಯುವುದು, ಅನ್ಯಾಯದ ವಿರುದ್ಧ ಸಿಡಿದೇಳುವುದು, ನೊವನ್ನು ಅನುಭವಿಸುವುದು ಹೆಚ್ಚಾಗಿ ಕಂಡು ಬರುತ್ತದೆ. ಆದರೆ ಸುಖ ನೆಮ್ಮದಿಯಿಂದ ಜೀವನ ಸಾಗಿಸುವ ಚಿತ್ರಣ/ಪಾತ್ರ ಕಡಿಮೆ ಎಂದೇ ಹೇಳಬೇಕು.

ಜಯಶೆಟ್ಟಿಯವರು "ರಾಸೂರಾಯಿ"ಕಥೆ ವಿಡಂಬನಾತ್ಮಕವಾಗಿ ಚಿತ್ರಿತಗೊಂಡಿದೆ. ಬಹುಸ್ವಾರಸ್ಯಕರವಾದ ವಸ್ತುವನ್ನೊಳಗೊಂಡ ಈ ಕಥೆ ನಮ್ಮ ಸಮಕಾಲೀನ ಕ್ರಿಯಾ ಶೂನ್ಯವಾದ ಬದುಕನ್ನು ಚಿತ್ರಿಸುವಲ್ಲಿ ಸಾರ್ಥಕವಾಗಿದೆ. ಒಬ್ಬನ ಆಳ್ವಿಕೆಯ ನಂತರ ಮತ್ತೊಬ್ಬನು ಬಂದು ಅವರಿಂದ ಜನರು ಶೋಷಣೆಗೊಳಪಡುತ್ತಿರುವುದು ಕಂಡು ಬರುತ್ತದೆ. ಇದು ಇಂದಿನ ಸಮಾಜದಲ್ಲಿಯ ರಾಜಕಾರಣಿಗಳ ವ್ಯವಸ್ಥೆಯನ್ನು ಕುರಿತು ಸೂಚಿಸುತ್ತದೆ, ಇಂದು ನಮ್ಮ ಜನರಿಗೆ ಆಳಿಸಿಕೊಳ್ಳುವುದು ಮಾತ್ರ ಗೊತ್ತು, ಆದರೆ ಅಳುವುದು ಗೊತ್ತಿಲ್ಲ, ಒಬ್ಬ ಶೋಷಕನ ನಂತರ ಮತ್ತೊಬ್ಬ ಶೋಷಕನಿಗೆ ಅವಕಾಶ ಮಾಡಿಕೊಡುವುದು ನಮ್ಮ ಜನರಿಗೆ ರಕ್ತಗತವಾಗಿ ಬಂದ ಕೆಲಸವಾಗಿದೆ. "ರಾಸೂರಾಯಿ" ಕಥೆಯಲ್ಲಿ ಅವಳು ಹುಡುಗರಿಗೆ ಹೇಳುವ ಕಥೆಗಳ ಮೂಲಕ ಹೊಸ ಚೈತನ್ಯಶೀಲ ಸಮಾಜಕ್ಕೆ ವೈದ್ಯನೊಬ್ಬನ ಅವಶ್ಯಕತೆ ಇದೆ ಎಂದು ವ್ಯಕ್ತವಾಗುತ್ತದೆ.

ಇಂದು ಹಳ್ಳಿಯಲ್ಲಿನ ಒಕ್ಕಲಿಗನು ಎಷ್ಟುದುಡಿದರೂ ಊಟಕ್ಕೆ ಗತಿಯಿಲ್ಲದ ಪರಿಸ್ಥಿತಿ ಆತನಾದಗಿದೆ. ಹಳ್ಳಿಯಲ್ಲಿಯ ಸಾಹುಕಾರರು ಒಕ್ಕಲಿಗನನ್ನು ಸಾಲದ ಶೂಲಕ್ಕೆ ಕೆಡವಿ ಮಣ್ಣು ಪಾಲು ಮಾಡುವುದು ಬೆಳೆದು ಬಂದಿದೆ. 'ಹುಳ ಹತ್ತಿದ ಮರ' ಕಥೆಯ ನಾಯಕ ಲಿಂಗಪ್ಪ ತನ್ನ ಹೊಲದಲ್ಲಿ ಮುಂಜಾನೆಯಿಂದ ಸಂಜೆವರೆಗೂ ಮರಮರ ದುಡಿದರೂ ಗಂಜಿಗೆ ಗತಿಯಿಲ್ಲ. ಆದರೆ ಸಂಸಾರದಲ್ಲಿ ಮಾಡಬೇಕಾದುದೆಲ್ಲವನ್ನು ಮಾಡಿಯೇ ತೀರಿಸಬೆಕು ಎಂಬ ಮಾತಿನಂತೆ ಲಿಂಗಪ್ಪ ಮಕ್ಕಳ ಮದುವೆ-ಮುಂಜಿಗಾಗಿ ಸಾಲ ತೆಗೆದು ಮದುವೆ ಮಾಡುತ್ತಾನೆ. ಆದರೆ ಅದೇ ಸಾಲವೇ ಮುಂದೆ ಇನ್ನಷ್ಟು ಲಿಂಗಪ್ಪನನ್ನು ದುಸ್ಥಿತಿಗೆ ಕೆಡುವುತ್ತದೆ. ಹುಳ ಹತ್ತಿದ ಮರವು ಬಹಳಕಾಲ ಉಳಿಯಲಾರದಂತೆ "ಸಾಹುಕಾರರ ಸಾಲದಿಂದ ಒಕ್ಕಲಿಗನು ಬಹಳ ದಿವಸ ಉಳಿಯುವುದಿಲ್ಲ" ಎಂಬುದು ಇಲ್ಲಿನ ವಸ್ತುವಾಗಿದೆ.

'ಸೋಮಕ್ಕನ ಕಥೆ ಹೀಗಾಯಿತೆ?' ಈ ಕಥೆ ಸತ್ಯ ಘಟನೆಯ ಮೇಲೆ ರಚಿತಗೊಂಡದ್ದಾಗಿದೆ. ಕಥೆಗಾರರು ತಮ್ಮ ತಾಲ್ಲೂಕಿನ (ಭಾಲ್ಕಿ) "ಕೌರೂರು" ಎಂಬ ಹಳ್ಳಿಯ ಒಂದು ಹೆಣ್ಣಿನ ಬಾಳಿನ ಕಥೆಯನ್ನು ಇಲ್ಲಿ ವಿವರಿಸಲು ಹೊರಟಿದ್ದಾರೆ. ಸೋಮಕ್ಕನ ಸಂಸಾರ ಐಶಾರಾಮದಿಂದ ಕೂಡಿದ್ದಿತು. ಅದರೆ ಆಕೆಯ ಹೃದಯದಲ್ಲಿ ಮಕ್ಕಳಿಲ್ಲವೆಂಬ ಕೊರಗೂ ಮಾತ್ರ ಕೊರೆಯತ್ತಿತ್ತು. ಮಕ್ಕಳನ್ನು ಪಡೆಯಬೇಕೆಂದು ವಿವಿಧ ರೀತಿಯ ಹರಕೆಗಳನ್ನು ಮಾಡಿದರು ಸಹ ಏನು ಪ್ರಯೋಜನವಾಗುವುದಿಲ್ಲ. ಅದಕ್ಕಾಗಿಯೇ ಚಂಚಲ ಸ್ವಭಾವದವಳಾದ ಸೋಮಕ್ಕ ತನ್ನ ಗಂಡನಿಗೆ ಮತ್ತೊಂದು ಹೆಣ್ಣುತಂದು ಮರು ಮದುವೆ ಮಾಡಿಸುತ್ತಾಳೆ. ಮುಂದೆ ಕೆಲವೇ ದಿನಗಳಲ್ಲಿ ಗಂಡ ತೀರಿಕೊಳ್ಳುತ್ತಾನೆ. ತದನಂತರ ಸವತಿಯು ಸಮಯ ಸಾಧಿಸಿ ಸೋಮಕ್ಕಳನ್ನು ಪುಸಲಾಯಿಸಿ ಔಷಧಿ ಹಾಕಿ ಹುಚ್ಚಿಯನ್ನಾಗಿಸಿ ಮನೆ ಬಿಡಿಸುತ್ತಾಳೆ.

ಒಂದು ಕಾಲಕ್ಕೆ ಊರಿನಲ್ಲಿಯೇ ಪ್ರಮುಖಳಾಗಿದ್ದ ಸೋಮಕ್ಕಳಿಗೆ "ಬೀದಿಯೇ ಮನೆಯಾಗಿ ಹಾದಿಯೇ ಜೀವನವಾಗಿ" ಪರಿಣಮಿಸಿತು ಹೀಗೆ ಕೆಲವೇ ದಿನಗಳಲ್ಲಿ ಕಷ್ಟವನ್ನುಂಡ ಸೋಮಕ್ಕ ಸಾವನಪ್ಪುತ್ತಾಳೆ. ಆದರೆ ತೀರಿಕೊಂಡ ಮೇಲೆ ದೆವ್ವ ಆಗಿ ಪರಿಣಮಿಸಿದ್ದಾಳೆ ಎಂಬುದು ಜನರಲ್ಲಿ ಮೂಢನಂಬಿಕೆ ಹುಟ್ಟಿಸುವುದರ ಮೂಲಕ ಕಥೆ ಅಂತ್ಯಗೊಳಿಸಿದ್ದಾರೆ ಕಥೆಗಾರರು.

**ಧಾರ್ಮಿಕ ಚಿತ್ರಣ :**

ಜಗತ್ತಿನಲ್ಲೇ ವಿಶಿಷ್ಟವಾದ ಮತ್ತು ಪ್ರತ್ಯೇಕವಾದ ಸಂಸ್ಕೃತಿಯನ್ನು ಹೊಂದಿರುವ ದೇಶ ನಮ್ಮದು. ಇಲ್ಲಿ ಅನೇಕ ಧರ್ಮಗಳು, ಹಲವಾರು ಸಂಸ್ಕೃತಿಗಳು, ವಿವಿಧ ಜನಾಂಗಗಳು ಅನ್ಯೋನ್ಯವಾಗಿ, ಸಾಮರಸ್ಯದಿಂದ ಜೀವಿಸುತ್ತಿವೆ. ಯಾವುದೇ ಜನಾಂಗ ಸಂಪ್ರದಾಯ ಬದ್ದವಾಗಿಯೇ ಬದುಕು ಸಾಗಿಸುವುದು ಇಲ್ಲಿ ಸಹಜ ಮತ್ತು ಸಾಮಾನ್ಯವಾಗಿದೆ. ಇದರ ಗರ್ಭದಲ್ಲಿಯೆ ಅನೇಕ ಮುಡನಂಬಿಕೆಗಳು,

ಆಚರಣೆಗಳು ಬೆಳೆದುಕೊಂಡು ಬಂದಿವೆ. ಇಂದು ನಾವು ನಮ್ಮ ಬದುಕಿನಲ್ಲಿ ಅವುಗಳನ್ನು ಅಳವಡಿಸಿಕೊಳ್ಳುವುದು ಅನಿವಾರ್ಯವಾಗಿದೆ. ವಿಜ್ಞಾನ-ತಂತ್ರಜ್ಞಾನದ ಮಾರ್ಗದಲ್ಲಿ ನಡೆದರು ಆಚರಣೆ ಸಂಪ್ರದಾಯಗಳನ್ನು ಬಿಟ್ಟುಕೊಡಲು ಭಾರತೀಯರಾದ ನಾವು ಒಪ್ಪುತಿಲ್ಲ. ಬಾಹ್ಯವಾಗಿ ನಾವು ಈ ಮೂಡನಂಬಿಕೆಗಳನ್ನು ವಿರೋಧಿಸಿದರೂ ಆಂತರಿಕವಾಗಿ ಇವುಗಳಲ್ಲಿ ಹಲ-ಕೆಲವಾದರೂ ಆಚರಿಸುತ್ತಲೇ, ನಂಬುತ್ತಲೇ, ಪುರಸ್ಕರಿಸುತ್ತಲೇ ನಡೆದಿರುವುದು ತುಂಬಾ ವಿಷಾದ ಪಡುವ ಸಂಗತಿಯಾಗಿದೆ. ಯಾವುದು ಸರಿ ಯಾವುದು ತಪ್ಪು ಎಂದು ಗೊತ್ತಿರುವವರು ಅದನ್ನು ಧೈರ್ಯವಾಗಿ ಅದನ್ನು ಇದ್ದಂತೆ ಹೇಳಲು ಹಿಂಜರಿಯುತ್ತಿದ್ದಾರೆ. ಧರ್ಮದ ಹೆಸರಿನಲ್ಲಿ ನಡೆಯುವ ಮೋಸ, ವಂಚನೆ, ಅನ್ಯಾಯ, ಅತ್ಯಾಚಾರಗಳು ಸ್ಪಷ್ಟವಾಗಿ ಗೋಚರಿಸುತ್ತಿದ್ದರೂ ಯಾರೊಬ್ಬರು ಧರ್ಮ-ದೇವರುಗಳ ವಿರುದ್ಧ ಚಕಾರ ಎತ್ತುತ್ತಿಲ್ಲ. ದೇವರು ಧರ್ಮವನ್ನು ನಂಬುವುದಿಲ್ಲ ಎನ್ನುವ ಅಧಿಕ ಸಂಖ್ಯೆಯ ಜನ ಒಂದಿಲ್ಲ ಒಂದು ರೀತಿಯಲ್ಲಿ ದೇವರು ಧರ್ಮವನ್ನು ಪಾಲಿಸುತ್ತಿದ್ದಾರೆ. ಈ ರೀತಿ ದ್ವಂದ್ವ ಧಾರ್ಮಿಕ ವಿಚಾರ ಮುಡಗಟ್ಟಿ ನಿಂತಿರುವುದು ಕಂಡು ಬರುತ್ತದೆ. ಇದಕ್ಕೆ ನಿದರ್ಶನ ಎನ್ನುವುದಕ್ಕೆ ಸೂಗಯ್ಯ ಹಿರೇಮಠರ ಮಾಲಗಂಬ, ಸೇವೆ, ಹುಳುಗಳು, ತಂತ್ರ, ದೀಪ, ಸಗರ ಕೃಷ್ಣಾಚಾರ್ಯರ ಇಂದ್ರಿ ಯಾಣಿ ಪ್ರಮಾಥೀನಿ, ಸಿದ್ಧರಾಮ ಹೊನ್ಕಲರ 'ಒಂದು ಹಾವಿನ ಸುತ್ತ', 'ಪವಾಡ', 'ನಾಯಿ ಬಾಲ'. ಚಿತ್ರಶೇಕರ ಕಂಠಿಯವರ 'ಪಲಾಯನ', 'ದೇವರಮಗ'. ಗೀತಾ ನಾಗಭೂಷಣರ 'ದುರಂತ' 'ಢಾಲು'. ಬಿ.ಟಿ.ಲಲಿತಾ ನಾಯಕರ 'ಹಬ್ಬ ಮತ್ತು ಬಲಿ'. ಬಾಲಚಂದ್ರ ಜಯಶೆಟ್ಟಿಯವರ 'ಕೋಡ್ಗಲ್ಲಿನ ಕೂಗು' ಮತ್ತು 'ಎಲ್ಲಮ್ಮನ ಸೇವೆ', ಮುಂತಾದ ಕಥೆಗಾರರ ಕಥೆಗಳೇ ಜೀವಂತ ಸಾಕ್ಷಿಯಾಗಿವೆ.

ಸೂಗಯ್ಯ ಹಿರೇಮಠರ 'ಮಾಲಗಂಬ' ಕಥೆಯಲ್ಲಿ ಮೂಢನಂಬಿಕೆಯ ಬಗ್ಗೆ ಒಬ್ಬ ಕಳ್ಳನಿಗೂ ಮತ್ತು ಪ್ರಾಮಾಣಿಕನಿಗೂ ಯಾವುದೇ ಭೇದ ಇರುವುದಿಲ್ಲ. ಅವರವರ ಕಾಯಕ ಬೇರೆ ಬೇರೆಯಾಗಿದ್ದರೂ ಈ ನಂಬಿಕೆಯ ಬಗ್ಗೆ ಎಲ್ಲರೂ ಒಂದೇ ಅಭಿಪ್ರಾಯ ತಳೆದಿರುತ್ತಾರೆ, ಎನ್ನುವ ಅಂಶದ ಮೇಲೆ ಈ ಕಥೆ ಬೆಳಕು ಚೆಲ್ಲುತ್ತದೆ. "ಏನಾಗ್ತಾದವ್ವ" ಎಂದು ಚಿಕ್ಕ ಮಗು ಸಿಂಗ್ಯಾ ಕೇಳಿದಕ್ಕೆ ತಾಯಿ "ಮಕ್ಕಳಾಗ್ತಾವ ವರ್ಷ ತುಂಬದರಾಗ"[೨೦] ಎನ್ನುವ ಆಕೆಯ ಈ ಮಾತುಗಳಲ್ಲಿ ಅಜ್ಞಾನ, ಮೂಡನಂಬಿಕೆ ಮತ್ತು ಮುಗ್ದತೆಗಳ ನಗ್ನದರ್ಶನವಿದೆ.

'ಸೇವೆ' ಕಥೆಯಲ್ಲಿ ಬರುವ ಹಣಮಿ ಊರಿನ ಎಲ್ಲ ಗಂಡಸರ ಸ್ವತ್ತು, ಅಂದರೆ ದೇವರ ಹೆಸರಿನಲ್ಲಿ ಬಸವಿ ಬಿಟ್ಟಿರುವ ಹೆಣ್ಣು. ಈಕೆ ರಾಮರಾಯರ ಕಾಮದ ದಾಹಕ್ಕೆ ತುತ್ತಾಗಿ ಹೆಣವಾಗುತ್ತಾಳೆ, ಬಸಕ್ಕ ಮತ್ತು ಶಕುಂತಲರ ಬದುಕು ತುಂಬ ಶೋಚನೀಯ ಹಾಗೂ ಅನಿವಾರ್ಯದಿಂದ ಕೂಡಿದ್ದಾಗಿದೆ. ಬಸಕ್ಕ-ಅಣಮಿಯವರು ಬಸವಿಯರಾದರೆ, ಶಕುಂತಲ ನಾಟ್ಯರಾಣಿಯಾಗಿ, ಅವಕಾಶ ಸಿಕ್ಕಾಗಲೆಲ್ಲ ಮಂತ್ರಿ ಮಾನ್ಯರಿಗೆ ಸೆರಗು ಹಾಸಿ ಮೇಲ್ದರ್ಜೆಗೆ ಏರಿದಾಕೆ. ದೇವರ ಸೇವೆಯ

ಹೆಸರಿನಲ್ಲಿ ಹೆಣ್ಣು ಮಕ್ಕಳನ್ನು ದುರುಪಯೋಗಪಡಿಸಿಕೊಳ್ಳುವ ಪುರುಷ ಪ್ರಧಾನ ಸಮಾಜದ ಕಟ್ಟ ಆಚರಣೆಯ ಕರಾಳ ಚಿತ್ರಣನ್ನು ಈ ಕಥೆ ಒಳಗೊಂಡಿದೆ.

'ಹುಳುಗಳು' ಕಥೆಯಲ್ಲಿ ಊರಿನ ಜನರು ಮುತ್ಯಾನನ್ನು ಕೇಳಿಯೇ ಅವರು ಕೆಲಸಗಳನ್ನು ಶುರುಮಾಡುತ್ತಾರೆ. ಮುತ್ಯಾನ ಮಾತುಗಳೆ ಇವರಿಗೆ ವೇದ ವಾಕ್ಯಗಳಾಗಿವೆ. ಹೊಲ ಬಿತ್ತುವುದಕ್ಕೂ, ಬೆಳೆ ಕೊಯ್ಯುವುದಕ್ಕೂ ಮುತ್ಯಾನ್ನು ಕೇಳುವುದು ಗ್ರಾಮದ ಜನರ ವಾಡಿಕೆ ಹಾಗೂ ಸಂಪ್ರದಾಯವಾಗಿದೆ. ಅವನು ಹೇಳಿದ ಬೀಜವೇ ಬಿತ್ತಿದರೂ ಬೆಳೆನಾಶವಾದರೆ ಅವನ್ನು ದೂಷಿಸುವುದು ಬಿಟ್ಟು ಪ್ರಕೃತಿಯನ್ನು ಹಳಿಯುವುದು ಜನರ ಕೆಲಸ. ಬಿತ್ತಿದ ಬೆಳೆಗೆ ಹುಳು ಆಗಿದ್ದಾಗ ಮುತ್ಯಾ ಮಂತ್ರಿಸಿಕೊಟ್ಟ ನೀರೇ ಸಿಂಪಡಿಸಿ ಸಮಾಧಾನ ಪಡೆಯುತ್ತಾರೆ. ಗ್ರಾಮ ಸೇವಕನ ಮಾತು ಯಾರು ಕೇಳದೆ ಆ ಮಂತ್ರದ ಮೋಡಿಗೆ ಒಳಗಾಗುತ್ತಾರೆ. ಇದು ಒಂದು ಗ್ರಾಮದ ಜನರ ಅಂಧಶ್ರದ್ಧೆಯಾಗಿರದೆ ಇಡೀ ನಾಡಿನ ಹಳ್ಳಿಗರ ಮೂಢನಂಬಿಕೆಯಾಗಿದೆ ಎನ್ನಬಹುದು.

'ತಂತ್ರ' ಈ ಕಥೆ ಗ್ರಾಮೀಣ ಜನರ ಅವೈಜ್ಞಾನಿಕ ನಂಬಿಕೆಗಳಾದ ಮಂತ್ರ-ತಂತ್ರ ಮತ್ತು ಭಾನಾಮತಿಗಳ ಚಿತ್ರಣ ಒಳಗೊಂಡಿದೆ. ಪ್ರಸ್ತುತ ಸಂದರ್ಭದಲ್ಲಿ ಭಾನಾಮತಿ ಎನ್ನುವುದು ಒಂದು ಮನೋರೋಗ. ಇದರ ಹಿಂದೆ ಮನುಷ್ಯನ ಸಣ್ಣತನ, ಸ್ವಾರ್ಥತೆ, ದುರಾಸೆಗಳು ಜಾಗೃತವಾಗಿರುತ್ತವೆ. ಇನ್ನೊಬ್ಬರ ಆಸ್ತಿ ಸಂಪತ್ತು ಸ್ವಾಧೀನ ಪಡಿಸಿಕೊಳ್ಳುವುದಕ್ಕಾಗಿ ಅಥವಾ ಹಾಳು ಮಾಡುವುದಕ್ಕಾಗಿ ರೋಗಗ್ರಸ್ಥ ಮನಸ್ಸುಗಳು ಪ್ರಯತ್ನಿಸುವ ಈ ಭಾನಾಮತಿ ಪ್ರಯೋಗವನ್ನೊಳಗೊಂಡ ತಂತ್ರ ಈ ಕಥೆ ತಿಳಿಸುತ್ತದೆ.

'ದೀಪ' ಕಥೆಯು ಊರಿನಲ್ಲಿನ ಮುಗ್ಧ ಜನರಿಗೆ ಮಠದ ಸ್ವಾಮಿಗಳು, ಧರ್ಮಗುರುಗಳು, ವಂಚಿಸುವ ರೀತಿ ಎಳೆ ಎಳೆಯಾಗಿ ಬಿಚ್ಚಿಡುತ್ತದೆ. ಮೂಢನಂಬಿಕೆಗಳಿಗೆ ಕಟ್ಟು ಬಿದ್ದ ಜನರ ಮೌಢ್ಯತೆಯನ್ನು ಅರಿತ ಶಿಕ್ಷಕ ಚೆನ್ನಬಸಪ್ಪ "ಧರ್ಮದ ಹೆಸರಿನಲ್ಲಿ ಜನ ಸಾಮಾನ್ಯರ ಶೋಷಣೆ ನಿಲ್ಲಲಿ"[೧೧] ಎನ್ನುವ ಲೇಖನ ಪತ್ರಿಕೆಯಲ್ಲಿ ಪ್ರಕಟಿಸುತ್ತಾನೆ. ಇದನ್ನು ಓದಿದ ಮಠಾಧೀಶರು ಊರಿನ ಕೆಲ ಹುಂಬರನ್ನು, ತಿಳಿಗೇಡಿಗಳನ್ನು, ಮುಗ್ದರನ್ನು ಕರೆಸಿ ಮಾತುಕತೆ ಆಡಿ ಶಿಕ್ಷಕ ಚನ್ನಬಸಪ್ಪನ ಲೇಖನಕ್ಕೆ ತಲೆಕೆಡಿಸಿಕೊಳ್ಳದಕ್ಕೆ ಸೂಚಿಸುತ್ತಾರೆ. ಅಲ್ಲದೆ ಊರಿನ ಜನರಿಂದ ಹತ್ತು ರೂಪಾಯಿ ಚಂದಾ ಹಣ ವಸೂಲಿ ಮಾಡಿ ಅದ್ದೂರಿಯ ಲಕ್ಷ್ಯ ದೀಪೋತ್ಸವವನ್ನು ಅಳುಕದೆ ನೆರವೇರಿಸುತ್ತಾರೆ. ಈ ದೀಪ ಕಥೆ ಧರ್ಮಗುರುಗಳು, ಅಥವಾ ಧರ್ಮಾಧಿಕಾರಿಗಳು ಲಕ್ಷ್ಯ ದೀಪೋತ್ಸವದಂತಹ ಮುಂತಾದ ಆಚರಣೆಗಳಿಂದ ಮುಗ್ಧ ಜನರನ್ನು ನಿರಂತರವಾಗಿ ಶೋಷಿಸುತ್ತಿರುವುದು ತಿಳಿಸುತ್ತದೆ. ಮಠಾಧೀಶರ, ದೇವಮಾನವರ ಈ ಬಗೆಯ ಶೋಷಣೆ ಹಳ್ಳಿಗರ ಗಮನಕ್ಕೆ ಬಾರದಿರುವುದಕ್ಕೆ ಮತ್ತು ಬಂದರೂ ಅದಕ್ಕೆ ಪ್ರತಿಭಟಿಸದಿರಲು ಪ್ರಮುಖ

ಕಾರಣವೆಂದರೆ ಅವರ ಅಂಧಶ್ರದ್ಧೆ-ವಿಶ್ವಾಸ ಮತ್ತು ಧರ್ಮ-ದೇವರುಗಳ ಬಗೆಗಿನ ಭಯ-ಭಕ್ತಿಯೇ ಆಗಿದೆ ಎನ್ನುವುದು ದೀಪ ಕಥೆಯಿಂದ ವ್ಯಕ್ತವಾಗುತ್ತದೆ.

ಚಿತ್ರಶೇಖರ ಕಂಠಿಯವರ 'ಪಲಾಯನ' ಕಥೆಯಲ್ಲಿ ಮೂಡಿಬಂದಿರುವ ಚಿತ್ರಣ ಇಂದಿನ ಸಮಾಜದ ಮೌಢ್ಯತೆಯನ್ನು ಪರಿಚಯಿಸುತ್ತದೆ. ಬದುಕಿನ ಬಗ್ಗೆ ಹಲವಾರು ಬಣ್ಣದ ಕನಸುಗಳನ್ನು ಕಟ್ಟಿಕೊಂಡಿರುವ ಯುವಕನಿಗೆ ಒತ್ತಾಯದಿಂದ ಧರ್ಮ ದೀಕ್ಷೆಕೊಟ್ಟು ಮಠಾಧೀಶನನ್ನಾಗಿಸಲು ಹೊರಟ ತಂದೆ-ತಾಯಂದಿರ ಅಜ್ಞಾನ, ಅಂಧಶ್ರದ್ದೆಗೆ ಮನ ಮಿಡಿಯುತ್ತದೆ. ಸಮಾಜದ ಈ ಅವೈಜ್ಞಾನಿಕ ನಡವಳಿಕೆಯನ್ನು ಅರಿತ ಕಾಲೇಜಿನ ಹುಡುಗ ಇಂಥ ಗೊಡ್ಡುಸಂಪ್ರದಾಯವನ್ನು ತಿರಸ್ಕರಿಸುವುದಕ್ಕೆ ಪೂರ್ವಗ್ರಹ ಪೀಡಿತ ಹಳೆ ಮನಸ್ಸುಗಳು ಕೊಡುವ ಉಪದೇಶ ತೀರ ನಿರಾಶಾದಾಯಕವಾಗಿದೆ. "ನೋಡು ಮಗ ನೀ ಹೆಸರಿಗೆ ಮಾತ್ರ ನಿಮ್ಮಪ್ಪನ ಮಗ, ಖರೆ ಹೇಳಬೇಕೆಂದರೆ, ನೀ ದೇವರ ಮಗ, ಒಂದು ದಿನ ಸಂಕಲಗಿ ಮುತ್ತೇರು ನಿಮ್ಮವ್ವಗ, ನೋಡವ್ವ ನಿನಗೆ ಹುಟ್ಟಿದ ಮೊದಲನೆಯ ಮಗನಿಗೆ ಮಠದ ಗದ್ದಗಿಗಿ ಮರಿ ಬಿಟ್ಟೆಂದರ ನಿನಗೆ ಮಕ್ಕಳಾಗುತಾವ ಅಂತ ಹೇಳಿದ ಮಾತಿಗೆ ಹರಕೆ ಹೊತ್ತಿದ್ದರಿಂದ ನೀ ಹುಟ್ಟಿದಿ"[೨] ಎನ್ನುವ ಮಾತುಗಳಲ್ಲಿ ಗ್ರಾಮೀಣ ಜನತೆಯ ಮುಗ್ಧತೆ, ಅಜ್ಞಾನ, ಅನಕ್ಷರತೆಗಳ ಕರಿನೆರಳಿನ ಛಾಯೆ ಗಾಢ ವಾಗಿದೆ. ಕಂಡ ಕಂಡ ದೇವರಿಗೆ ಕೈ ಮುಗಿದರೂ ಗಂಡ ನಿಲ್ಲದೆ ಮಕ್ಕಳಾಗವು ಎಂಬ ಸತ್ಯ ಸಂಗತಿಯ ಅರಿವಿದ್ದ ಮಗ ರಾತ್ರೋ ರಾತ್ರಿ ಉಟ್ಟ ಕಾವಿ ಬಟ್ಟೆಯಲ್ಲಿಯೇ ಮನೆಯಿಂದ ಓಡಿಹೋಗುವುದು ಅನಿವಾರ್ಯವಾಗುತ್ತದೆ. ಲಾರಿ ಚಾಲಕನಿಗೆ ತನ್ನ ಕೊರಳ ಲಿಂಗವನ್ನು ಕೊಟ್ಟು ನೆಮ್ಮದಿಯ ಉಸಿರು ಬಿಟ್ಟನೆಂದು ಹೇಳಬಹುದು. ಅರ್ಥರಹಿತ ಮೌಢ್ಯಯುತವಾದ ಬದುಕೇ ಬೇಡವಾದವನಿಗೆ ಆ ನಿರ್ಜೀವ ಲಿಂಗವಾದರೂ ಏಕೆ ಬೇಕು ಎಂಬ ನಿಲುವು ನಿರೂಪಕನದಾಗಿದೆ. ಮನೆಯಿಂದ ಓಡಿ ಹೋಗುವುದು ಪುಕ್ಕಲುತನವಾದರು ಒಂದು ರೀತಿಯಲ್ಲಿ ಇದು ಮೌಢ್ಯದ ವಿರುದ್ಧದ ಮೌನ ಪ್ರತಿಭಟನೆಯ ಸಂಕೇತವಾಗಿದೆ. ಮೂಢ ನಂಬಿಕೆಯ ಮಡುವಿನಲ್ಲಿ ಜೀವಿಸುವ ಹಿರಿಯರ ವಿರುದ್ಧ ಮಾತನಾಡುವುದು ಸಾಧುವಾಗದೆ ಇರುವವರಿಗೆ ಪಲಾಯನವೇ ಒಳ್ಳೆಯ ಮಾರ್ಗ ಎನ್ನುವ ಅಂಶವನ್ನು ಇಲ್ಲಿ ಕಥೆಗಾರರು ಅತೀ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ.

'ದೇವರ ಮಗ' ಈ ಕಥೆ ಕೂಡ ತಂದೆ ತನ್ನ ಮಗನನ್ನು ದೇವರಿಗೆ ಬಿಡುವ ಚಿತ್ರಣ ಒಳಗೊಂಡಿದೆ. ಇಲ್ಲಿ ಶಿವರಾಜ ಓದಿ ಪಾಸಾಗಿ ಕಾಲೇಜು ಸೇರುವ ತವಕದಲ್ಲಿದ್ದರೆ, ದೇವರಿಗೆ ತನ್ನ ಮಗನನ್ನು ಒಪ್ಪಿಸಿ ತನ್ನ ಹರಕೆ ತೀರಿಸಕೊಳ್ಳವ ತೀವ್ರ ಹಂಬಲದಲ್ಲಿ ಆತನ ತಂದೆ ಇರುತ್ತಾನೆ. ಇದಕ್ಕೆ ವಿರೋಧಿಸಿದ ತಾಯಿ ಇನ್ನೊಂದು ಕಡೆ, ಹೆಂಡತಿಯನ್ನು ಕುರಿತು "ಇಗಾ ನೋಡು, ತಿಂಗಳಾನ ಗಟ್ಟಲೆ ನಾ ಹಾಸಿಗೆ ಹಿಡಿದಾಗ ಖುದ್ಧ ಗುಡ್ಡದ ಈಶ್ವರನೆ ಬಂದು ನನ್ನ

ಕನಸಿನ್ಯಾಗ ಹೇಳಿ ಹೋಗಿದ್ದ ನಿನ್ನ ಚೊಚ್ಚಿಲ ಮಗನಿಗೆ ನನ್ನ ಗುಡ್ಡಕ್ಕೆ ಬಿಡು. ನಿನ್ನ ಕಂಟಕ ಪರಿಹಾರ ಆತದ"[೧೩] ಎನ್ನುವಲ್ಲಿ ಮೂಢನಂಬಿಕೆ, ಅಂಧಶ್ರದ್ಧೆ ಎದ್ದು ಕಾಣುತ್ತದೆ.

'ಪಲಾಯನ' ದಲ್ಲಿ ಮಗ ಎದುರಾಡದೆ ಮೌನ ತಾಳಿದರೆ 'ದೇವರ ಮಗ' ಕಥೆಯಲ್ಲಿ ಶಿವು ತನ್ನ ತಂದೆಗೆ ನೀನು ಹಳೆ ಕಾಲದಾಗ ಇದ್ದಿ. ಈಗ ಸರಕಾರ ಇಂಥ ಎಲ್ಲ ಬಲಿ ಕಾರ್ಯಗಳೆಲ್ಲ ನಿಲ್ಲಿಸಿ ಬಿಟ್ಟಿರುವಾಗ ನೀ ಇನ್ನೂ ಆ ಹಿಂದಿನ ರೂಢಿ ಬಿಡಲಿಲ್ಲ ಎಂದು ಹೇಳುವ ಅವನ ಮಾತಿನಲ್ಲಿ ಪ್ರತಿಭಟನೆಯ ಜೊತೆಗೆ ಪ್ರಗತಿಪರ ಮನೋಭಾವವಿರುವುದು ಕಂಡು ಬರುತ್ತದೆ. ಕೊನೆಗೆ ತಂದೆಯ ಆಸ್ತಿ-ಪಾಸ್ತಿ ಏನು ಬೇಡ, ಸ್ವಂತಗಳಿಸಿ ಓದುತ್ತೇನೆ ಎಂದು ಹೇಳುವ ಮಗನ ದಿಟ್ಟತನದ ಮಾತುಗಳು ಆತ್ಮವಿಶ್ವಾಸದ ಪ್ರತೀಕವಾಗಿವೆ ಎನ್ನಬಹುದು.

ಸಗರ ಕೃಷ್ಣಾಚಾರ್ಯರ. 'ಇಂದ್ರೀಯಾಣಿ ಪ್ರಮಾದಿನಿ' ಯಲ್ಲಿ ಬರುವ ರಮೇಶ ಮತ್ತು ಉಮೇಶರು ಪರಸ್ಪರ ಗೆಳೆಯರು ಉಮೇಶ ನಾಸ್ತಿಕ ಹಾಗೂ ರಮೇಶ ಆಸ್ತಿಕ. ನಾಸ್ತಿಕನಾದವನು ಒಮ್ಮೆಲೆ ಆಸ್ತಿಕನಾಗಲು ಒಪ್ಪಿಕೊಳ್ಳುವುದು ಈ ಕಥಾವಸ್ತು, ಧಾರ್ಮಿಕ ಆಚರಣೆ ಅನ್ನುವುದು ಮನುಷ್ಯ ತನ್ನ ಮನಃ ಶಾಂತಿಗಾಗಿ ರೂಪಿಸಿಕೊಂಡಿರುವ ಒಂದು ಮಾರ್ಗ ಎನ್ನಬಹುದು.

ಗೀತಾ ನಾಗಭೂಷಣರ 'ಢಾಲು' ಕಥೆ ಇಂದಿನ ಸಮಾಜದಲ್ಲಿ ಗೌಡರು ಅಥವಾ ಮೇಲ್ವರ್ಗದವರು ಬಡ ಅಸಾಯಕ ಸ್ತ್ರೀಯರನ್ನು ಹೇಗೆ ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ ಎನ್ನವ ಅಂಶ ತೋರಿಸಿ ಕೊಡುವುದರ ಜೊತೆಗೆ ಹಳ್ಳಿ ಜನ ದೇವರು- ಧರ್ಮ ಎಂದರೆ ಹೇಗೆ ಭಯ ಭೀತಿಯಿಂದ ತಲೆಬಾಗುತ್ತಾರೆ ಎನ್ನುವ ಕಟು ಸತ್ಯ ಬೆಳಕಿಗೆ ತಂದಿದ್ದಾರೆ. ಪರಮೇಶ ಎನ್ನುವ ಗೌಡ ತನ್ನ ಅತಿಯಾದ ಕಾಮದಾಹಕ್ಕೆ ಊರ ಸ್ತ್ರೀಯರೆಲ್ಲರನ್ನು ಬಲಿಪಶುಗಳಾಗಿ ಮಾಡಿಕೊಳ್ಳುತ್ತಾನೆ. ಆದರೆ ತನ್ನ ಹೆಂಡತಿ ತನ್ನ ಆಳುಮಗ, ಮರಗ್ಯನನ್ನು ಸ್ವೇಚ್ಛೆಯಿಂದ ಕೂಡಿದ್ದಕ್ಕೆ ಕೆಂಡಮಂಡಲವಾಗಿ ಅವನನ್ನು ಕೊಲೆಮಾಡುತ್ತಾನೆ. ಅಲ್ಲದೆ ಆ ಕೊಲೆ ಆರೋಪ ತನ್ನ ಮತ್ತೊಬ್ಬ ಆಳುಮಗನಾದ ಕರ್ರ್ಯಾನ ಮೇಲೆ ಹೋರಿಸಿ ಆತನನ್ನು ಜೈಲಿಗೆ ಕಳುಹಿಸುತ್ತಾನೆ ಮತ್ತು ಇದಿಷ್ಟು ಅನ್ಯಾಯ ಅತ್ಯಾಚಾರ ಸಾಲದೆಂಬಂತೆ ಕರ್ರ್ಯಾನ ಹೆಂಡತಿಗೆ ಲೈಂಗಿಕ ಹಿಂಸೆ ಕೊಡಲು ಪ್ರಯತ್ನಿಸುತ್ತಾನೆ. ಇದರಿಂದ ರಕ್ಷಣೆ ಪಡೆಯಲು ಕರ್ರ್ಯಾನ ಹೆಂಡತಿಯಾದ ಮಾಗಿ ಮರಗವ್ವನ ಕೃತಕ ಅವತಾರ ತಾಳಬೇಕಾದ ಅನಿವಾರ್ಯತೆ ಪರಿಣಾಮಕಾರಿಯಾಗಿ ಮೂಡಿಬಂದಿದೆ.

'ಢಾಲು' ಕಥೆಯ ಮಾಗಿ ತನ್ನ ಶೀಲ ರಕ್ಷಣೆಗಾಗಿ ಮರಗವ್ವನ ಅವತಾರ ತಾಳುವ ಸಾಹಸಕ್ಕೆ ಅನಿವಾರ್ಯವಾಗಿ ಅಣಿಯಾಗಬೇಕಾಗುತ್ತದೆ. ಏಕೆಂದರೆ ದೇವರು-ದೇವಿ ಎಂದರೆ ಜನ ಭಯ-ಭಿತರಾಗಿ ಗೌರವದಿಂದ ನಡೆದುಕೊಳ್ಳುತ್ತಾರೆ. ಎನ್ನುವ ಅಂಶ ಅರಿತಿದ್ದ ಮಾಗಿ ತನ್ನ ಶೀಲ ರಕ್ಷಣಾ ಕವಚವಾಗಿ ಮರಗವ್ವನ ಹೆಸರನ್ನು ಉಪಯೋಗಿಸಿಕೊಳ್ಳುತ್ತಾಳೆ. ಇಲ್ಲಿ ಮಾಗಿ ಮರಗವ್ವನ

ಅವತಾರ ತಾಳಿದಾಗ ಜನ ಕೂಡ ನಂಬಿ ಭಯ-ಭಕ್ತಿ ಯಿಂದ ನಡೆದುಕೊಳ್ಳುವುದು ಕಂಡುಬರುತ್ತದೆ. ಗೀತಾ ನಾಗಭೂಷಣರು ಈ ಕಥೆಯ ಮೂಲಕ ಜನ ಮನದಲ್ಲಿ ದೇವಿ-ದೇವರ ಬಗ್ಗೆ ಇದ್ದ ಪ್ರಬಲವಾದ ಭಯಭಕ್ತಿ ವಿಶ್ವಾಸ ನಂಬಿಕೆಯನ್ನು ತೆರೆದು ತೋರಿಸಿದ್ದಾರೆ.

ಸಿದ್ಧರಾಮ ಹೊನ್ಕಲ ಅವರ 'ಒಂದು ಹಾವಿನ ಸುತ್ತ' ಕಥೆ ತುಂಬಾ ವಿಚಿತ್ರವೆನಿಸಿದರೂ ಧಾರ್ಮಿಕ ಅಂಧಶ್ರದ್ದೆಗೆ ಜೀವಂತ ಸಾಕ್ಷಿಯಾಗಿದೆ. ಆಕಸ್ಮಿಕವಾಗಿ ಸಮಾಧಿಯಲ್ಲಿ ಸೇರಿಕೊಂಡು ಹಾವಿನ ಸುತ್ತ ಸುತ್ತಿಕೊಳ್ಳುವ ತಲೆ ಬುಡವಿಲ್ಲದ ಸುದ್ದಿಗಳು ಆ ಜಾಗದಲ್ಲಿ ಒಂದು ಬೃಹತ್ ಮಠದ ನಿರ್ಮಾಣದಲ್ಲಿ ಪರ್ಯಾವಸಾನ ಹೊಂದುತ್ತದೆ. ಇದು ಈ ಕಥೆಯ ಸಂಕ್ಷಿಪ್ತ ಹಂದರ.

ಧರ್ಮದ ಹಾಗೂ ಶರಣರ ಹೆಸರಿನಲ್ಲಿ ನಿರಂತರವಾಗಿ ಮುಗ್ಧ ಜನರ ಮೇಲೆ ಆಗುತ್ತಿರುವ ಶೋಷಣೆಯನ್ನು ಈ ಕಥೆ ಪ್ರತಿನಿಧಿಸುತ್ತದೆ. ಹಾವು ಸೇರಿದ ಸಮಾಧಿಯ ಹೊಲದ ಕಲ್ಲಪ್ಪಗೌಡ ಧರ್ಮ ಸಂಕಟಕ್ಕೆ ಸಿಲುಕಿ ತನ್ನ ಇದ್ದ ನಾಲ್ಕು ಎಕರೆ ಭೂಮಿಯನ್ನು ಮಠ ನಿರ್ಮಾಣಕ್ಕೆ ನೀಡಿ ಸಾಲ ತೀರಿಸಲು ತನ್ನ ಪರಿವಾರದೊಂದಿಗೆ ಮುಂಬೈಗೆ ಹೊರಟಿದ್ದು ಆತನ ದುರಂತಕ್ಕೆ ಸಾಕ್ಷಿಯಾಗಿದೆ. ಇಲ್ಲಿ ಕಲ್ಲಪ್ಪಗೌಡ ನಾಡಿನಲ್ಲಿ ಧರ್ಮ ಸಂಕಟಕ್ಕೆ ಸಿಲುಕಿದವರ ಪ್ರತಿನಿಧಿಯಾಗಿರುವುದು ಕಂಡುಬರುತ್ತದೆ.

'ಪವಾಡ' ಕಥೆಯ ಮೂಲಕ ಸಿದ್ಧರಾಮ ಹೊನ್ಕಲರು ಒಂದು ಅದ್ಭುತ ಪವಾಡ ಪ್ರದರ್ಶನವೇ ಮಾಡಿದ್ದಾರೆ. ಅದು ಧರ್ಮಾಪುರ ಹಳ್ಳಿಯ ಶಿವಾನಂದ ಸ್ವಾಮಿಗಳು ಮಠದ ಉಸ್ತುವಾರಿ ತೊರೆದು ಸಂಸಾರಸ್ತರಾಗುವುದೇ ಆಗಿದೆ. ಧರ್ಮಗುರುಗಳು ಎಂದರೆ ಬ್ರಹ್ಮಚಾರಿಗಳೇ ಆಗಿರಬೇಕೆನ್ನುವ ಸಂಪ್ರದಾಯಕ್ಕೆ ಶಿವಾನಂದ ಸ್ವಾಮಿಯ ಮೂಲಕ ಹೊನ್ಕಲರು ಮಂಗಳ ಹಾಡಿಸಿದ್ದಾರೆ ಸಂಸಾರದಲ್ಲಿದ್ದುಕೊಂಡು ಕೂಡ ಧರ್ಮ ದೇವರ ಆರಾಧನೆ ಮಾಡಬಹುದು. ಆ ಮೂಲಕ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬಹುದು ಎನ್ನುವ ಆಶಾಯ ಈ ಪವಾಡ ಒಳಗೊಂಡಿದೆ

ಹೊನ್ಕಲರ ಇನ್ನೊಂದು ಕಥೆ 'ನಾಯಿಬಾಲ' ಒಂದು ಮಹತ್ವದ ಕಥೆಯಾಗಿದೆ ದೇವದಾಸಿ ಪದ್ಧತಿಯ ನಿರ್ಮೂಲನೆಗಾಗಿ ಮಾಡುವ ಪ್ರಯತ್ನಗಳು ವಿಫಲವಾಗಲು ಕಾರಣಗಳನ್ನು ನಾವು ಈ ಕಥೆಯಲ್ಲಿ ಕಾಣಬಹುದು. ಪ್ರೊ. ದಯಾನಂದನಂತಹ ವಿಚಾರವಾದಿಗಳ ಪ್ರಗತಿ ಪರ ಚಿಂತಕರ ಚಿಂತನೆಗಳು ಹೇಗೆ ಅಪಹಾಸ್ಯಕ್ಕೊಳಗಾಗುತ್ತಿವೆ ಎನ್ನುವುದು ಪರಿಣಾಮಕಾರಿಯಾಗಿ 'ನಾಯಿ ಬಾಲ' ಬಿಂಬಿಸುತ್ತದೆ. ಇಲ್ಲಿ ದೇವದಾಸಿಯರು ಊರಿನ ಸಾಹುಕಾರನೊಂದಿಗೆ ಬೇರೆತು ದಯಾನಂದರ ಸಮ್ಮುಖದಲ್ಲಿ ಮದುವೆ ನಾಟಕವಾಡುತ್ತಾರೆ. ಈ ಕಪಟ ಮದುವೆ ನಾಟಕದ ಸೂತ್ರದಾರಿ ಊರಿನ ಸಾಹುಕಾರನಿರುವುದು ಸ್ಪಷ್ಟವಾಗಿದೆ ಇಂಥ ಕಪಟ ಮದುವೆಯ ನಾಟಕದ ಅರಿವಿರದ ದಯಾನಂದರು ನಿಜವಾಗಿಯು ದೇವದಾಸಿಯರು ನೆಮ್ಮದಿಯ ಗ್ರಹಸ್ಥ ಜೀವನ ಸಾಗಿಸುವಂತಾಯಿತೆಂದು ಸಂತೋಷಪಡುತ್ತಾರೆ. ಆದರೆ ಇಲ್ಲಿ ಹಣದಾಸೆಗಾಗಿ ದೇವದಾಸಿಯರು ತಮಗೆ ದೊರಕಿದ ಒಂದು ನಿರ್ಮಲ ಬದುಕಿನ ಸದಾವಾಕಾಶವನ್ನು ಕೈಯಾರೆ ಕಳೆದುಕೊಳ್ಳುವುದು ವಿಪರ್ಯಾಸವೇ ಆಗಿದೆ.

'ಹಬ್ಬ ಮತ್ತು ಬಲಿ' ಕಥೆಯಲ್ಲಿ ಬಿ.ಟಿ. ಲಲಿತಾನಾಯಕರು ಬಂಜಾರ ಜನಾಂಗದಲ್ಲಿನ ಧಾರ್ಮಿಕ ವಂಚನೆಯನ್ನು ಹೇಳುತ್ತಾ, ಧರ್ಮದ ಹೆಸರಿನಲ್ಲಿ ಆತ್ಮ ವಂಚನೆ ಮಾಡಿಕೊಂಡದ್ದೇ ಶೋಷಣೆಗೆ ಕಾರಣವಾಗಿದೆ, ಜೀತದ ಉಗಮದಲ್ಲಿ ಪರ್ಯವಸಾನಗೊಳ್ಳುವ ದಲಿತನೋರ್ವನ ದುರಂತವನ್ನು ಹೇಳಿದ್ದಾರೆ. ದಿನಕ್ಕೆರಡು ಹೊತ್ತಿನ ಊಟಕ್ಕೂ ಗತಿಯಿಲ್ಲದ 'ಸಣ್ಣು' ಈ ಸಲವಾದರೂ ತನ್ನ ಹಳ್ಳಿಗರ ಸರಿ ಸಮಾನವಾಗಿ ಅಲ್ಲದಿದ್ದರೂ ಸಣ್ಣ ಮರಿಯನ್ನಾದರೂ ಬಲಿ ಕೊಟ್ಟು ಹಬ್ಬ ಆಚರಿಸಬೇಕು. ದೇವಿಯನ್ನು ತೃಪ್ತಿಪಡಿಸಬೇಕು. ಆಗಲೇ ತನ್ನ ಬಡತನ ಕಳೆದು ಇತರರಂತೆ ತನ್ನ ಬದುಕೂ ಸುಖಮಯವಾಗುತ್ತದೆಂದು ನಂಬಿ ಟಗರಿನ ಮರಿಯೊಂದನ್ನು ತಂದು ಬಲಿಕೊಟ್ಟು "ನಮ್ಮವ್ನೇ ತಾಯಿ ವರ್ಷಾ ವರ್ಷಾ ಹಿಂಗೆ ಹಬ್ಬ ಮಾಡಿ ನಿನ್ನ ಹರ್ಕೆ ಮಟ್ಸೊ ಯೋಕ್ತೆ ಕೊಡವ್ವ ನಮ್ಮ ಬಡತನ ಬಯಲು ಮಾಡವ್ವ ಎಂದು ಬೇಡಿಕೊಳ್ಳುತ್ತಾನೆ"[೧೪] ಹೀಗೆ ಹಬ್ಬ ಆಚರಿಸಿ ತನ್ನ ಬಳಗಕ್ಕೆಲ್ಲ ಬಾಡದ ಊಟ ಹಾಕಿಸಿ ತೃಪ್ತಿ ಪಡಿಸುವಲ್ಲಿ ದೇವಿಯನ್ನು ತೃಪ್ತಿಪಡಿಸಿದೆನೆಂದೇ ಭಾವಿಸುವ ಸಣ್ಣು ತನ್ನ ದಟ್ಟ ದಾರಿದ್ರ್ಯದ ಸ್ಥಿತಿಯಲ್ಲೂ ಹಬ್ಬದಾಚರಣೆಯ ಮೌಢ್ಯಕ್ಕೆ ಕಟ್ಟುಬಿದ್ದು ಗೌಡನಲ್ಲಿ ೩೦೦/-ರೂಪಾಯಿ ಸಾಲವನ್ನು ಪಡೆದು ಅದಕ್ಕೆ ಪ್ರತಿಯಾಗಿ ಒಂದು ವರ್ಷಕ್ಕೆ ಜೀತದಾಳಾಗಿರಲು ಒಪ್ಪಿಕೊಂಡು ಬರುವುದೇ ಅವನ ದುರಂತಕ್ಕೆ ಕಾರಣವಾಗಿರುವ ಸತ್ಯವನ್ನು ಲಲಿತಾ ನಾಯಕರು ಸರಳವಾಗಿ, ನೇರವಾಗಿ ಅನಾವರಣಗೊಳಿಸಿದ್ದಾರೆ.

ಭಾಲಚಂದ್ರ ಜಯಶೆಟ್ಟಿಯವರ 'ಕೋಡ್ಗಲ್ಲಿನ ಕೂಗು' ಒಂದು ಮುಖ್ಯ ಕಥೆಯಾಗಿದೆ, ಫಕೀರ, ಅವನ ಹೆಂಡತಿ ಲಚ್ಚಿ ಮತ್ತು ಮಗ ನಿಂಗ ಇವರನ್ನೊಳಗೊಂಡ ಒಂದು ಕುಟುಂಬದ ದುರಂತ ಚಿತ್ರಣವನ್ನು ಈ ಕಥೆ ಒಳಗೊಂಡಿದೆ. ಫಕೀರ ಹೆಂಡತಿ ಮಗನೊಂದಿಗೆ ಹರಕೆ ತೀರಿಸಲು ಶಿವಗಂಗೆ ಬೆಟ್ಟಕ್ಕೆ ಹೋಗುತ್ತಾರೆ. ಮೂಢನಂಬಿಕೆಗೆ ಒಳಗಾಗಿ ಉಪವಾಸ ಮೃತಗಳಿಂದ ನರಳಿದ ಬಸುರಿ ಹೆಂಗಸು ಲಚ್ಚಿ ಶಿವಗಂಗೆ ಬೆಟ್ಟದ ಮೆಟ್ಟಿಲು ಹತ್ತಲಾರದೇ ಬಾಯಾರಿಕೆಯಾಗಿ ಕೊನೆಗೆ ಅಲ್ಲಿಯೇ ಪ್ರಾಣವನ್ನು ಬಿಡುತ್ತಾಳೆ. ಲಚ್ಚಿಗೆ ಕುಡಿಯಲು ನೀರು ತರಲು ಹೋದ ಫಕೀರ ನೀರಿನ ಕೊಳದಲ್ಲಿ ಮುಳುಗುತ್ತಿದ್ದ ಯುವತಿಯನ್ನು ಕಂಡು, ಮಾನವೀಯತೆ ದೃಷ್ಟಿಯಿಂದ ತನ್ನ ಜೀವಕ್ಕೂ ಹೆದರದೇ ಅವಳನ್ನು ಬದುಕಿಸಿದ. ಆದರೆ ಈಜಿನ ದಣಿವಿನಿಂದಾಗಿ ಅವನು ನೀರಿನಲ್ಲಿ ಮುಳುಗಿ ಸಾಯುತ್ತಾನೆ. ಆದರೆ ಅಲ್ಲಿಯ ಜನ ಯಾರು ಅವನನ್ನು ಕಾಪಾಡುವುದಿಲ್ಲ. ಇತ್ತ ನಿಂಗ ತಂದೆ ಮರಳಿ ಬರದೇ ಇದ್ದುದು ಕಂಡು ಹುಡುಕಲು ಹೋಗಿ ಬೆಟ್ಟಹತ್ತಿ ಕೋಡ್ಗಲ್ಲಿನಿಂದ ಕಾಲು ಜಾರಿ ಬಿದ್ದು ಸಾಯುತ್ತಾನೆ. ಹೀಗೆ ಮೂಢನಂಬಿಕೆಯಿಂದ ಹರಕೆ ತೀರಿಸಲು ಬಂದ ಮೂರು ಜೀವಗಳು ಒಂದೇ ಸ್ಥಳದಲ್ಲಿ ಪ್ರಾಣ ತ್ಯಜಿಸಿದರ ದಾರುಣ ಚಿತ್ರಣ ಇಲ್ಲಿ ಕಂಡು ಬರುತ್ತದೆ.

ಇನ್ನೊಂದು ಕಥೆಯಾದ 'ಎಲ್ಲಮ್ಮನ ಸೇವೆ' ಇಲ್ಲಿ ದೇವರ ಹೆಸರಿನಲ್ಲಿ ನಡೆಯುವ ಶೋಷಣೆಯನ್ನು ಕಥೆಗಾರರು ಅತ್ಯಂತ ಮಾರ್ಮಿಕವಾಗಿ ತಿಳಿಸಿದ್ದಾರೆ. ಹೊಲೆಯರ ಕಾಳನ

ಹದಿಹರೆಯದ ಮಗಳು ಚೆನ್ನಿಯನ್ನು ಬೆತ್ತಲೆ ಸೇವೆಯಲ್ಲಿ ತೊಡಗಿಸಿ ಮನರಂಜನೆ ಮಾಡಿಕೊಳ್ಳುವ ಊರಿನ ಗೌಡ-ಕುಲಕರ್ಣಿಯರು ತಮ್ಮ ಧರ್ಮಕ್ಕೆ ದೇವರಿಗೆ ಅನ್ಯಾಯ ಮಾಡುವವರಾಗಿದ್ದಾರೆ. ಈ ಕುತಂತ್ರಿ ಗೌಡ-ಕುಲಕರ್ಣಿಯರು ತಮ್ಮ ಹೆಂಡತಿಯರಿಗೆ ಗಂಡರಾಗದ ಈ ಪ್ರಮುಖರು ಊರಿನಲ್ಲಿಯ ಹರೆಯದ ಯುವತಿಯರ ಮೇಲೆ ಕಣ್ಣು ಹಾಕುತ್ತಿದ್ದರು. ಸುಂದರ ರೂಪವುಳ್ಳ ಯುವತಿ ಚೆನ್ನಿಯನ್ನು ಬೆತ್ತಲೆ ಸೇವೆಗೆ ಒಪ್ಪಿಸುವಂತೆ ಪೂಜಾರಿಯೊಂದಿಗೆ ಒಪ್ಪಂದ ಮಾಡಿಕೊಳ್ಳುತ್ತಾರೆ. ಏನೂ ಅರಿಯದ ಮುಗ್ಧ ಜನರಿಗೆ ದೇವರ ಹೆಸರಿನಲ್ಲಿ ಹೆದರಿಸಿ ಶೋಷಣೆಗೆ ಒಡ್ಡುತ್ತಾರೆ.

ಹೀಗೆ ದೇವರು, ಧರ್ಮ ಎಂಬ ಮೂಢ ನಂಬಿಕೆಗಳಿಗೆ ಬಲಿಯಾಗಿ ಚೆನ್ನಿಯಂತಹ ಅನೇಕ ಸ್ತ್ರೀಯರು ಇಂದಿಗೂ ಕೆಲವು ಮೂಲೆಗಳಲ್ಲಿ ಶೋಷಣೆ ಅನುಭವಿಸುತ್ತಿದ್ದಾರೆ. ಇಂತಹ ಸಂಪ್ರದಾಯ ಸಂಪೂರ್ಣವಾಗಿ ಹೊಗಲಾಡಿಸುವುದು ನಮ್ಮೆಲ್ಲರ ಹೊಣೆ ಎಂಬ ವಿಚಾರವನ್ನು ಜಯಶೆಟ್ಟಿಯವರು ಇಲ್ಲಿ ಸ್ಪಷ್ಟಪಡಿಸಿದ್ದಾರೆ.

**ದಲಿತ ಚಿತ್ರಣ:**

ಮಾನವ ಕುಲ ಕೋಟಿಯೆಲ್ಲಾ ಒಂದೇ ಎಂದು ಅನಾದಿ ಕಾಲದಿಂದಲೂ ಹೇಳುತ್ತಲೇ ಬಂದಿದ್ದರೂ ಒಳಗೊಳಗೆ ಹಲವಾರು ಗುಂಪುಗಳು ಮಾಡಿ ಆಯಾ ಗುಂಪುಗಳಿಗೆ ಪಂಗಡಗಳ ರೂಪಕೊಟ್ಟು ಅವುಗಳಲ್ಲಿಯೇ ಹಲವಾರು ಜಾತಿ ಭೇದಗಳನ್ನು ನಮ್ಮ ಪೂರ್ವಜರು ಮಾಡಿರುವುದು ಇಂದಿಗೂ ಸಮಾಜದ ಭದ್ರತೆಗೆ ಏಕತೆಗೆ ಅಡ್ಡಿಯಾಗಿದೆ. ಹೀಗೆ ಸಮಾಜದಲ್ಲಿ ಬೇರೆ ಬೇರೆ ಜಾತಿಗಳನ್ನು ನಿರ್ಮಾಣ ಮಾಡಿ ಅವುಗಳಲ್ಲಿ ಕೆಲವುಗಳಿಗೆ ಅತೀ ಕೀಳು ಮಟ್ಟಕ್ಕೆ ತಳ್ಳಿ ಸಮಾಜದಲ್ಲಿ ಯಾವುದೇ ರೀತಿಯ ಸ್ವಾತಂತ್ರ್ಯತೆಯನ್ನು ಕೊಡದೆ ಮಾನಸಿಕವಾಗಿ ಹಿಂಸೆ ಕೊಟ್ಟು ಬದುಕಿನಲ್ಲಿ ನಿರರ್ಗಳವಾಗಿ ಉಸಿರಾಡದಂತೆ ಮಾಡಿರುವ ದಾರಣ ಚಿತ್ರಣ/ಪರಿಸ್ಥಿತಿ ಇನ್ನೂ ಜೀವಂತವಿದೆ. ಹೀಗೆ ಸಮಾಜದ ಹಲವಾರು ಮೇಲ್ವರ್ಗಗಳ ತುಳಿತಕ್ಕೆ ಸಿಕ್ಕು ಬದುಕಿನಲ್ಲಿ ಪಡಬಾರದ ಪಾಡುಪಟ್ಟು ಕೊನೆಗೆ ಈ ದಬ್ಬಾಳಿಕೆ, ಶೋಷಣೆಯ ವಿರುದ್ಧ ಬಂಡೆದ್ದು ನಿಂತಿರುವ ಪ್ರಸಂಗಗಳು ಹೈದರಾಬಾದ್ ಕರ್ನಾಟಕದ ಕೆಲ ಕಥೆಗಾರರು ತಮ್ಮ ಕಥೆಗಳ ಮೂಲಕ ಮನ ಮಿಡಿಯುವಂತೆ ಚಿತ್ರಿಸಿದ್ದಾರೆ, ಸುಗಯ್ಯ ಹಿರೇಮಠ, ರಾಜಶೇಖರ ಹತಗುಂದಿ, ಶ್ರೀಕಾಂತ ಪಾಟೀಲ, ಬಸವರಾಜ ಮಠಪತಿ, ಮಲ್ಲಿಕಾರ್ಜುನ ಹಿರೇಮಠ ಮುಂತಾದವರು ಪ್ರಮುಖರಾಗಿದ್ದಾರೆ.

ಚೆನ್ನಣ್ಣ ವಾಲೀಕಾರರ 'ಕಪ್ಪು ಕಥೆಗಳು' ಸಂಕಲನದಲ್ಲಿ ಬರುವ ಹೊಲಗೇರಿ, ಅಡಿ ಜಾತಿಗಳು, ಎರಡು ಕಥೆಗಳು ದಲಿತ ತಿಪ್ಪೆಯೊಂದರಲ್ಲಿ ಮೂತ್ರ ಮಾಡಿದ್ದಕ್ಕಾಗಿ ಸಾಧು ವ್ಯಕ್ತಿ ಶಿಕ್ಷಕನನ್ನು ಕೊಲೆ ಮಾಡುವ ಘಟನೆಯೊಂದಿಗೆ ಈ ಕಥೆ ಆರಂಭವಾಗುತ್ತದೆ. ಈ ಕಥೆ ದಲಿತ ಜನಾಂಗ ಅನುಭವಿಸುತ್ತಿರುವ ನಾನಾ ರೀತಿಯ ಹಿಂಸೆ, ದಬ್ಬಾಳಿಕೆ ಶೋಷಣೆಗಳ ದಟ್ಟ ಚಿತ್ರಣ

ಮೂಡಿಬಂದಿದೆ. ಮೇಲ್ವರ್ಗದ ಜನರ ಶೋಷಣೆಗೆ ಸಂಘಟಿತವಾಗಿ ಕೆಳ ಜನಾಂಗ ಪ್ರತಿಭಟಿಸಬೇಕು, ಇಲ್ಲದಿದ್ದರೆ ಏಕಾಂಗಿ ಹೋರಾಟಕ್ಕೆ ಫಲ ದೊರೆಯುವುದಿಲ್ಲ. ಅಥವಾ ಏಕಾಂಗಿಯಾಗಿ ಪ್ರತಿಭಟನೆ ಮಾಡಿದರೆ ಪ್ರತಿಭಟನೆ ಮಾಡಿದ ವ್ಯಕ್ತಿಯೇ ದುರಂತಕ್ಕೆ ಇಡಾಗಬೇಕಾಗುತ್ತದೆ. ಇದು ನಮ್ಮ ಸಮಾಜದ ವ್ಯವಸ್ಥೆಯ ಅನಿಷ್ಟವಾಗಿದೆ. ಇದರ ನಿರ್ಮೂಲನೆಗೆ ಎಲ್ಲ ದಲಿತ ಮತ್ತು ಹಿಂದುಳಿದ ವರ್ಗಗಳು ಸಂಘಟಿತ ಪ್ರಯತ್ನ ಮಾಡಬೇಕು ಎನ್ನುವ ಅಂಶ ಇಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ.

ಇನ್ನೊಂದು ಕಥೆಯಾದ 'ಅಡಿ ಜಾತಿ'ಯು ಇದೇ ಅಂಶವನ್ನು ಒಳಗೊಂಡಿದೆ. ಊರಿನ ಎರಡು ಮದಗಜಗಳಂತಿದ್ದ ಮಾಲೀಗೌಡ ಮತ್ತು ಕುಲಕರ್ಣಿಯರು ಇಡಿ ಊರನ್ನೇ ಎರಡು ಪಕ್ಷಗಳಾಗಿ ಮಾಡಿ ಹೊಡೆದಾಟಕ್ಕೆ ಹಚ್ಚಿ ತಾವು ಮಾತ್ರ ಸಂತೋಷದಿಂದ ಇರುವುದೇ ಇಲ್ಲಿಯ ವಸ್ತು. ಈ ಕುತಂತ್ರಿ ಕುಲಕರ್ಣಿ ಬಡವ, ದಲಿತ ಮಹಿಳೆಯರನ್ನು ದಬ್ಬಾಳಿಕೆಯಿಂದ ಶೀಲಹರಣ ಮಾಡಿದರೆ, ಆಶ್ರಯ ಕೊಡುವ ನೆಪದಲ್ಲಿ ಮಾನಕಳೆಯುವುದು ಗೌಡನ ತಂತ್ರ, ಇಲ್ಲಿ ಗೌಡ ಮತ್ತು ಕುಲಕರ್ಣಿಗಳು ಬಡ ದಲಿತ ಮಹಿಳೆಯರ ಬಾಳನ್ನು ಹಾಳುಮಾಡುವವರೆ ಆದರೆ ದಾರಿ ಮಾತ್ರ ಬೇರೆ. ಕುತಂತ್ರಿ ಕುಲಕರ್ಣಿಯ ತಂಗಿ ಮನೆ ಜೀಪಿನ ಚಾಲಕನೊಂದಿಗೆ ಅನೈತಿಕ ಸಂಬಂಧ ಬೆಳೆಸಿ ಬಸುರಿಯಾಗಿ ಆತ್ಮಹತ್ಯೆ ಮಾಡಿಕೊಂಡಿದ್ದಕ್ಕೆ ರೊಚ್ಚಿಗೇಳುತ್ತಾನೆ. ಆರೋಪಿಯಾದ ಹುಸೇನಿಯು ತನ್ನ ಮೇಲಿನ ಆರೋಪವನ್ನು ಕೇಶ್ಯಾನ ಮೇಲೆ ಹೊರಿಸಿ ಆತನ ಜೀವನ ಹಾಳು ಮಾಡುತ್ತಾನೆ. ಆದರೆ ಕುಲಕರ್ಣಿ ಕೇಶ್ಯಾನ ಮೇಲೆ ಕೊಲೆಯ ಆರೋಪ ಹೊರಿಸಿ ಅವನ ಜೀವನವನ್ನೇ ಹಾಳು ಮಾಡುತ್ತಾನೆ. ಅಲ್ಲದೆ ಅಲ್ಪ-ಸ್ವಲ್ಪವಿದ್ದ ಕೇಶ್ಯಾನ ಆಸ್ತಿಯನ್ನು ತನ್ನ ಸ್ವಾಧೀನಕ್ಕೆ ಮಾಡಿಕೊಳ್ಳುತ್ತಾನೆ. ಇದು ಕಥೆಯ ವಸ್ತು. ಊರ ಹೆಂಗಸರನ್ನು ಕೆಟ್ಟ ದೃಷ್ಟಿಯಿಂದ ಕಾಣುವ ಗೌಡ ಕುಲಕರ್ಣಿಯರು ತಮ್ಮ ಮನೆಯ ಹೆಣ್ಣುಮಕ್ಕಳು ಮಾತ್ರ ಗರತಿಯರಾಗಿರಬೇಕು ಉಳಿದವರು ಸೂಳೆಯರಾದರೂ ಚಿಂತೆಯಿಲ್ಲ ಎಂಬ ಮನೋಧರ್ಮದವರಾಗಿದ್ದಾರೆ. ಇಂಥ ಜನ ಇರುವವರೆಗೆ ಮಹಿಳೆಯರ ಬದುಕಿಗೆ ನೆಮ್ಮದಿ ದೊರಕುವುದಿಲ್ಲ. ಇಂತಹ ಕುತಂತ್ರಿಗಳಿಗೆ ಪಾಠ ಕಲಿಸುವುದು ಎಲ್ಲರ ಹೊಣೆಯಾಗಿದೆ.

'ಬುದ್ಧನ ನಾಡಿನಲ್ಲಿ' ಬರುವ ಠಾಕೂರ ಬಡ ವ್ಯಕ್ತಿಯಾದ ರತನಸಿಂಗನ ಪರಿವಾರವನ್ನು ಆಸ್ತಿಗಾಗಿ ಸರ್ವನಾಶ ಮಾಡಿದ ಭಯಾನಕ ವ್ಯಕ್ತಿಯಾಗಿದ್ದಾನೆ. ಹಾಡ ಹಗಲಿನಲ್ಲೇ ಅದು ಪೋಲಿಸನವರ ಎದುರಿಗೆ ರತನಸಿಂಗನ ತಮ್ಮನಿಗೆ ಗುಂಡಿಟ್ಟು ಕೊಂದರು ಸಹ ಸುಮ್ಮನಿದ್ದ ಪೋಲಿಸರು ಠಾಕೂರನ ಗುಲಾಮರಂತೆ ವರ್ತಿಸುವುದು ಆ ಇಲಾಖೆಗೆ ಕಳಂಕ ತರುವ ಸಂಗತಿ.

ನಮ್ಮ ನಾಡಿನ ಆಡಳಿತ ವ್ಯವಸ್ಥೆ, ರಕ್ಷಣಾ ವ್ಯವಸ್ಥೆಯಲ್ಲಿಯ ಭ್ರಷ್ಟತೆಯನ್ನು ಈ ಕಥೆ ಮನನ ಮಾಡಿಕೊಡುತ್ತದೆ. ಇಂದು ಹಣವೊಂದಿದ್ದರೆ ಸಾಕು ಕೊಲೆ, ಸುಲಿಗೆ ಮಾಡಿಯೂ ಧೈರ್ಯದಿಂದ ಜೀವಿಸಬಹುದು ಎನ್ನುವ ಅಂಶವನ್ನು ಇಲ್ಲಿ ವಾಲೀಕಾರರು ತುಂಬಾ ಮಾರ್ಮಿಕವಾಗಿ ವ್ಯಕ್ತಪಡಿಸಿದ್ದಾರೆ.

ಗೀತಾ ನಾಗಭೂಷಣರ ಕಥೆಯಾದ 'ಘುಂಡಿ ಪೂಜಾರಿ ಆದಾಗ' ಎಂಬ ಕಥೆ ವಿಶಿಷ್ಟತೆಯಿಂದ ಕೂಡಿದೆ. ಕಾಲಾಂತರದಿಂದ ನಮ್ಮ ಸಮಾಜದಲ್ಲಿ ಮೇಲ್ವರ್ಗದ ಜನ ಊರ ಹೊರಗೆ ಇಟ್ಟಿದ್ದ ಹೊಲೆ, ಮಾದಿಗರನ್ನು ಮಂದಿರದೊಳಗೆ ಕರೆ ತರುವ ಸಾಹಸ ಮಾಡಿದ್ದಾರೆ. ಪ್ರಸ್ತುತ ಪದ್ಧತಿ ನಮ್ಮ ಸಮಾಜಕ್ಕೆ ತೀರ ಅಪರಿಚಿತ ಕಥೆಗಾರ್ತಿ ತಮ್ಮ ಈ ಕಥೆಯ ಮೂಲಕ ಈ ಪವಾಡ ಮಾಡಿ ತೋರಿಸಿರುವುದು ಅದ್ಭುತ ಸಾಹಸವೆಂದೇ ಹೇಳಬೇಕಾಗುತ್ತದೆ. ಸಮಾಜದ ಕೆಳಸ್ತರದ ಜನ ಸಮಾಜದ ಮೇಲ್ವರ್ಗದವರಿಗೆ ಸಮಾನವಾಗಿ ಬದುಕುವಂತಾಗಬೇಕೆಂಬ ಆಶಯ ಈ ಕಥೆ ವ್ಯಕ್ತಪಡಿಸುತ್ತದೆ. ಕಥೆಗಾರ್ತಿಗೆ ದಲಿತ ಮತ್ತು ಹಿಂದುಳಿದ ಜನಾಂಗದ ಬಗೆಗಿದ್ದ ಕಾಳಜಿ ಮೆಚ್ಚುವಂತದ್ದಾಗಿದೆ. ಪ್ರಗತಿಪರ ಮಾರ್ಗದಲ್ಲಿ ಸಮಾನತೆಯ ಧೋರಣೆ ಸಾರಿ ಕೆಳ ಜಾತಿಯ ಘುಂಡಿಯನ್ನು ಊರ ದೇವಸ್ಥಾನದ ಪೂಜಾರಿಯಾಗಿಸುವ ಮೂಲಕ ಮೇಲು ಕೀಳೆಂಬ ಸಂಕೋಲೆ ಕಳಚುವ ಪ್ರಯತ್ನ ಮಾಡಿದ್ದಾರೆ. ಗೀತಾ ನಾಗಭೂಷಣರ ಈ ಅದ್ಭುತ ಪ್ರಯೋಗ ಯಶಸ್ವಿಯಾದರೆ ಬಸವಣ್ಣನವರು ಹನ್ನೆರಡನೇ ಶತಮಾನದಲ್ಲಿ ಸಾರಿದ ವಿಶ್ವ ಕುಟುಂಬ ದೃಷ್ಟಿ ಸಾಕಾರವಾದಂತಾಗುತ್ತದೆ.

ಸೂಗಯ್ಯ ಹಿರೇಮಠದ 'ಅಂತರ' ಕಥೆಯಲ್ಲಿ ಕೆಳ ವರ್ಗದ ಜನ ಜ್ಞಾನ ಪಡೆಯದ ಹೊರತು, ಅಕ್ಷರ ಕಲಿಯದ ಹೊರತು ಸಮಾಜದಲ್ಲಿ ಅವರಿಗೆ ಸಮಾನತೆ, ಸ್ವಾತಂತ್ರ್ಯತೆ ದೊರಕುವುದಿಲ್ಲ ಎಂಬ ಅಂಶ ಈ ಕಥೆ ಒಳಗೊಂಡಿದೆ. ಕೇವಲ ಒಂದು ವರ್ಗದ ಜನರ ಪ್ರಯತ್ನದಿಂದ ಮಾತ್ರ ಸಮಾಜದಲ್ಲಿ ಸಮಾನತೆ ಸ್ಥಾಪಿಸಬಹುದು, ಎಂಬ ಆಶಯ ಈ ಕಥೆ ಹೊಂದಿದೆ. ಸಾಂತ್ವನ ಹೇಳುವುದು ಮರೆತು ದಂಡ ವಿಧಿಸುವ ತೀರ್ಪು ಕೊಟ್ಟಿದ್ದು ಈ ಸಮಾಜದ ಕ್ರೂರ ವ್ಯವಸ್ಥೆಯ ದ್ಯೋತಕವಾಗಿದೆ.

'ನೀರು ಮತ್ತು ನೆತ್ತರು' ಕಥೆಯಲ್ಲಿ ಮಳೆಯಿಲ್ಲದ್ದಕ್ಕೆ ಊರಿನ ಬಾವಿಗಳೆಲ್ಲ ಬತ್ತಿದ್ದರಿಂದ ಜನ ದೇವರಿಗೆ ಹರಕೆ ಹೋರುತ್ತಾರೆ. ಆದರೆ ಇಂತಹ ಹರಕೆಗಳಲ್ಲಿ ನಂಬಿಕೆ-ವಿಶ್ವಾಸವಿರದ ಕಾಶ್ಯ ಮಠದ ಬಾವಿಯ ನೀರು ತರುತ್ತಾನೆ. ಅದೇ ಒಂದು ನೆಪವಾಗಿ ಬಾವಿಯ ನೀರು ಅಪವಿತ್ರವಾಯಿತೆಂದು ಆತನನ್ನು ಕೊಲೆ ಮಾಡುತ್ತಾರೆ. ಆ ಕೊಲೆ ದೇವರ ಮೇಲೆ ಹಾಕಿ ತಂತ್ರಹೂಡಿ ಸಫಲರಾಗುತ್ತಾರೆ. ದೇವರ ಮಠದ ಬಾವಿಯ ನೀರು ತಂದಿರುವುದಕ್ಕೆ ಕಾಶ್ಯನ ಮೇಲೆ ಮುನಿದ ದೇವರು ಆತನನ್ನು ಬಲಿತೆಗೆದುಕೊಂಡ ಎಂದು ಕೊಲೆಗಾರರು ಜನರಿಗೆ ನಂಬಿಸುತ್ತಾರೆ. ಮಠದ ಬಾವಿ ನೀರು ತಂದ ಒಂದೇ ಕಾರಣಕ್ಕಾಗಿ ಪ್ರಾಣವನ್ನೇ ಕಳೆದುಕೊಂಡ ಕಾಶ್ಯನ ಪಾತ್ರ ನಾಡಿನ ಇಂತಹ ಎಷ್ಟೋ ಬೆಳಕು ಕಾಣದ ಘಟನೆಗಳ ಪ್ರತಿನಿಧಿಯಾಗಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಪ್ರಸ್ತುತ ಸಂದರ್ಭದಲ್ಲಿಯೂ ಇಂತಹ ಘಟನೆಗಳು ಘಟಿಸುತ್ತಿರುವುದು ನಮ್ಮ ಸಮಜದ ಒಂದು ಘೋರ ದುರಂತವೇ ಸರಿ. ಧರ್ಮ ದೇವರು ಪೂಜಾರಿಗಳು ಸಮಾಜದ ಏಕತೆಗೆ, ಸ್ವಾತಂತ್ರ್ಯತೆಗೆ ಅಡ್ಡಿಯನ್ನುಂಟು ಮಾಡಿತ್ತಿರುವುದು ಈ ಕಥೆ ಸ್ಪಷ್ಟವಾಗಿ ತೋರಿಸುತ್ತದೆ. ಕೆಳವರ್ಗದ ಜನರನ್ನು ತಮ್ಮಿಂದ ಆದಷ್ಟು ದೂರವಿಡುವ

ಪ್ರಯತ್ನ ನಿರಂತರವಾಗಿ ನಡೆಯುತ್ತಿದೆ, ಎನ್ನುವುದಕ್ಕೆ 'ನೀರು ಮತ್ತು ನೆತ್ತರು' ಕಥೆಯಲ್ಲಿ ಸ್ವಾಮಿಯ "ಮಠದ ಬಾವಿ ಮುಟ್ಟಿ ಮೈಲಿಗೆ ಮಾಡಿದ್ದ ಕೆಳಜಾತಿಯ ಕಾಶ್ಯ ರಕ್ತಕಾರಿ ಸತ್ತ" ಎನ್ನುವ ಈ ಮಾತೇ ನಿದರ್ಶನ.

ಚಿತ್ರಶೇಖರ ಕಂಠಿಯವರ 'ಜ್ಯೋತಿರ್ಗಮಯ' ಕಥೆಯ ಆಶಯ ಸಮಾಜದ ಸಮಸ್ತ ಜನಾಂಗವೆಲ್ಲಾ ಒಂದೇ ಎಂಬ ಅಂಶವನ್ನೊಳಗೊಂಡಿದೆ. ಇಲ್ಲಿ ಕ್ಷೌರಿಕನೊಬ್ಬ ತಾನು ಮೇಲ್ವರ್ಗದವರಿಗೆ ಮಾತ್ರ ಕ್ಷೌರ ಮಾಡುತ್ತೇನೆ. ದಲಿತರಿಗೆ ಕೀಳು ಕುಲದವರಿಗೆ ಕ್ಷೌರ ಮಾಡುವುದಿಲ್ಲ ಎನ್ನುವ ಮೊಂಡು ಹಠ ಹಿಡಿಯುತ್ತಾನೆ. ಇದಕ್ಕೆ ಪ್ರತಿಯಾಗಿ ದಲಿತರು ಕೀಳು ಕುಲದವರು ನಮಗೆ ಕ್ಷೌರ ಮಾಡದ ಹೊರತು ಗೌಡರ ಕ್ಷೌರ ಮಾಡಲು ಬಿಡುವುದಿಲ್ಲ, ಎನ್ನುವ ಪಣ ತೊಡುತ್ತಾನೆ. ಇದೇ ಕಾರಣಕ್ಕೆ ಎರಡು ವರ್ಗಗಳ ಮಧ್ಯ ಕಲಹ ಅಂಕುರಿಸುತ್ತದೆ. ಈ ಕಲಹ ವಿಕೋಪಕ್ಕೆ ಏರವುದಕ್ಕಿಂತ ಮುಂಚೆಯೇ ಊರಿನ ಗೌಡರು ಸರಪಂಚರು ಸೇರಿ ಊರಿನ ಎಲ್ಲ ಜನಾಂಗದವರು ಒಂದೇ, ಎಲ್ಲರೂ ಸರಿಸಮಾನರು ಎಂದು ವರ್ಗ/ಜಾತಿ ಕಲಹಗಳಿಗೆ ಮಂಗಳ ಹಾಡುತ್ತಾರೆ. ಇದೊಂದು ಅದ್ಭುತ ಕಥೆಯಾಗಿದೆ. ಜಾತಿ ವ್ಯವಸ್ಥೆಯಿಂದ ಕೂಡಿದ ನಮ್ಮ ಈ ಸಮಾಜದಲ್ಲಿ ಇಂತಹ ನಿರ್ಣಯ ಆಶಾದಾಯಕ ಬೆಳವಣಿಗೆಯಾಗಿದೆ. ಈ ಬೆಳವಣಿಗೆಯ ಹಿಂದೆ ದಲಿತ ಹಿಂದುಳಿದವರ ಆರ್ಥಿಕ ಮತ್ತು ಅಗತ್ಯ ಪ್ರಯತ್ನವಿರುವುದು ಮಹತ್ವದ ಸಂಗತಿ. ದಲಿತರು ಹಿಂದುಳಿದವರು ಅಕ್ಷರ ಕಲಿತು, ಕಾಯಿದೆ ತಿಳಿದು ಸಮಾಜದಲ್ಲಿ ವ್ಯವಹರಿಸಿದರೆ ಅವರಿಗೆ ನ್ಯಾಯ ಖಂಡಿತ ದೊರಕುತ್ತದೆ ಎಂಬ ಆಶಯ 'ಜ್ಯೋತಿರ್ಗಮಯ' ಕಥೆಯ ಮೂಲಕ ಚಿತ್ರಶೇಖರ ಕಂಠಿಯವರು ವ್ಯಕ್ತಪಡಿಸಿದ್ದಾರೆ.

ಎಂ.ಜಿ.ದೇಶಪಾಂಡೆಯವರ 'ಅಗ್ನಿ ಪ್ರಳಯ' ಕಥೆ ಸತ್ಯ ಘಟನಾ ಪ್ರಧಾನವಾದ ಕಥೆ. ಅಪಘಾತದ ವಿವರವನ್ನು ಎತ್ತಿ ತೋರಿಸುತ್ತಾ ಆಸೆಯ ಪ್ರಭಾವಕ್ಕೆ ಒಳಗಾದ ಒಬ್ಬ ವ್ಯಕ್ತಿಯ ವೈಯಕ್ತಿಕ ಆಸೆಗಳು ಹೇಗೆ ಬಲಿತೆಗೆದುಕೊಳ್ಳುತ್ತವೆ ಎನ್ನುವುದನ್ನು ನಾರಾಯಣನ ಮೂಲಕ ತೋರಿಸಿದ್ದಾರೆ. ನಾರಾಯಣ ಒಬ್ಬ ಬಡಜೀವಿ. ಮನೆಯಲ್ಲಿ ರವಿ, ಮೋನಿ ಎಂಬ ಎರಡು ಮಕ್ಕಳಿದ್ದಾರೆ. ಆದರೆ ಒಂದು ದಿನ ದುಡಿಯದೇ ಹೋದರೆ ಅನ್ನಸಿಗುವುದೇ ಇಲ್ಲ. ಅಂತಹ ಸ್ಥಿತಿಯಲ್ಲಿ ದುರ್ಘಟನೆಯಾದ ಸ್ಥಳದಿಂದ ಧಾನ್ಯ ಕದ್ದು ತರಲು ಹೋಗಿ ಜೀವವನ್ನೇ ಕಳೆದುಕೊಳ್ಳುತ್ತಾನೆ. ಮುಂದೆ ಮಗ ಸಹ ಅನೇಕ ಧೈರ್ಯ, ಸಾಹಸಗಳಿಂದ ಮೆರೆದು ಊರವರ ಹಿತಕ್ಕಾಗಿ ಪ್ರಾಣವನ್ನು ಸಮರ್ಪಿಸುವುದು ಇಲ್ಲಿಯ ಕಥೆಯಾಗಿದೆ.

ಬಸವರಾಜ ಮಠಪತಿಯವರ 'ದೇವರ ಹೆಣ' ಸಾಂಕೇತಿಕತೆಯನ್ನು ಮೂಲವನ್ನಾಗಿಟ್ಟುಕೊಂಡ ಕಥೆಯಾಗಿದೆ. ಇದರ ಸಂಕೇತವಾಗಿ ನಾಯಿ ತಂದು. ಅದನ್ನೇ ದೇವರ ಹೆಣ ಎಂದು ಇಲ್ಲಿ ಗುರುತಿಸುತ್ತಾರೆ. ಕಿತ್ತು ತಿನ್ನುವ ಬಡತನದಲ್ಲಿ, ಕಾಯಿಲೆಯ ನೋವಿನಿಂದ ನರಳುವ ಹಣ್ಣಿನ ಚಿತ್ರ ಇಲ್ಲಿದೆ. ನಾರಾಯಣಿಯ ತಾಯಿ ಕಾಯಿಲೆ ಬದ್ದ ಸಂದರ್ಭದಲ್ಲಿ ಆರೈಕೆಗಾಗಿ ಹಣದ ಅವಶ್ಯಕತೆ

ಇರುತ್ತದೆ. ಆದರೆ ಮಾಡಲು ಕೆಲಸವಿಲ್ಲ. ಮಾರಪ್ಪನ ಪರಿಚಯದಿಂದಾಗಿ ಕೂಲಿ ಕೆಲಸ ದೊರೆಯುತ್ತದೆ ಎಂಬ ಆಸೆಯಿಂದ ತನಗೆ ಕೆಲಸಕ್ಕೆ ಕರೆದ ದಿವಸ ಮಾರಪ್ಪನು ಅಲ್ಲಿಗೆ ಬರಲಾರದೇ ಬೀದಿಯಲ್ಲಿ ಸತ್ತುಬಿದ್ದ ನಾಯಿಯ ಅಂತ್ಯಕ್ರಿಯೆಗಾಗಿ ಹಣಕೂಡಿಸಿ ಅದರಿಂದ ನಾರಾಯಣಿಗೆ ಮಾರಪ್ಪನ ಇಂಥ ಅವತಾರವನ್ನು ನೋಡಿ ನಿಸ್ಸಹಾಯಕನಾಗಿ ಹಿಂತಿರುಗುತ್ತಾನೆ. ಇಂಥ ಬಡತನದ ದುರಂತಮಯ ಜೀವನವನ್ನು ಹೇಳುವ ಕಥಾ ವಸ್ತು ಇದಾಗಿದೆ.

ಒಂದು ಕಡೆ ಕಿತ್ತು ತಿನ್ನುವ ಬಡತನದ ಮಧ್ಯೆ ಇರುವ ನಾರಾಯಣಿಗೆ ತಿನ್ನಲು ಅನ್ನವಿಲ್ಲ ಇನ್ನೊಂದು ಕಡೆ ಉಂಡು ತಿಂದು ಹೆಚ್ಚಾಗಿ ಕುಡಿದ ಅಮಲಿನಲ್ಲಿ ಕುಣಿದಾಡುತ್ತಿರುವ ಮಾರಪ್ಪ. ಹೀಗೆ ಲೇಖಕರು ಸಮಾಜದ ಭಿನ್ನ ವರ್ಗಗಳನ್ನು ಗುರುತಿಸಿದ್ದಾರೆ.

ಮಲ್ಲಿಕಾರ್ಜುನ ಹಿರೇಮಠರ 'ಲಕ್ಕವ್ವನ ಮಂದಿ' ಕಥೆಯು ಒಂದು ಉತ್ತಮ ಕಥೆ. ಹೃದಯವಂತಿಕೆ, ಜೀವನದರ್ಶನ, ಕರ್ತವ್ಯ ನಿಷ್ಠೆ, ಮನುಕುಲದ ನೋವಿನ ಚಿತ್ರ ಮುಂತಾದವುಗಳನ್ನು ಸಹಜ ಭಾಷೆಯಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸಿದ ಈ "ಅಲೆಮಾರಿಯ ಬದುಕಿನ ಒಂದು ಮನೋಜ್ಞ ನೋಟ"ವಾಗಿದೆ. ನಾಗವ್ವ ದುಡಿದುಕೊಂಡು ಬರೋದು, ಇದ್ದದರಲ್ಲಿ ಎಲ್ಲರೂ (ತಂಗಿ ಮಕ್ಳು, ಮೊಮ್ಮಕ್ಕಳು) ತಿನ್ನೋದು ಯಾರೊಬ್ಬರ ಹಸಿವೂ ಹಿಂಗದಂತೆ ಇರೋದು, ಇವರ ಸ್ಥಿತಿ. ಒಂದು ರಾತ್ರಿ ಲಕ್ಕವ್ವನ ಗುಡಿಯ ಮಂದಿ ಕಂಗಾಲಾದರು. (ಕೂರ್‍ರ ಮುದುಕ, ಕರಡಿ ಆಡ್ಸೋರು, ಬೀಸಕಲ್ಲ ಹೂಳೆ ಹೊಯ್ಯೋರು) ಎಲ್ಲರೂ ಭಾರಿ ದೊಡ್ಡ ಮಳೆಯಿಂದಾಗಿ ಆಲದ ಗಿಡದ ಆಶ್ರಯ ಕೆಲವರು, ಇನ್ನು ಕೆಲವರು ಗುಡಿಗೆ ಧುಮುಕಿದರು. ಆದರೆ ಗುಡಿಯೆಲ್ಲಾ ನೀರಿನಲ್ಲಿ ಮುಳುಗಿದ್ದಕ್ಕೆ ಮಕ್ಕಳು ಗದಗದ ನಡುಗುತ್ತಿದ್ದವು. ಕಕ್ಕಾಬಿಕ್ಕಿಯಾಗಿ ತೆಕ್ಕೆ ಬಡಿದಿದ್ದವು ಅಪ್ಪ-ಅವ್ವಂದಿರನ್ನು ಅಪ್ಪಿಕೊಂಡು, ಎಲ್ಲರೂ ತೋದು ತಪ್ಪಡಿಯಾಗಿದ್ದರು. ಕೂರ್‍ರ ಮುದುಕ ಜೋರಾಗಿ ನರಳಲಾರಂಭಿಸಿದ. ಮಗು ಏದುರುಸಿರು ಬಿಡುತ್ತಿತ್ತು. ಒದ್ದಿಯಾದ ಬಟ್ಟೆಯನ್ನು ಮೈಯಲ್ಲೇ ಹಿಂಡಿಕೊಳ್ಳುತ್ತಾ ರಾತ್ರಿಯನ್ನು ನೂಕಿದರು. ಮುಂಜಾನೆ ಮಳೆ ನಿಂತಮೇಲೆ ಯಥಾಪ್ರಕಾರವಾಗಿ ಎಲ್ಲರೂ ತಂತಮ್ಮ ಕೆಲಸಗಳಿಗೆ ಹೋಗುತ್ತಾರೆ. ಆದರೆ ಮಗು ಮಾತ್ರ ಮೇಲ್ಗಣ್ಣು ತೇಲ್ಗಣ್ಣು ಮಾಡುತ್ತ ವಿಚಿತ್ರ ಸಂಕಟದಿಂದ ಒದ್ದಾಡಿ ಸಂಜೆ ಹೊತ್ತಿಗೆ ಸಾವನ್ನಪ್ಪುತ್ತದೆ. ಇದಕ್ಕೆ ಕಾರಣ ಅವರಿಗೆ ಕಿತ್ತುತಿನ್ನುವ ದರಿದ್ರ ಬಡತನ, ಮಗುವಿಗೆ ವಿಶೇಷ ಚಿಕಿತ್ಸೆ ಕೊಡಿಸಿದರೆ ಉಳಿತಿತ್ತು ಆದರೆ ಆ ಶಕ್ತಿ ಇವರಿಗಿಲ್ಲ.

ಹೀಗೆ ಇಂದು ನಮ್ಮ ಸಮಾಜದಲ್ಲಿ ಒಂದು ಕಡೆ ಆಗರ್ಭ ಶ್ರೀಮಂತರು ತಾವು ತಿಂದು ತೇಗಿ ನಾಯಿ ನರಿಗಳಿಗೆ ಹಾಕುವಷ್ಟು ಆಹಾರ, ಇನ್ನೊಂದು ಕಡೆ ಒಂದು ಹೊತ್ತು ಒಂದು ತುತ್ತಿಗೂ ಗತಿಯಿಲ್ಲದೆ ಪರದಾಡುವ ದಲಿತರ ಚಿತ್ರಣ ತುಂಬಾ ಕರುಣಾಜನಕವಾಗಿದೆ. ಸ್ವಾತಂತ್ರ್ಯ ನಾಡಿನಲ್ಲಿ ಎಂಥೆಂಥ ಜನರಿದ್ದಾರೆ ಎಂಬುದರ ಚಿತ್ರಣ ತುಂಬಾ ಮಾರ್ಮಿಕವಾಗಿ ಮೂಡಿಬಂದಿದೆ.

ಇಲ್ಲಿ ಕಥೆಗಾರರು ಇಂತಹ ಅಂತಸ್ತಿನ ಅಂತರ/ಬೇಧ ಕೊನೆಗೊಳ್ಳುವುದು ಹೇಗೆ? ಯಾವಾಗ? ಎಂಬ ಪ್ರಶ್ನೆಯನ್ನು ಓದುಗರ ಮುಂದಿಟ್ಟಿದ್ದಾರೆ. ಇಲ್ಲಿ ಕತೆಗಾರರು ಇನ್ನೊಂದು ಪ್ರಮುಖ ಅಂಶವನ್ನು ಗುರುತಿಸಿದ್ದಾರೆ. ಹನುಮವ್ವ ಮಗ ಸತ್ತ ದುಃಖಕ್ಕಾಗಿ ವಿಪರೀತ ಕಣ್ಣೀರಿಡುತ್ತಿರುತ್ತಾಳೆ. ಆಗ ನಾಗವ್ವ ಅವಳಿಗೆ ಸಂತೈಸುವ ಚಿತ್ರಣವನ್ನು ಅದ್ಭುತವಾಗಿ ಕೊಟ್ಟಿದ್ದಾರೆ. "ನನ್ನ ನೋಡು ಇದ್ದ ಎರ್ಡು ಮಕ್ಕಳ್ನ ಕಳಕೊಂಡಿನಿ. ನಿನಗ ಈಗ ಎರ್ಡೂ ಅದಾವು. ಲಕ್ಕವ್ವಗ ಕೇಳಕೋ; ಬದಕಿದ್ದವಕ ಆಶಾ ಕೊಡವ್ವಾ ತಾಯಿ ಅಂತ. ನಾವು  ಕಷ್ಟಾ ಸೋಸೋದಕ್ಕ ಹುಟ್ಟಿ ಬಂದವರು ಹಿಂದಿನ ಜನ್ಮದಾಗ ಮಾಡಿದ ಪಾಪಕ್ಕ ಶಿಕ್ಷಾ ಅನುಭೋಗಿಸುತ್ತಾ ಅದೀವಿ. ಆದ್ರೂತಾಯಿ ಲಕ್ಕವ್ವ ಒಂದಿನ ಕಣ್ತೆರೆದು ನೋಡ್ಯಾಳು ನಮ್ಮ ಕಷ್ಟಾನ...."[೧೫] ಎನ್ನುವಲ್ಲಿ ಎಂಥಾ ಆಶಾಭಾವನೆ ಅವಳಲ್ಲಿ ಇನ್ನು ಮನೆ ಮಾಡಿಕೊಂಡಿದೆ. ಮತ್ತೆ ಇನ್ನು ಒಂದು ಹೆಜ್ಜೆ ಮುಂದೆ ಹೋಗಿ, ನಾಗವ್ವ ನನ್ನ ಮಕ್ಳು ಸತ್ತು ಒಂದರ ಮ್ಯಾಲೊಂದು, ಹುಚ್ಚಾಗಿ ಕುಡಕುಡದು ಗಂಡ ಸತ್ತ. ಆದ್ರೂ ನಾ ಬದುಕೀನಿ ನೋಡು. ಯಾ ಸುಖಕ್ಕ?. . . . ಪರಮಾತ್ಮ ಕರೆದಾಗ ಹೋಗೋದವ್ವಾ! ಯಾವುದು ಥಿರಾ ಐತಿ ಹೇಳು ಪರಮಾತ್ಮಾ ಕರೆದಾಗ ಒಂದಿನಾ ಹೋಗೋದ... ಅರಮನಿಯವರೂ ಹೋಗೊದ..., ಗುಡಿಸಲ್ದವರೂ ಹೋಗೋದ ನಮ್ಮಂಥ ಬಟಾಬಯಲ ಮಂದೀನೂ ಹೋಗೋದ. ಯಾರಿಗೇನು ಬಿಟ್ಟೇತು? ಎನ್ನುವ ಅಡಕವಾಗಿದೆ.

ಇವರ ಇನ್ನೊಂದು ಕಥೆಯಾದ 'ಅಮೀನಪುರದದ ಸಂತೆ' ರೈತನ ನೋವಿಗೆ ಧ್ವನಿ ನೀಡಿದ ಕಥೆ ಹಾಗೂ ಬರಕ್ಕೆ (ಬರಗಾಲ) ಹಿಡಿದ ಕನ್ನಡಿಯಾಗಿದೆ."[೧೬] ಈ ಕಥೆ ಬರಗಾಲದ ರೈತ ಬಸಪ್ಪನ ಬವಣೆಯನ್ನು ತಿಳಿಸುತ್ತದೆ. ತಾನು ಸಾಕಿದ ಎತ್ತು ಕಟುಗರಿಗೆ ಕೊಟ್ಟಾಗ ದೂರದ ಧೈನೀಯ ಸ್ಥಿತಿ ಕಂಡು ಗೋಗರೆದಿದ್ದಾನೆ. ಆ ಚಿತ್ರಣ ಕಣ್ಣಿಗೆ ಕಟ್ಟುತ್ತದೆ.

ಕೃಷಿ ಪ್ರಧಾನವಾದ ನಮ್ಮ ನಾಡಿನಲ್ಲಿ ರೈತನಿಗೆ ಎತ್ತು ಬಹುಕಾಲದಿಂದಲೂ ಆತನ ಜೊತೆಗಾರನಾಗಿದೆ. ಬರಗಾಲ ಬಂದಾಗ ಎತ್ತನ್ನು ಸಲುಹಲು ಎದುರಾಗುವ ಸಮಸ್ಯೆಗಳು, ಪ್ರತಿಕೂಲ ಪರಿಸರ, ಸ್ವಾರ್ಥ ಶ್ರೀಮಂತರು ಮುಂತಾದವುಗಳ ಚಿತ್ರಣ ವಾಸ್ತವಿಕವಾಗಿ ಮೂಡಿಬಂದಿದೆ. ನಾಯಕನು ತನ್ನ ಎತ್ತಿಗಾಗಿ ಮೇವು ಕಳುವು ಮಾಡುವುದು, ಜನರೆದುರು ಅವಮಾನಿತನಾಗುವುದು ಅದರಿಂದಾಗಿ ಬಾಲ್ಯ ಸ್ನೇಹಿತ ತಿರಸ್ಕರಿಸುವ ಚಿತ್ರಣ ಮನ ಮಿಡಿಯುತ್ತದೆ.

ಇನ್ನು ತಾನೇ ಸಾಕಿದ ಎತ್ತು ಪ್ರಾಣ ಬಿಡುವುದನ್ನು ನೋಡದ ಆ ಮೃದು ಹೃದಯಿ ನೇಣು ಹಾಕಿಕೊಂಡ ಪ್ರಸಂಗವಂತೂ ಯಾರೂ ಮರೆಯುಂವಂತಿಲ್ಲ. "ಇಲ್ಲಿ ಕಥೆಗಾರರು, ಕಥಾನಾಯಕನಾದ ಬಸಪ್ಪನನ್ನು ಪ್ರಕೃತಿ ಮತ್ತು ವ್ಯವಸ್ಥೆಯ ಕ್ರೌರ್ಯಕ್ಕೆ ಬಲಿಪಶುವಾಗುವ ಅಸಂಖ್ಯಾತ ಬಡ ರೈತರ ಪ್ರತಿನಿಧಿಯಾಗಿ ನಿಲ್ಲಿಸುತ್ತಾರೆ."[೧೭] ಅಲ್ಲದೆ ಬಸಪ್ಪನ ಮುಗ್ಧ ಮನಸ್ಸನ್ನು ಬಹು ನವಿರಾಗಿ ಚಿತ್ರಿಸುತ್ತಾರೆ.

ಹಿರೇಮಠರು ತುರ್ತಾದ ಕಥೆ ನಿರ್ಮಾಣಕ್ಕೆ ಕಥೆಗಳ ಮೂಲಕ ಕಟ್ಟಿಕೊಡಲು ಪ್ರಯತ್ನಿಸಿದ್ದರಿಂದ ಇವರ ಕಥೆಗಳನ್ನು ಸಂಕ್ರಮಣಾವಸ್ಥೆಯ ಹೊಸ ಬೆಳವಣಿಗೆಯ ಕಥೆ ಎನ್ನಬಹುದು. ಇವರ ಕಥೆಗಳು ಮುಂದಿನ ಕಥೆಗಾರರಿಗೆ ಸ್ಫೂರ್ತಿ ನೀಡುತ್ತವೆ. ಇವರಿಂದ ಇನ್ನು ಕಥೆಗಳನ್ನು ನಿರೀಕ್ಷಿಸಬಹುದು.

**ಮಧ್ಯಮ ವರ್ಗದ ಚಿತ್ರಣ**

ಹಲವಾರು ವರ್ಷಗಳಿಂದ ಬಂದ ಕಥೆಗಾರರು ಸಾಮಾನ್ಯವಾಗಿ ಮಧ್ಯಮವರ್ಗದಲ್ಲಿಯೇ ನಿಂತುಕೊಂಡು ಜೀವನ ಸಾಗಿಸುವ ಪರಿಯನ್ನು ತಮ್ಮ ಕಥೆಗಳಲ್ಲಿ ಮೂಡಿಸಿದ್ದಾರೆ. ಮಧ್ಯಮ ವರ್ಗದ ಜನರ ಬದುಕಿನ ಮುಖ್ಯ ಸಮಸ್ಯೆ ಎಂದರೆ ಉಂಡುಟ್ಟು ಚೆನ್ನಾಗಿ ಇದ್ದರೂ ಮಾನಸಿಕ ನೆಮ್ಮದಿಯಿಂದ ದೂರ ಉಳಿಯುವುದು. ಇಂತಹ ಅಂಶಗಳೇ ತಮ್ಮ ಕಥಾ ವಸ್ತುಗಳನ್ನಾಗಿಸಿಕೊಂಡು ಕಥೆಗಳನ್ನು ರಚಿಸಿದವರಲ್ಲಿ ಶಿವರಾಜ ಪಾಟೀಲ, ಚಿತ್ರಶೇಖರ ಕಂಠಿ, ಸಿದ್ಧರಾಮ ಹೊನ್ಕಲ್, ರಾಜಶೇಖರ ಹತಗುಂದಿ ಗುರುನಾಥ ಅಕ್ಕಣ್ಣ, ಬಸವರಾಜ ಮಠಪತಿ, ದೇವೇಂದ್ರ ಕುಮಾರ ಹಕಾರಿ, ಬಿ.ಟಿ.ಲಲಿತಾ ನಾಯಕ ಮುಂತಾದವರು

ವೇದನೆಯ ವರ್ತುಳ, ಮರೀಚಿಕೆ, ರತ್ನಾ ಎಂಬ ಹುಡುಗಿಯ ಸಾವು, ಅಂಬಿಗ, ಅತೃಪ್ತೆ, ವಾಸ್ತವ, ತನ್ನದಲ್ಲದ ಬದುಕಿಗಾಗಿ, ಹೀಗೊಬ್ಬ ಕಥೆಗಾರ, ನಿಂತ ನೀರು, ಯಾರನ್ನು ಪ್ರೀತಿಸಬೇಡ, ಚಾಟಿ, ಬಿಸಿಲುಗುದುರೆ, ನಿರ್ಧಾರ, ಎಲ್ಲಿಂದ ಬಂತೊ ಗಂಟು, ವಾಸ್ತವ, ಅಪ್ಪ, ಸುದ್ಧಿ, ಉಣಲುಂಟು ಉಡಲುಂಟು ಮುಂತಾದ ಕಥೆಗಳು ಮಧ್ಯಮ ವರ್ಗದ ಸಮಸ್ತ ಜೀವನಾಂಶಗಳನ್ನು ಪ್ರತಿಬಿಂಬಿಸುತ್ತದೆ.

ಮಕ್ಕಳು ಚೆನ್ನಾಗಿ ಓದಿ ಬುದ್ಧಿವಂತರಾಗಲೆಂದು ಕೇಳಿದಷ್ಟು ಹಣ ಕೊಡುವುದು ಸಹಜ. ಕೆಲವು ಸಲ ಹೀಗೆ ಕೊಡುವ ದುಡ್ಡು ಮಕ್ಕಳ ಜೀವಕ್ಕೆ ಪೂರಕವಾಗುವುದರೊಂದಿಗೆ ಮಾರಕವೂ ಆಗುತ್ತದೆ. ಮಕ್ಕಳು ಕೇಳಿದಷ್ಟು ಹಣಕೊಟ್ಟು ಮನೆಯಲ್ಲಿ ಕೈಕಟ್ಟಿ ಕುಳಿತರೆ ಸಾಲದು, ಮಕ್ಕಳ ಚಟುವಟಿಕೆಯ ಮೇಲೆ ಸ್ವಲ್ಪವಾದರೂ ನಿಗಾವಹಿಸಲೇಬೇಕೆಂಬುದು ಕಥೆಗಾರರ ಕಳಕಳಿ, ಇಲ್ಲವಾದರೆ ಮಕ್ಕಳು ದುಶ್ಚಟಗಳಿಗೆ ಬಲಿಯಾಗಿ ತಮ್ಮ ಭಾವಿ ಬದುಕು ಹಾಳು ಮಾಡಿಕೊಳ್ಳುತ್ತಾರೆ. ದಾಂಪತ್ಯದಲ್ಲಿ ನೆಮ್ಮದಿ ಕಾಣದೆ ಮಾನಸಿಕವಾಗಿ ಕೊರಗುತ್ತಾರೆ. ಎನ್ನುವ ಕಟು ಸತ್ಯವನ್ನು ಕಂಠಿಯವರು ತಮ್ಮ ಅತೃಪ್ತೆ ಕಥೆಯಲ್ಲಿ ಚಿತ್ರಿಸಿದ್ದಾರೆ.

ಕಾಲೇಜು ಓದಲಿಕ್ಕೆಂದು ಪಟ್ಟಣಕ್ಕೆ ಹೋದ ಸೋಮಣ್ಣನಿಗೆ ಕೇಳಿದಾಗಲೆಲ್ಲ ತಂದೆ ಕಳುಹಿಸಿದ ದುಡ್ಡೇ, ಅವನ ದುರ್ನಡತೆಗೆ ಕಾರಣವಾಗುತ್ತದೆ. ಕೆಟ್ಟ ದುಶ್ಚಟಗಳಿಗೆ ಬಲಿಯಾಗಿ ಓದು ಬಿಟ್ಟು ಬಿಡುತ್ತಾನೆ. ಮದುವೆಯಾಗಿ ಸಂಸಾರಕ್ಕೆಂದು ಹಿರಿಯರ ಹೊಲ ಮನೆ ಮಾರುತ್ತಾನೆ. ಇದೂ ಸಾಲದಾದಾಗ ಹೆಂಡತಿಯ ಸಂಬಳಕ್ಕೆ ಕೈ ಹಾಕಿ ಅವಳೊಂದಿಗೆ ಜಗಳ ಕಾಯುವುದು. ಇಬ್ಬರ

ಮಧ್ಯೆ ಮನಸ್ತಾಪಗಳು ಬರುವುದು ಸಾಮಾನ್ಯವಾಗಿ ಬಿಡುತ್ತದೆ. ಗಂಡನ ದುರ್ನಡತೆಯಿಂದ ಹಾಗೂ ಸಂಸಾರದ ಜವಾಬ್ದಾರಿಯ ಹೊರೆ ತನ್ನ ಮೇಲೆ ಬಿದ್ದುದಕ್ಕೆ ಸೋಮಣ್ಣನ ಹೆಂಡತಿ ದುಡ್ಡು ಕೊಡುವುದು ಅನಿವಾರ್ಯವಾಗಿ ಬಿಡಬೇಕಾಗುತ್ತದೆ. ಇದರಿಂದ ರೊಚ್ಚಿಗೆದ್ದು ಅವಳಿಗೆ ಮಾನಸಿಕ ಹಿಂಸೆ ಕೊಡಲು ಸುರು ಮಾಡುತ್ತಾನೆ. ಆಫೀಸಿನಿಂದ ಲೇಟಾಗಿ ಬಂದ ಹೆಂಡತಿಯನ್ನು ಕಂಡು ಕೆಂಡ ಮಂಡಲನಾಗಿ "ಇಷ್ಟೋತ್ತು ಯಾವನ ಜೊತೆಗೆ ಹೋಗಿದ್ದೆ"[೮] ಎಂದು ಕೆಳಿದ್ದು, ಅವಳ ಶೀಲವನ್ನು ಶಂಕಿಸಿದಂತಾಗುತ್ತದೆ. ಅಲ್ಲದೆ ತನ್ನ ಬಾಳ ಸಂಗಾತಿಯನ್ನು ದ್ವೇಷಿಸುವಂತೆ ಮಾಡುತ್ತದೆ. ಇಂಥವರಿಗೆ ಕೈತುಂಬ ಹಣಕೊಟ್ಟು ಬೇರೆಯವರೊಂದಿಗೆ ಅನೈತಿಕ ಸಂಬಂಧ ಹೊಂದಿದ್ದರೂ ಆಕೆ ಮಹಾ ಪತಿವೃತಿಯಂತೆ ತೋರುತ್ತಾಳೆನ್ನಬಹುದು. ಸ್ವತಃ ತನ್ನ ಗಂಡನೆ ತನ್ನ ನಡತೆಗೆ ಕುಂದು ತರುವಂತೆ ಮಾತಾಡಿದ್ದು ಪ್ರಾಮಾಣಿಕವಾಗಿ ದುಡಿದು ಸಂಸಾರ ಸಾಗಿಸುವ ಹೆಂಡತಿ ಗಂಡ ಮತ್ತು ಸಂಸಾರದ ಬಗೆಗೆ ಜಿಗುಪ್ಸೆ ತಾಳುವಂತಾಗುತ್ತದೆ. ಈ ಸುಖ-ದುಃಖಗಳ ಪರಸ್ಪರ ವಿನಿಯೋಗವೇ ಮುಂದೆ ಪ್ರೀತಿ-ಪ್ರೇಮವಾಗಿ ಅಂಕುರಿಸುತ್ತದೆ. ಆಗ ಈಕೆಯಂಥವರಿಗೆ ಗಂಡ ಮನೆ ಸಂಸಾರ ದೂರವೆಂದೇ ಹೇಳಬೇಕಾಗುತ್ತದೆ.

ಚಿತ್ರಶೇಖರ ಕಂಠಿಯವರು ಬರೆದ 'ಅಂಬಿಗ' ಮತ್ತು ಶಿವರಾಜ ಪಾಟೀಲರ 'ಒಂದು ಮನೆಯ ಕಥೆಗಳು' ಆದರ್ಶದ ಛಾಯ ಹೊತ್ತು ನಿಂತವುಗಳಾಗಿವೆ. ಆದರ್ಶತನ ತೋರಿಸಿ ಒಂದು ಅಪರಿಚಿತ ಹೆಣ್ಣಿಗೆ ಆಸರೆನೀಡಿದ ನಾಯಕರು ತಮ್ಮ ಬದುಕಿಗೆ ಕುತ್ತು ತಂದುಕೊಂಡಿರುವುದು ವಿಪರ್ಯಾಸವಾಗಿದೆ. ಅಂಬಿಗದಲ್ಲಿ ಕಥೆಗಾರರು ನದಿಯಲ್ಲಿ ಬಿದ್ದು ಸಾಯಬೇಕೆನ್ನುತ್ತಿರುವ ಅಪರಿಚಿತ ಹೆಣ್ಣೊಬ್ಬಳನ್ನು ವಿವಾಹವಾಗುತ್ತಾರೆ. ಗಂಡನಿಲ್ಲದಿದ್ದಾಗ ಮನೆಯಲ್ಲಿಯ ಸಾಮಾನುಗಳೊಂದಿಗೆ ಪರಾರಿಯಾಗಿ ಕೊನೆಗೆ ಅನಾರೋಗ್ಯದಿಂದ ಆಸ್ಪತ್ರೆ ಸೇರುತ್ತಾಳೆ. ಅಲ್ಲಿ ಗಂಡನಿಗೆ ತನ್ನ ಹಿಂದಿನ ದಿನಗಳ ಪರಿಚಯ ಮಾಡಿಕೊಡುತ್ತಾಳೆ. ಅವಳು ಅನಾಥೆ ಎಂದು ಸುಳ್ಳು ಹೇಳಿದ್ದು, ಕಂಡ ಕಂಡ ಗಂಡಸರಿಗೆ ಸೆರಗು ಹಾಸಿ ಮಜಾ ಮಾಡಿ ಕೊನೆಗೆ ಅವನಿಗೆ ಮೋಸ ಮಾಡಿ ಪರಾರಿಯಾದುದು. ಈ ಎಲ್ಲ ಘಟನೆಗಳನ್ನು ಮಾಡಿದ ಆಕೆ ಕೊನೆಯುಸಿರೆಳೆಯುತ್ತಾಳೆ. ಇದು ಅಂಬಿಗ ಕಥೆಯ ವಸ್ತು.

ಇವರ 'ಅತೃಪ್ತೆ' ಕಥೆಯಲ್ಲಿ ತಂದೆಯ ದುಡ್ಡಿನಿಂದ ಮಗ ದುಶ್ಚಟಕ್ಕೆ ಬಿದ್ದರೆ, ಅಂಬಿಗದಲ್ಲಿ ಓದಲಿಕ್ಕೆಂದು ಪಟ್ಟಣಕ್ಕೆ ಬಂದ ಮಗಳಿಗೆ ತಂದೆ ಕಳುಹಿಸಿದ ದುಡ್ಡು ಹೇಗೆ ವ್ಯಭಿಚಾರಿಣಿಯಾಗಿ ಮಾಡಿದ್ದು ಪರಿಸ್ಥಿತಿಯ ದಾರುಣ ಚಿತ್ರಣವಾಗಿದೆ. ಮಕ್ಕಳಿಗೆ ಅವರ ಅಗತ್ಯಕ್ಕೆ ತಕ್ಕಷ್ಟು ಮಾತ್ರ ಹಣ ನೀಡಬೇಕು. ಇಲ್ಲವಾದರೆ ಅದು ಅವರಲ್ಲಿ ದುಶ್ಚಟಗಳನ್ನು ಬೆಳೆಸುತ್ತದೆ, ಎನ್ನುವ ಅಂಶ ಇಲ್ಲಿ ಕಾಣಬರುತ್ತದೆ. ಹೀಗಾಗಿ ತಂದೆ ತಾಯಂದಿರು ಮಕ್ಕಳ ಪ್ರತಿಯೊಂದು ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಗಮನಿಸಿ ಅವರು ತಪ್ಪಿದಲ್ಲಿ ತಿಳಿ ಹೇಳಿ ಉತ್ತಮ ಮಾರ್ಗದಲ್ಲಿ ನಡೆಯುವಂತೆ ಮಾರ್ಗದರ್ಶನ ಮಾಡಬೇಕು. ಇದು ಕಥೆಗಾರರ ಆಶಯವೂ ಆಗಿದೆಯೆನ್ನುವುದು ಮರೆಯುವಂತಿಲ್ಲ.

ಸಮಾಜದಲ್ಲಿ ಕೇವಲ ಗಂಡಸರಷ್ಟೇ ಹೆಣ್ಣುಮಕ್ಕಳಿಗೆ ಮೋಸ ಮಾಡುತ್ತಾರೆ, ವಂಚಿಸುತ್ತಾರೆ, ಶೋಷಿಸುತ್ತಾರೆ ಎನ್ನುವ ಮಾತು ಬದಿಗೆ ಸರಿಸಿ ಸಂದರ್ಭಕ್ಕೆ ತಕ್ಕಂತೆ ಎಲ್ಲರೂ ಎಲ್ಲರನ್ನೂ ಮೋಸ ಮಾಡುವವರಿದ್ದಾರೆ ಎನ್ನುವ ಅಂಶವನ್ನು ಕಥೆಗಾರರು 'ಅತೃಪ್ತೆ', 'ಅಂಬಿಗ' ಮತ್ತು 'ಒಂದು ಮನೆಯ ಕಥೆ'ಗಳ ಮೂಲಕ ಮನದಟ್ಟು ಮಾಡಿಸಿದ್ದಾರೆ.

ಗಂಡು ನಿರಾಯಾಸವಾಗಿ ಹೆಣ್ಣಿಗೆ ಮೋಸ ಮಾಡುವಷ್ಟೇ ಹೆಣ್ಣು ಕೂಡ ಗಂಡಸರಿಗೆ ಅನಾಯಾಸವಾಗಿ ಚಳ್ಳೆಹಣ್ಣು ತಿನಿಸುತ್ತಾಳೆ. ಎನ್ನುವ ಅಂಶವನ್ನು ಅಂಬಿಗ, ಅತೃಪ್ತೆ ಮುಂತಾದ ಕಥೆಗಳಲ್ಲಿ ಕಾಣಬರುತ್ತವೆ. ನಾನು ಅನಾಥ ನನಗೆ ಯಾರು ಇಲ್ಲ ಅದಕ್ಕೆ ಸಾಯುತ್ತಿರುವೆ ಎನ್ನುವ ಮಾತು ಈ ಇಬ್ಬರ ಬಾಯಿಯಿಂದಲೂ ಬಂದಿದೆ. ಅವಳು ನದಿಗೆ ಹಾರುವ ನೆಪದಲ್ಲಿ ಕಥೆಗಾರರಿಗೆ ವಂಚಿಸಿದರೆ, ಇಲ್ಲಿ ಕಥೆಗಾರರ ಸ್ಥಾನದಲ್ಲಿ ನಿಂತ ಸೋಮಶೇಖರನ ಕಾರಿಗೆ ಅಡ್ಡ ಹಾಯಿಸುವುದರ ಮೂಲಕ ವಂಚನೆಯ ಮಾರ್ಗ ಸುಗಮಗೊಳಿಸಿಕೊಳ್ಳುತ್ತಾಳೆನ್ನಬಹುದು.

ಪ್ರಸ್ತುತ ಸಂದರ್ಭದಲ್ಲಿ ಈ ರೀತಿ ಅಪರಿಚಿತ ಸ್ತ್ರೀಯಾಗಲಿ, ಪುರುಷನಾಗಲಿ ಒಬ್ಬರಿಗೊಬ್ಬರು ನಂಬಿಕೆಯಿಟ್ಟು ವಿಶ್ವಾಸಮಾಡಿ ಸಹಾಯ, ಸಹಕಾರ ಮಾಡುವುದು ತಪ್ಪಲ್ಲವಾದರೂ ಸಹಾಯ ಅರಿಸಿ ಬಂದವರು ಆಶ್ರಯ ನೀಡಿದವರಿಗೆ ದ್ರೋಹ ಬಗೆಯದೆ ತಮ್ಮ ಜೀವನ ಉಜ್ವಲಗೊಳಿಸಿಕೊಳ್ಳಬೇಕು. ಇಲ್ಲವಾದರೆ ಸಂಕಷ್ಟದಲ್ಲಿರುವ ಯಾರಿಗೂ ಸಹಾಯ ದೊರಕದಂತಾಗುತ್ತದೆ ಎನ್ನುವ ಕಟುಸತ್ಯ ಇಲ್ಲಿ ವ್ಯಕ್ತವಾಗಿದೆ.

ಗಂಡು-ಹೆಣ್ಣಿನ ನಡುವಿನ ಮಧುರವಾದ ಸಂಬಂಧ ಹಲವು ಸಂದರ್ಭಗಳಲ್ಲಿ ಏರುಪೇರಾಗುತ್ತದೆ. ಅದೇ ರೀತಿ ಇಲ್ಲಿ ಒಂದು ಹೆಣ್ಣು ಒಂದು ಗಂಡನ್ನು ಪ್ರೇಮಿಸಿ ಬೇರೆಯವರನ್ನು ಮದುವೆಯಾಗುವುದು ಈ ಕಥೆಯ ಆಶಯವಾಗಿದೆ. ಆನಂದ-ಸುರೇಖಾಳನ್ನು ಏಕಾಂತ ವಾಸದ ಸನ್ನಿವೇಶದಲ್ಲಿ ದೈಹಿಕವಾಗಿ ಅನುಭವಿಸುತ್ತಾನೆ. ಇವರಿಬ್ಬರಲ್ಲಿ ಅಂದಿನಿಂದ ಪ್ರೀತಿ ಬೆಳೆಯಲು ಪ್ರಾರಂಭಿಸುತ್ತದೆ. ಆದರೆ ಮುಂದೆ ಅನಿರೀಕ್ಷಿತವಾಗಿ ಬದುಕಿನಲ್ಲಿ ತಿರುವು ಆಗಿ ಸುರೇಖಾ ಬೇರೊಬ್ಬರನ್ನು ಮದುವೆಯಾಗುತ್ತಾಳೆ. ಆನಂದ ಸಹ ಬೇರೊಬ್ಬಳನ್ನು ಮದುವೆಯಾಗುತ್ತಾನೆ. ಇಬ್ಬರ ಬದುಕಿನಲ್ಲಿಯೂ ದುರಂತ ಸಂಭವಿಸಿ ಆ ಕಡೆ ಗಂಡನನ್ನು ಕಳೆದುಕೊಂಡರೆ, ಈ ಕಡೆ ಆನಂದ ಹೆಂಡತಿಯನ್ನು ಕಳೆದುಕೊಳ್ಳುತ್ತಾನೆ. ಆದರೆ ಮುಂದೊಂದು ದಿನ ಒಬ್ಬರನ್ನೊಬ್ಬರು ಬೇಟಿಯಾದಾಗ ಮದುವೆ ವಿಚಾರ ಕೈಬಿಟ್ಟು ಬಿಡುವುದು ಇಲ್ಲಿಯ ವಸ್ತುವಾಗಿದೆ.

'ನಿರ್ಧಾರ' ಈ ಕಥೆಯು ಕಾಮ ಸೆಳೆತದಲ್ಲಿ ಸಿಲುಕಿ ತಾಯಿ-ತಂದೆಗಳ ವಿರುದ್ಧವಾಗಿ ವಿವಾಹವಾಗುವ ಗಂಡಿನ ಕಥೆಯಾಗಿದೆ. ವಿದ್ಯಾಭೂಷಣ ರಾಜೇಶ್ವರಿ ಬಾಯಿಯವರ ಜೇಷ್ಠಪುತ್ರ ರವಿ. ರವಿಯು ಮದುವೆಯ ವಿಷಯದಲ್ಲಿ ದಿಟ್ಟ ನಿಲುವನ್ನು ತೆಗೆದುಕೊಳ್ಳುತ್ತಾನೆ. ಬೇರೆ ಊರಿನಲ್ಲಿ ಉದ್ಯೋಗ ಮಾಡುತ್ತಿದ್ದ ರವಿಗೆ ಜಾತಿಯ ಹುಡುಗಿಯೊಂದಿಗೆ ಸ್ನೇಹ ಬೆಳೆದು, ಮುಂದೆ ಪ್ರೀತಿಯಾಗಿ

ಅಂಕುರಿಸುತ್ತದೆ. ಈ ಕಡೆ ತಂದೆ ತಾಯಿಯರು ಒಳ್ಳೆಯ ಸಂಬಂಧ ಹುಡುಕಿ ಹಿರಿಯ ಮಗನಾದ ರವಿಯ ಮದುವೆಯನ್ನು ವಿಜೃಂಭಣೆಯಾಗಿ ಮಾಡಬೇಕೆಂಬ ಹಿರಿದಾದ ಆಸೆಯನ್ನು ಇಟ್ಟುಕೊಂಡಿರುತ್ತಾರೆ. ಆದರೆ ಇದಕ್ಕೆ ವಿರುದ್ಧವಾಗಿ ರವಿ ತನ್ನ ನಿರ್ಧಾರವನ್ನು ಬದಲಿಸದೇ ಅಂತರಜಾತಿ ವಿವಾಹವನ್ನು ಮಾಡಿಕೊಂಡು ತಂದೆ–ತಾಯಿಯವರಿಂದ ಕೊನೆಗೂ ದೂರ ಉಳಿಯುವ ನಿರ್ಧಾರ ಮಾಡುತ್ತಾನೆ.

ಅಕ್ಕಣ್ಣನವರ ಇವೆರಡು ಕತೆಗಳಲ್ಲಿ ಅಷ್ಟೊಂದು ಹೊಸತನವೇನೂ ಕಂಡು ಬರುವುದಿಲ್ಲ. ಸಾಮಾನ್ಯವಾದ ವಿಷಯ ವಸ್ತುವನ್ನು ಈ ಕಥೆಗಳು ಒಳಗೊಂಡಿವೆ.

'ನಿಂತ ನೀರು' ಈ ಕಥೆಗಳಲ್ಲಿ ಒಬ್ಬ ಮಧ್ಯಮವರ್ಗದ ನೌಕರದಾರರ ಜೀವನದಲ್ಲಿ ಆದ ಸಾಮಾನ್ಯ ಘಟನೆಗಳನ್ನು ಚಿತ್ರಿಸುತ್ತಾರೆ. ಬೇರೆ ಊರಿಗೆ ವರ್ಗವಾಗಿದ್ದರಿಂದ ಶಿವರಾಜ ಅಲ್ಲಿ ಹೊಸಮನೆ ಬಾಡಿಗೆ ಹಿಡಿದು ಹೊಸ ಜೀವನ ಪ್ರಾರಂಭಿಸುತ್ತಾನೆ. ಆದರೆ ಮನೆಯ ಮಾಲೀಕನ ಕಿರುಕುಳ, ಅಸಭ್ಯ ವರ್ತನೆಗಳು ಅತಿಯಾಗುತ್ತವೆ. ಆದರೂ ಮೊಂಡು ಸ್ವಭಾವಕ್ಕೆ ರೋಸಿ ಹೋಗಿದ್ದರೂ ಸಹ ಆ ದಂಪತಿಗಳು "ತಾಳ್ಮೆಯೇ ಬದುಕು" ಎಂದು ಬಗೆದು ಮತ್ತೆ ಅಲ್ಲಿಯೇ ಜೀವಿಸತೊಡಗುತ್ತಾರೆ. ಕೆಲವು ದಿನಗಳ ನಂತರ ಹೊಸ ಅನುಭವಕ್ಕೆ ತೆಕ್ಕೆ ಬೀಳಲು ಮತ್ತು ಮನೆಯನ್ನು ವರ್ಗಾಯಿಸುತ್ತಾರೆ. ಅಲ್ಲಿಯೂ ಆ ಮಾಲೀಕನ ವರ್ತನೆ ಕಂಡು ಎಲ್ಲಿ ಹೋದರೂ ಅದೇ ಜಾತಿ ಎಂದು ಮನಗಂಡು ಅಲ್ಲೀಯೆ ಜೀವನ ಮುಂದುವರೆಸುತ್ತಾನೆ. "ದಾರಿ ಬೇರೆಯಾದರೂ ಉದ್ದೇಶ ಒಂದೇ" ಎಂಬ ಮಾತಿನಿಂದ ಇಂದು ಮನೆಯ ಮಾಲೀಕರು ಬಾಡಿಗೆದಾರರಿಗೆ ನೀಡುವ ಕಷ್ಟ, ತೊಂದರೆಗಳನ್ನು ಸ್ವತಃ ಅನುಭವದಿಂದ ಚಿತ್ರಿಸಿದ ಬಸವರಾಜ ಮಠಪತಿಯವರು ಮಧ್ಯಮವರ್ಗದವರೆಂದು ಪರೋಕ್ಷವಾಗಿ ತೋರಿಸಿಕೊಂಡಿದ್ದಾರೆ.

ಬಸವರಾಜ ಮಠಪತಿಯವರು ಈ ಕಥೆಯಲ್ಲಿ ಹೆಣೆದ ವಸ್ತು ಸಹಜವಾದದ್ದೇ. ಈ ಪರಿಸ್ಥಿತಿ ಬರುವುದು ಕೇವಲ ಮಧ್ಯಮವರ್ಗದವರಿಗೆ ಮಾತ್ರ. ಶ್ರೀಮಂತರಿಗಂತೂ ಇಂತಹ ಸಂದರ್ಭವೇ ಬರುವುದಿಲ್ಲ, ಏಕೆಂದರೆ ಅವರವರ ಅಂತಸ್ಥಿಗೆ ತಕ್ಕಂತೆ ಅವರವರು ಮನೆಗಳನ್ನು ನಿರ್ಮಾಣ ಮಾಡಿಕೊಂಡಿರುತ್ತಾರೆ. ಇನ್ನು ಕೆಳಸ್ತರದ ಅಂದರೆ ಬಡವರಂತೂ ತಮಗೆ ತಕ್ಕ ಗುಡಿಸಿಲುಗಳಲ್ಲಿ ಯಾರದೂ ಹಂಗಿರದೇ–ನಿರ್ಭಯವಾಗಿ ವಾಸಿಸುತ್ತಾರೆ.

ಇನ್ನುಳಿದ ಮಧ್ಯಮವರ್ಗದವರು ಇತ್ತ ಸ್ವಾಭಿಮಾನ ಬಿಡದೇ ಅತ್ತ ಮೇಲಕ್ಕೂ ಏರದೇ ಅತಂತ್ರ ಸ್ಥಿತಿ ಕಾಣಬೇಕಾದ ಪರಿಸ್ಥಿತಿ ಇಂದಿಗೂ ಪ್ರಸ್ತುತ ಎಂಬ ವಿಷಯ ತಿಳಿಸಿದ್ದಾರೆ.

ಬುಡಕಟ್ಟು ಜನಾಂಗದಿಂದ ಬಂದರೂ ಮಧ್ಯಮವರ್ಗದ ಬದುಕನ್ನೂ ಕಂಡುಂಡ ಲಲಿತಾ ನಾಯಕರು ಅಲ್ಲಿನ ಜನ–ಜೀವನದ ಸಹಜ ವಿಷಯ ವಿಚಾರಗಳನ್ನು ಕಥಾ ವಸ್ತುವನ್ನಾಗಿಸಿ ಆ

ವರ್ಗದಲ್ಲಿನ ವ್ಯಕ್ತಿಗಳ ಸಣ್ಣತನವನ್ನು ಹೆಚ್ಚಾಗಿ ಎತ್ತಿ ತೋರಿಸುತ್ತಾರೆ. "ಸುದ್ದಿ', 'ಉಣಲುಂಟು ಉಡಲುಂಟು" ಈ ರೀತಿಯ ಕಥೆಗಳಾಗಿವೆ.

ಸಾಮಾನ್ಯವಾಗಿ ಹೆಣ್ಣು ಮಕ್ಕಳು ವಾಚಾಳ ವರ್ತನೆಯ ಆಧಾರದ ಮೇಲೆ ರಚಿತಗೊಂಡ ಈ ಕಥೆಯ ಹಂದರ ಸುದ್ದಿ. ಯಾವುದೇ ಸಂಗತಿಯೇ ಆಗಿರಲಿ ಮಧ್ಯಮ ವರ್ಗದ ಗೃಹಿಣಿಯರಿಗೆ ಮಾತನಾಡುವ ಸಂಗತಿಯಾಗುತ್ತದೆ. ಅವರಿವರನ್ನು ಆಡಿಕೊಂಡು ತಮ್ಮನ್ನು ಖುಷಿಪಡಿಸಿಕೊಳ್ಳುವ ಚಿತ್ರಣವನ್ನು ಲೇಖಕಿ ನೀಡುತ್ತಾರೆ. ನೆರೆಮನೆಯ ಆಗು-ಹೋಗುಗಳನ್ನು ಕುರಿತು ವಿಚಾರಮಾಡುವ ತನ್ನ ಅಕ್ಕನ ಮನೆಗೆ ಬಂದ ಹುಡುಗಿಗೂ ಅವಳ ಬಾವನಿಗೂ ಇಲ್ಲದ ಸಂಬಂಧ ಕಲ್ಪಿಸಿ ಅವರ ಚಲನವಲನಗಳನ್ನೇ ಸುದ್ದಿಯಾಗಿಸುವ ಎದುರು ಮನೆಯ ಗಂಡ ಹೆಂಡತಿಯರ ವಿಕೃತ ಮನಸ್ಸುಗಳ ಅಸಹಜ ಸಂಭಾಷಣೆಗಳಿಂದ ಆರಂಭಗೊಂಡು ಕೊನೆಗೆ ಅವರ ಮಗಳೇ ಪಲಾಯನ ಮಾಡಿದ 'ಸುದ್ದಿ' ಯಿಂದಲೇ ಮುಕ್ತಾಯಗೊಳ್ಳುವಲ್ಲಿ ವಸ್ತು ಸ್ಥಿತಿಯನ್ನು ವ್ಯಂಗ್ಯವಾಗಿ ಹೇಳುವ ಆಶಯ ವ್ಯಕ್ತಪಡಿಸಿದ್ದಾರೆ ಕಥೆಗಾರ್ತಿ.

ಪಕ್ಕದ ಮನೆ ಸರೋಜ ಒಬ್ಬ ಕಾಂಟ್ರಾಕ್ಟರನೊಂದಿಗೆ ಓಡಿಹೋದ ಸಂಗತಿ, ಎದುರು ಮನೆ ದಂಪತಿಗಳಿಗೆ ಮಾತನಾಡಲು ವಿಷಯವಾಗುವುದಲ್ಲದೆ ಹೆಂಡತಿ ಈ ವಿಚಾರವನ್ನು ಎಲ್ಲ ಕಡೆಗೂ ಹರಡುವ ತವಕದಿಂದ ಮಗ್ಗುಲು ಮನೆಯ ವಿಜಯಳಿಗೆ ಅವನ ಮೊದಲ ಹೆಂಡತಿಯ ಬಗ್ಗೆ ವಿವರಿಸುತ್ತಾ "ಅಯ್ಯೋ ಆ ಕೀಳು ಜಾತಿಯವಕ್ಕೇನು ಬಿಡಿ ಗಂಡ ಒಬ್ಬಳನ್ನು ನೋಡಿ ಕೊಂಡ್ರೆ, ಅವ್ಳು ಮತ್ತೊಬ್ರನ್ನ ನೋಡಿಕೊಂಡು ಬಿಡುತ್ವೆ"[೧೯] ಎನ್ನುವಲ್ಲಿ ಕೂಪ ಮಂಡೂಕದಂತೆ ವರ್ತಿಸುವ ಮೇಲ್ವರ್ಗದ ಸಂಪ್ರದಾಯನಿಷ್ಠ ಹೆಣ್ಣುಗಳ ಪ್ರತಿನಿಧಿಯಂತೆ ಕಾಣುವ ಈಕೆಯ ಮಾತುಗಳಲ್ಲಿ ಯಜಮಾನ ಸಂಸ್ಕೃತಿಯನ್ನು ಒಪ್ಪಿಕೊಂಡು ಅದನ್ನೇ ಮುಂದುವರೆಸುವ ಸ್ತ್ರೀಯರ ಸ್ವಭಾವದ ಅನಾವರಣ ಮಾಡಿದ್ದಾರೆ.

ಕೆಳವರ್ಗದ ಜನರಲ್ಲಿ ಪ್ರೀತಿ-ಪ್ರೇಮ ನಿಷ್ಠೆಗಳೇ ಇಲ್ಲ, ಅವೇನಿದ್ದರೂ ತಮ್ಮಂಥ ಮಧ್ಯಮ ವರ್ಗದ ಮೇಲ್ವರ್ಗದ ಜನರಲ್ಲಿ ಮಾತ್ರ ಕಾಣುತ್ತವೆ ಎಂಬಂತೆ ವರ್ತಿಸುವಾಗಲೇ ಅವಳ ಮಗಳು ಯಾವನೊಂದಿಗೋ ಓಡಿಹೋದ ಸುದ್ದಿಯನ್ನು "ಸುದ್ದಿಗೀಡಾಗಿದ್ದವರೇ" ಮಾತನಾಡಿಕೊಳ್ಳುತ್ತಿರುವ ವ್ಯಂಗ್ಯದೊಂದಿಗೆ ಕಥೆ ಕೊನೆಗೊಳ್ಳುತ್ತದೆ.

ದೇವೇಂದ್ರಕುಮಾರ ಹಕಾರಿಯವರ 'ಚಾಟಿ' ಕಥಾ ಸಂಕಲನದ 'ಬಿಸಿಲು ಗುದುರೆ' ಕಥೆಯು ನೀತಿಯನ್ನು ಪ್ರತಿಪಾದಿಸುತ್ತದೆ. ಅತಿಯಾದ ವ್ಯಾಮೋಹದಿಂದ ವೈಭವೀಕರಣದ ಜೀವನಕ್ಕೆ ಜೋತುಬಿದ್ದರೆ ಬದುಕು ಹೇಗೆ ವಿಫಲತೆಗೆ ಕಾರಣವಾಗುವುದು ಎಂಬುದನ್ನು ತಿಳಿಸುವ ಉದ್ದೇಶವಿಟ್ಟುಕೊಂಡು ಹೆಣೆದ ಕಥೆಯಾಗಿದೆ. ಪಾಶ್ಚಾತ್ಯರಿಂದ ಪ್ರಭಾವಿತರಾಗಿ ಅವರಂತೆ ತನ್ನ

ಬದುಕಿನ ವಸ್ತುಗಳನ್ನು ಬದಲಾಯಿಸಿಕೊಳ್ಳಬೇಕೆಂಬ ಅಭಿಲಾಷೆಯಿಂದ ಅಂತರಂಗದ ಭಾವನೆಗಳಿಗೆ ಲೌಕಿಕ ನಿಯಮಗಳನ್ನು ಮುರಿದು, ಸ್ವ ವಿಮರ್ಶೆ ಮಾಡಿಕೊಂಡಿರುವಂತಹ ಮತ್ತು ನಡೆಯುವ ಪ್ರತಿಯೊಂದು ಅನಾಹುತಕ್ಕೆ ತಾನೇ ಕಾರಣನೆಂಬ ಒಂದು ಮನೋಭಾವನೆ ಕಥಾ ನಾಯಕನಲ್ಲಿ ಎದ್ದು ಕಾಣುತ್ತದೆ.

ಕಥೆಯ ನಾಯಕನಾದ ನರೇಂದ್ರನಿಗೆ ತನ್ನ ಹೆಂಡತಿ ಸೌಂದರ್ಯವನ್ನು ಹತ್ತಾರು ಮಂದಿ ಕಾಣಬೇಕು, ಕಂಡು ಹೊಗಳಬೇಕೆಂಬ ಅಭಿಲಾಷೆಯಿಂದ ಅವಳಿಗೆ ಸಂಪೂರ್ಣ ಸ್ವಾತಂತ್ರ್ಯಕೊಟ್ಟು ಹುರಿದುಂಬಿಸುತ್ತಾನೆ. ಆದರೆ ಮುಂದೆ ನರೇಂದ್ರನಿಗೆ ನೀನಾಳ ತಂದೆಯ ಸಾವಿನಿಂದ ಫಾರ್ಮಿನ ಜವಾಬ್ದಾರಿಯೆಲ್ಲಾ ಬೀಳುತ್ತದೆ. ಅನಿವಾರ್ಯವಾಗಿ ವ್ಯವಹಾರದಲ್ಲಿ ಹೆಚ್ಚು ಲಕ್ಷ್ಯವಹಿಸಿದ್ದರಿಂದ ಹೆಂಡತಿಯ ಕಡೆಗೆ ಲಕ್ಷ್ಯ ವಹಿಸುವುದಿಲ್ಲ. ಆದರೆ ಅವಳು ಮಾತ್ರ ದಿನದಿಂದ ದಿನಕ್ಕೆ ವೈಭವದ ಜೀವನದಲ್ಲಿ ಕಾಲಹರಣ ಮಾಡುವುದು ಹೆಚ್ಚಾಗುತ್ತಾ ಹೋಗುತ್ತದೆ. ನೀನಾಳ ಫ್ರೇಂಡ್ಸ್ ದೆಹಲಿಯಿಂದ ಬರುವುದು ಪಾರ್ಟಿ, ಅಲೆದಾಟ ಅಲ್ಲದೆ ರಾತ್ರಿ ಸಹ ತಡವಾಗಿ ಬರಲು ಪ್ರಾರಂಭಿಸುತ್ತಾಳೆ.

ತಡವಾಗಿ ನೀನಾಳ ಕಾರ್ಯವನ್ನರಿತ  ನರೇಂದ್ರನು ಆ ಹೊತ್ತಿಗೆ ಬುದ್ಧಿ ಹೇಳುವ ಸ್ವಾತಂತ್ರ್ಯವನ್ನು ಕಳೆದುಕೊಂಡು ಮನಸ್ಸಿನಲ್ಲಿಯೇ ಕೊರಗುತ್ತಾನೆ. ತನಗಾದ ಆಘಾತ ಕುರಿತು ಪೇಂಟಿಂಗ್ಸಗಾಗಿ ಬಂದ ಗೆಳೆಯನಾದ ರವಿಯ ಮುಂದೆ ತನ್ನ ಅಳಲನ್ನು ತೋಡಿಕೊಳ್ಳುತ್ತಾನೆ.

ಕೊನೆಗೆ ಬಿಸಿಲುಗುದುರೆ ಬೆನ್ನ ಹತ್ತಿದ ನೀನಾ ದೆಹಲಿಯಿಂದ ಸ್ನೇಹಿತನಾದ ಚಂದ್ರಕಾಂತನೊಂದಿಗೆ ಪಾರ್ಟಿ ಮುಗಿಸಿ ಬರುತ್ತಿರಬೇಕಾದರೆ ಮಧ್ಯದಲ್ಲಿ ಆದ ಆಕ್ಸಿಡೆಂಟನಿಂದ ನೀನಾಳ ಸ್ಥಿತಿ ರಕ್ತಗತವಾಗಿ ಗಂಭೀರವಾಗುತ್ತದೆ. ಸಾವು-ಬದುಕಿನ ಮಧ್ಯ ಹೊರಾಡಬೇಕಾದ ಸ್ಥಿತಿಯಲ್ಲಿ ರಕ್ತ-ಬೇಕಾಗುತ್ತದೆ. ನರೇಂದ್ರ ಸಿದ್ದನಿದ್ದರೂ ರಕ್ತದ ಗ್ರುಫ್ ಬೇರೆಯಾಗುತ್ತದೆ. ಅಂತಹ ಅತಂತ್ರ ಸ್ಥಿತಿಯಲ್ಲಿ ಸ್ನೇಹಿತನಾದ ರವಿಬಾಬು ರಕ್ತಕೊಟ್ಟಿದ್ದಕ್ಕಾಗಿ ನೀನಾ ಬದುಕುತ್ತಾಳೆ. ಕೊನೆಗೆ ತನ್ನ ತಪ್ಪಿಗೆ ಪ್ರಾಯಶ್ಚಿತ್ತಳಾಗಿ ಭೂತಕ್ಕೆ ವ್ಯಥೆಪಟ್ಟು ಭವಿಷ್ಯತ್ತಿಗೆ ಹೊಂದಿಕೊಳ್ಳುವುದರೊಂದಿಗೆ ಕಥೆ ಕೊನೆಗೊಳ್ಳುತ್ತದೆ.

ಸಿಮ್ಲಾದಂತಹ ದೊಡ್ಡ ದೊಡ್ಡ ನಗರಗಳಲ್ಲಿ ನಡೆಯುವಂತಹ ಅಹಿತಕರ ಘಟನೆಗಳಿಗೆ ಹೀಗೆ ಎಷ್ಟೋ ಕುಟುಂಬಗಳು ಬಲಿಯಾಗುತ್ತವೆ, ತೊಂದರೆಗೆ ಈಡಾಗುತ್ತವೆ ಎಂಬುದನ್ನು ಗುರುತಿಸುವುದು ಈ ಕಥೆಯಲ್ಲಿದೆ. ಇಲ್ಲಿ ಬರುವಂತಹ ಎಲ್ಲ ಪಾತ್ರಗಳು ಉನ್ನತ ಶಿಕ್ಷಣ ಪಡೆದವರೇ, ಪಡೆದೂ ಸಹಿತ ವೈಭವೀಕರಣ ಜೀವನಕ್ಕೆ ಹೇಗೆ ಮರಳಾಗಿ ದುರಂತ ವ್ಯಕ್ತಿಗಳಾಗುತ್ತಾರೆಂಬುದನ್ನು ನೀನಾ, ನರೇಂದ್ರ, ಚಂದ್ರಕಾಂತರಿಂದ ತಿಳಿಯುತ್ತದೆ. ನರೇಂದ್ರನೇ ಕಥಾನಾಯಕನಾದರೂ ಕೂಡ ನಾಯಕೀಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಿದ್ದಾರೆ.

'ಚಾಟಿ' ಸಂಕಲನದ ಶೀರ್ಷಿಕೆ ಹೊತ್ತ ಈ ಕಥೆಯಲ್ಲಿ ಹಿಂದು ಮುಸ್ಲಿಂ ಬಾಂಧವ್ಯವನ್ನು ಸಂಕೇತಿಸುವುದರೊಂದಿಗೆ ಮನುಷ್ಯನ ಯಾವುದೇ ನಡತೆಯು ಮಿತಿಯನ್ನು ಮೀರಿ ಬೆಳೆದಿದೆ. ಸಂಭವಿಸುವ ಅನಾಹುತವೆಂತಹದ್ದು ಎಂಬುದನ್ನು ತೋರಿಸಿಕೊಡುತ್ತದೆ. ಕಥೆಯು ಪ್ರಾರಂಭದಿಂದಲೇ ಜುಲೇಖಾಬೇಗಂ ರವಿಗೆ ಬರೆದ ಲಕೋಟೆ, ಆತನನ್ನು ಸಂಬೋಧಿಸುವ ರೀತಿ, ಆತನಿಗೆ ವಹಿಸಿದ ಜವಾಬ್ದಾರಿ ಮುಂತಾದವುಗಳನ್ನು ಸ್ಪಷ್ಟಪಡಿಸುತ್ತವೆ.

ಮಲ್ಲಿಕಾರ್ಜುನ ರಾವ ಅವರ ಹತ್ತಿರ ರವಿ, ದಿಲವಾರ್ ಹುಸೇನ ಇಬ್ಬರೂ ಇಂಗ್ಲೀಷ್ ಟ್ಯೂಷನಕ್ಕಾಗಿ ಹೋಗುವುದರಿಂದ ಮೂಲಕ ಆತ್ಮೀಯತೆ ಬೆಳೆಯುತ್ತದೆ. ಒಮ್ಮೆ ಹಿಮಾಯತ್ ಸಾಗರಕ್ಕೆ ಪಿಕನಿಕ್ ಹೋದಾಗ ಅಲ್ಲಿ ಈಜಲು ಹೋಗಿ ದಿಲ್‌ವಾರ ಸಾಗರಕ್ಕೆ ಬಿದ್ದಾಗ ಜೀವನ ಆಸೆ ತೊರೆದು ರವಿ ಆತನನ್ನು ಉಳಿಸಿದ ಪ್ರಸಂಗವು ರವಿ ದಿಲವಾರ್‌ನಿಗಲ್ಲದೆ, ಅವರ ತಾಯಿ ಜುಲೆಖಾಳಿಗೂ, ತಂಗಿ ರಜಿಯಾಳಿಗೂ ಅತೀ ಆತ್ಮೀಯನಾಗಲು ಕಾರಣವಾಯಿತು. ಅಂದಿನಿಂದ ರವಿ ಆ ಮನೆಯ ಮಗನಾಗಿ, ರಜಿಯಾಳಿಗೆ ಅಣ್ಣನಾಗಿ ದಿಲ್‌ವಾರನಿಗೆ ಸೋದರನಾಗಿ ಬೆರೆತು ಹೋದನು. ಆತನೂ ಆ ಮನೆಯ ಒಬ್ಬ ಸದಸ್ಯನೇ ಎನ್ನುವಷ್ಟು ಪ್ರೀತಿ ವಿಶ್ವಾಸ ಆತ್ಮೀಯತೆ ಬೆಳೆದಿತ್ತು. ಇಷ್ಟೇಲ್ಲಾ ಸುಂದರ ಸಾಮರಸ್ಯ ಬದುಕಿಗೆ ವ್ಯತಿರಿಕ್ತವೆಂಬಂತೆ ದಿಲ್‌ವಾರ ಕಂಡ ಹುಡುಗಿಯರ ಬೆನ್ನು ಹತ್ತುವ ಮತ್ತು ಅವರ ಕರವಸ್ತ್ರಗಳನ್ನು ಇತ್ಯಾದಿಗಳನ್ನು ಕದಿಯುವ, ದಾರಿಯಲ್ಲಿ ಅರಿಯದವನಂತೆ ಡಿಕ್ಕಿ ಹೊಡೆಯುವ ವಿಚಿತ್ರವಾದ ಚಟಕ್ಕೆ ಅಂಟಿಕೊಂಡಿದ್ದನು. ಇದರಿಂದ ಜುಲೇಖಾಳಿಗೆ, ತಂಗಿ ರಜಿಯಾಳಿಗೆ, ಸ್ನೇಹಿತ ರವಿಗಷ್ಟೇ ಅಲ್ಲದೆ ಸುತ್ತಮುತ್ತಲಿನವರಿಗೆಲ್ಲ ಬೇಸರವುಂಟಾಗಿ ಅದರಿಂದ ಆಗುವ ಅನಾಹುತಗಳನ್ನು ಹೇಳಿದರೂ ಸಹ ದಿಲ್‌ವಾರ ತನ್ನ ದಾರಿ ಬಿಡಲಿಲ್ಲ.

ದಿಲ್‌ವಾರ ಒಂದು ದಿನ ಚೇಷ್ಟೆಯಿಂದ ತನ್ನ ತಂಗಿ ರಜಿಯಾಳ ಕೂದಲನ್ನೇ ಕತ್ತರಿಸಿ ಕರವಸ್ತ್ರದಲ್ಲಿಟ್ಟುಕೊಂಡು ಬಂದು ರವಿಗೆ ತೋರಿಸಿ ಖುಷಿ ಪಡುತ್ತಿರಬೇಕಾದರೆ, ಹೊರಗಿನಿಂದ ಆದ ಅವಮಾನವನ್ನು ತಡೆದುಕೊಳ್ಳಲಾಗದ ರಜಿಯಾ ತಲೆಗೆ ಕೈಹಿಡಿದುಕೊಂಡು "ಮಾಂ ನನ್ನ ಅಬರೂ. . . ಅಬರೂ. . ." ಎಂದು ರೋಧಿಸುತ್ತಾ ಮನೆಯಲ್ಲಿ ಕಾಲಿರಿಸಿದಳು ಗಾಬರಿಗೊಂಡ ರವಿ ಅವಳ ಬೋಳಾದ ತಲೆ ನೋಡಿ ಸ್ನೇಹಿತನ ಮೇಲೆ ಕೆಂಡವಾದ.

ಈ ವಿಷಯ ತಿಳಿದ ದಿಲವಾರನ ತಾಯಿ ಮಗನನ್ನು ಚೆನ್ನಾಗಿ ಚಾಟಿಯಿಂದ ಭಾರಿಸುತ್ತಾಳೆ. ಆಗ ಮೈಯಿಂದ ಮೂಗಿನಿಂದ ರಕ್ತ ಚಿಮ್ಮುತ್ತಿರಲು ರವಿ, ರಜಿಯಾ ಗಾಬರಿಗೊಂಡು ನೋಡುತ್ತಿರುತ್ತಾರೆ. ದಿಲ್‌ವಾರನ ಯಾವ ಮಾತಿಗೂ ಕಿವಿಗೊಡದೆ ಒಂದೇ ಸಮನೆ ಚಾಟಿಯಿಂದ ಹೊಡೆಯುತ್ತಿರುವಾಗ ದಿಲವಾರ ನಿಶ್ಚಿತನಾಗಿ ನೆಲಕ್ಕೆ ಬಿದ್ದು ಬಿಡುತ್ತಾನೆ.

ಮತ್ತೆ ತಾಯಿಯ ವಾತ್ಸಲ್ಯ, ತಂಗಿಯ ಮಮತೆ, ಸ್ನೇಹಿತನ ಪ್ರೀತಿ, ಅಭಿಮಾನ ಇತ್ಯಾದಿಗಳು ಆತನಲ್ಲಿ ಅರಿವನ್ನು ಮೂಡಿಸುತ್ತವೆ. ಕೊನೆಗೆ ದಿಲ್‌ವಾರ ರವಿಯ ಕಡೆಗೆ ನೋಡಿ "ಮಾ ಅಲ್ಲಾ . . . . ಹೈ" (ದೇವರು) ಎಂದು ತಾಯಿಯ ಪಾದಕ್ಕೆ ತಬ್ಬಿ ಬಿಕ್ಕಳಿಸುತ್ತಾನೆ. ತಾನು ಮಾಡಿದ ಕೆಟ್ಟ ಕೆಲಸಕ್ಕೆ ಪ್ರಾಯಶ್ಚಿತಪಟ್ಟು ಇನ್ನು ಮುಂದೆ ಹಾಗಾಗದಂತೆ ನೋಡಿಕೊಳ್ಳುತ್ತೇನೆಂದು ತಾಯಿಗೆ ಆಶ್ವಾಸನೆ ಕೊಡುವುದರೊಂದಿಗೆ ಕತೆ ಕೊನೆಗೊಳ್ಳುತ್ತದೆ.

ಕತೆಗಾರರು ಇಲ್ಲಿ ಜಾತಿಯತೆಯ ಒಂದು ಎಳೆಯೂ ಸುಳಿಯದಂತಹ ನಿರ್ಮಲ ಮನಸ್ಸುಗಳನ್ನು ಸಂಶಯದ ಸುಳಿಗಾಳಿಯೂ ಬೀಸದಂತಹ ಶ್ವೇತ ಹೃದಯದ ಚಿತ್ರಣಗಳನ್ನು ಕಟ್ಟಿಕೊಂಡುವುದರೊಂದಿಗೆ ಆತ್ಮೀಯತೆ, ಪ್ರೀತಿ, ವಿಶ್ವಾಸಕ್ಕೆ ಭಾಷೆ, ಜಾತಿ ಇವಾವುಗಳು ಮುಖ್ಯವಾಗಲಾರವು ಎಂದು ಎರಡೂ ಪಾತ್ರಗಳ ಮೂಲಕ ತೋರಿಸಿದ್ದಾರೆ.

ಇವರ ಮತ್ತೊಂದು ಕಥೆಯಾದ 'ದಾರಿ' ಇದರಲ್ಲಿ ಹಾವು ನಾಯಕನ ಬೈಕಿನ ಚಕ್ರಕ್ಕೆ ಸಿಕ್ಕಿಕೊಂಡು ಸಾಯದೇ ಉಳಿಯುತ್ತದೆ. ಈ ಹಾವನ್ನೇ ಕಥೆಗಾರರು ಕಥಾ ನಾಯಕನಲ್ಲಿರುವ ಚೇತನಾಳನ್ನು ಪಡೆಯಬೇಕೆಂಬ ಬಯಕೆಗೆ ಹೋಲಿಸಿದ್ದಾರೆ. ಹೀಗಾಗಿ ಪ್ರವಾಸಿ ಮಂದಿರದಲ್ಲಿ ಬಂದ ನೆನಪುಗಳು ಅವನ ನೆನಪಿನ ಚಕ್ರಕ್ಕೆ ಸಿಕ್ಕು ಜೀವಂತವಾಗಿಯೇ ಉಳಿಯುತ್ತದೆ. ನಂತರ ಕಥೆಯ ಕೊನೆಯಲ್ಲಿ ಮತ್ತೆ ಚೇತನಾಳನ್ನು ಕಂಡ ನಾಯಕನು ಅವಳು ಆಗಲೇ ತನ್ನ ಬದುಕನ್ನು ರೂಪಿಸಿಕೊಂಡಿದ್ದು, ಆತನ ಅರಿವಿಗೆ ಬಂದು, ತಾನು ಅವಳನ್ನು ಪಡೆಯಬೇಕೆಂಬ ಬಯಕೆಗಳು ಸತ್ತುಹೋಗುತ್ತವೆ. ಅಲ್ಲದೆ ಅವಳು ವಿವಾಹಿತೆಯಾಗಿದ್ದು, ಒಂದು ಮಗುವಿನ ತಾಯಿಯೂ ಆಗಿದ್ದಾಳೆ. ಹೀಗಿರುವುದರಿಂದ ನಾಯಕ ಅನಾವಶ್ಯಕವಾಗಿ ಚರ್ಚೆಗೆ ಇಳಿಯದೇ ತನ್ನ ಮನದಲ್ಲಿದ್ದ ಆಸೆ–ಆಕಾಂಕ್ಷೆಗಳನ್ನು ತಾನಾಗಿಯೇ ಒತ್ತಿಟ್ಟುಕೊಂಡು ಮನೆಯಲ್ಲಿ ಬಂದ ಹಾವನ್ನು ಸಾಯಿಸುವುದರ ಮೂಲಕ ತನ್ನ ಆಸೆ ಆಕಾಂಕ್ಷೆಗಳನ್ನು ಸಾಯಿಸಿಕೊಳ್ಳುತ್ತಾನೆ. ಬೆಳಿಗ್ಗೆ ಪ್ರಕಾಶ ಹೋಗುವಾಗ ಚೇತನಾಳು ಮತ್ತೆ ಬರಬೇಕಾಗಿ ಒತ್ತಾಯಿಸಿದಾಗ ಬರಲು ಒಪ್ಪುತ್ತಾನೆ. ಅಲ್ಲದೆ ಅವಳ ಒಂದು ಆಕಾಂಕ್ಷೆಯೂ ಅಲ್ಲಿ ವ್ಯಕ್ತವಾಗುತ್ತದೆ. ಅದು ಬರಬೇಕಾದದ್ದು ನೀನು ಒಬ್ಬನೇ ಅಲ್ಲ, ನಿನ್ನ ಮಡದಿಯನ್ನು ಕರೆತರಬೇಕು ಎಂಬುದು ಅದಕ್ಕೆ ಅವನೂ ಸಮ್ಮತಿಸುತ್ತಾನೆ. ಇದರಿಂದ ಜೇತನಾಳ ಬದುಕನ್ನು ಅವನು ಅವನ ಸ್ಥಿತಿಯನ್ನು ಅವಳು ತಾವಾಗಿಯೇ ತಮ್ಮ ತಮ್ಮ ಆಂತರಿಕ ಮನೋ ಬಲಗಳಿಂದ ಅರ್ಥೈಯಿಸಿಕೊಂಡು ಅವರ ಬದುಕಿನಲ್ಲಿ ಬಂದವರೊಂದಿಗೆ, ರೂಪಿಸಿಕೊಳ್ಳುವ ನಿರ್ಧಾರವನ್ನು ಕಾಣುತ್ತೇವೆ.

ಈ ಇಡೀ ಕಥೆಯ ಹಂದರ ದೈವ ಅಥವಾ ಕಾಲದ ಘಟನೆಯಲ್ಲಿ ಸಿಕ್ಕು ಅಲ್ಲೋಲ ಕಲ್ಲೋಲವಾಗಿ ಪ್ರಯತ್ನ ನಿಷ್ಫಲತೆಯನ್ನು ತೋರಿಸುತ್ತದೆ. ಇದರಿಂದಾಗಿ ಇಲ್ಲಿನ ನಾಯಕ ಮತ್ತು ನಾಯಕಿ ಸಮಾಜದ ರೀತಿ–ನೀತಿಗಳಿಗೆ ಹೊಂದಿಕೊಂಡು ತಮ್ಮ ಬದುಕನ್ನು ನಡೆಸುವ ನಿರ್ಧಾರಕ್ಕೆ ಬರುತ್ತಾರೆ.

ಒಟ್ಟಾರೆ ಈ ಕಥೆಯಲ್ಲಿ ವ್ಯಕ್ತಿ ವ್ಯಕ್ತಿಗಳ ವಿವಿಧ ಸಂಬಂಧಗಳನ್ನು ಅನುಕಂಪ ಹಾಗೂ ಮಾರ್ಧವತೆಯಿಂದ ವಿಶ್ಲೇಷಿಸುವ ಮನೋಧರ್ಮ ಇದರಲ್ಲಿದೆ.

**ಸಂಕೀರ್ಣ ವಿಷಯಗಳ ಚಿತ್ರಣ :**

ಕೆಲವು ವಿಶಿಷ್ಟ ಅಂಶಗಳನ್ನಲ್ಲದೆ ಸಾಮಾನ್ಯ ಅಂಶಗಳನ್ನು ಪ್ರತಿನಿಧಿಸುವ ಕಥೆಗಳನ್ನು ಇಲ್ಲಿ ವಿವೇಚಿಸಲಾಗಿದ್ದು, ಸಮಾಜದ ವಿವಿಧ ಮುಖಗಳನ್ನು ಪರಿಚಯಿಸುವಂತಹವಾಗಿವೆ. ಬಡವರ ಮೇಲೆ ಶ್ರೀಮಂತರ ಅಟ್ಟಹಾಸ, ಸಾಮಾಜಿಕ ಮೌಲ್ಯ, ರಜಾಕಾರರ ಹಾವಳಿ, ಭಾರತ ವಿಭಜನೆ, ಸಂಘರ್ಷ, ಪ್ರಕೃತಿ ಚಿತ್ರಣ, ನಗರ ಜೀವನ, ವೈಜ್ಞಾನಿಕತೆ, ಕೌಟುಂಬಿಕ ಜೀವನ, ಪ್ರಾಮಾಣಿಕತೆ, ಅಂತರಜಾತಿ ವಿವಾಹ, ರಾಜಕೀಯ, ಮಾನವೀಯತೆ, ಸಂಪ್ರದಾಯ, ವಾತ್ಸಲ್ಯ, ದೇಶಪ್ರೇಮ, ಸ್ನೇಹ–ಬಾಂಧವ್ಯ, ನಿರಾಶೆ, ಸಾವು, ಆದರ್ಶ, ಹಾಸ್ಯವಿಡಂಬನೆ, ಐತಿಹಾಸಿಕ ಘಟನೆ ಹೀಗೆ ಮುಂತಾದ ವಿಷಯಗಳು ಇಲ್ಲಿ ಅಡಕವಾಗಿವೆ.

ಸಿದ್ಧರಾಮ ಹೊನ್ನಲ್‌ರ 'ಸ್ಥಿತಿ–ಗತಿ,' ಸಗರ ಕೃಷ್ಣಚಾರ್ಯರ 'ಸಾಹಿತಿಯ ಜೀವನ', ಸೂಗಯ್ಯ ಹಿರೇಮಠರ 'ಸ್ಥಿತಿ', 'ಫಲ', 'ಏಳು ಸುತ್ತಿನಕೋಟೆ', ಚಿತ್ರಶೇಖರ ಕಂಠಿಯವರ 'ನದಿಯ ನೀರಾಗಿ ಹರಿದಿ ಹೋದ', 'ಕಾಡುಪ್ರೀತಿ ಮತ್ತು ನಾನು', 'ಸೋಪಾನಗಳು', 'ಹೂಳು', 'ತಿರುವು', ಹತಗುಂದಿಯವರ 'ತೂತುಗಡಿಗೆಯ ಗೋಳು', ಸರಿತಾ ಕುಸುಮಾಕರ ದೇಸಾಯಿಯವರ 'ಲಕ್ಷ್ಮಣರೇಖೆ', 'ಧ್ರುವಮಿಲನ', 'ಸ್ಮೃತಿ ಪತ್ರ', 'ಕಾಶಿಯಲ್ಲಿ ಕಂಡದ್ದೇನು?' 'ಸರಕಾರದ ಸಹಾಯ', 'ಅಯ್ಯೋ ಇಷ್ಟೇನಾ?' ಲಕ್ಷ್ಮೀದೇವಿ ಶಾಸ್ತ್ರಿಯವರ 'ತ್ರೀ–ಡಿ', 'ಸುಸಂಸ್ಕೃತರು', ಕಾವ್ಯಾನಂದರ' ಮಣಿಮಾಲೆ', 'ಕೆಸರಿನಲ್ಲಿ ಲಕ್ಷ್ಮೀ', 'ಸರ್ವವೂ ಶಿವಪ್ರಸಾದ', ರಾಜ ಪುರೋಹಿತರ' ಯಾರು ನಮ್ಮವರು', 'ರೋಹಿಣಿ', 'ಗೋಮಯ ವಿವೇಕ', 'ಶಿಥಿಲಶಿಲೆ', ನೀರಮಾನ್ವಿಯವರ 'ದುರಸ್ತಿ', 'ವೃತ್ತಿ', ಪಂಚಾಕ್ಷರಿ ಹಿರೇಮಠರ 'ಎಸ್ನಾಲೇಕ', 'ಉಚ್ಚಂಗಿದುರ್ಗ' ಮುಂತಾದ ಕಥೆಗಳು ಬಾಳಿನ ವಿವಿಧ ಮುಖಗಳ ಚಿತ್ರಣ ನೀಡುವಲ್ಲಿ ಸಮರ್ಥವಾಗಿವೆ.

ಸಾಹಿತಿಯೊಬ್ಬನಿಗೆ ಸಾಹಿತ್ಯ ಶ್ರೀಮಂತಿಕೆಯ ಜೊತೆಗೆ ಮೂಲಭೂತ ಸೌಲಭ್ಯಗಳನ್ನು ಪೂರೈಸಿಕೊಳ್ಳುವಷ್ಟು ಆರ್ಥಿಕ ಶಕ್ತಿ ಅವಶ್ಯವೆಂಬುದನ್ನು ಸಗರ ಕೃಷ್ಣಾಚಾರ್ಯರು ಸಾಹಿತಿಯ ಜೀವನ ಕಥೆಯ ಮೂಲಕ ಚಿತ್ರಿಸಿದ್ದಾರೆ. ಕಥಾನಾಯಕ ಸಾಹಿತಿ ರಮಾನಂದರಿಗೆ ಕೇವಲ ಹೊಗಳಿಕೆ ಸತ್ಕಾರ ಸಮಾರಂಭಗಳು ದೊರೆಯುತ್ತವೆ. ಹೊರತಾಗಿ ಅವರ ಬಡತನದ ಬವಣೆಗೆ ಯಾವ ಸ್ಪಂದನೆಯು ಸಾಧ್ಯವಾಗದು, ಪ್ರಸ್ತುತ ಕಥೆಯಲ್ಲಿ ಕಥೆಗಾರರು "ಜಗವೆಲ್ಲ ನಗುತಿರಲಿ ಜಗದಳುವು ನನಗಿರಲಿ" ಎಂಬ ವೈಶಾಲತೆಯಲ್ಲಿಯೇ ಸಾಹಿತಿ ಬದುಕಬೇಕಾಗುತ್ತದೆ. ಎನ್ನುವ ಆತಂಕ ತೋರುತ್ತಾರೆ. ಒಟ್ಟಾರೆ ಕಥೆ ಬಡ ಸಾಹಿತಿಯೊಬ್ಬರ ಬದುಕಿನ ಬವಣೆಯನ್ನು ಆದರ್ಶವನ್ನು ಅಭಿವ್ಯಕ್ತಪಡಿಸುತ್ತದೆ.

ರಾಜಶೇಖರ ಹತಗುಂದಿಯವರು 'ತೂತು ಗಡಿಗೆಯ ಗೋಳು' ಕಥೆಯ ಮೂಲಕ ವ್ಯಕ್ತಿಸ್ಥಾನ ಜವಾಬ್ದಾರಿತನ ಸ್ವಾರ್ಥ ಸಾಧಕತೆಗಳ ಸಾಮಾಜಿಕ ವಾತಾವರಣವನ್ನು ಹೇಗೆ ಕೆಡಿಸಬಲ್ಲವು ಎಂಬುದನ್ನು ಶಾಣಯ್ಯ ಶಿಕ್ಷಕ ಪಾತ್ರದ ಮೂಲಕ ಚಿತ್ರಿಸಿದ್ದಾರೆ. ಇಂತಹ ಸಮಾಜ ಕಂಠಕರು ಇದ್ದ ವ್ಯವಸ್ಥೆಯನ್ನು ಹಾಳುಗೆಡವುತ್ತಾರೆ, ಎಂಬ ಅಂಶ ಅರ್ಥಪೂರ್ಣವಾಗಿ ಮೂಡಿ ಬಂದಿದೆ. 'ಸ್ಥಿತಿ' ಕಥೆಯ ಮೂಲಕ ಸೂಗಯ್ಯ ಹಿರೇಮಠರು ಇದೇ ತೆರನಾದ ಚಿತ್ರಣ ನೀಡಲು ಯತ್ನಿಸಿದ್ದಾರೆ.

ನಿರುದ್ಯೋಗ ಸಮಸ್ಯೆಯ ಧಾರಣ ಚಿತ್ರಣದೊಂದಿಗೆ ಗಡಿ ಸಮಸ್ಯೆ, ಪ್ರಾದೇಶಿಕ, ಜನಾಂಗೀಯ ಮತ್ತು ಭಾಷಿಕ ದ್ವೇಷಾಸೂಯೆಗಳು ಸಂಕುಚಿತ ಮನೋಭಾವಗಳು ಅಭಿವೃದ್ದಿಗೆ ಪೂರಕವಾದವುಗಳಲ್ಲ ಎಂಬ ಚಿಂತನೆಯನ್ನು ಸಿದ್ದರಾಮ ಹೊನ್ಕಲ್‌ರು 'ಸ್ಥಿತಿಗತಿ' ಕಥೆಯ ಮೂಲಕ ಮಂಡಿಸುತ್ತಾರೆ. ಬಿ.ಕಾಂ. ಪದವಿಧರ 'ರವಿ' ಗೋವಾದಲ್ಲಿದ್ದಾಗ ಕೆಲಸಕ್ಕೆಂದು ಸಂದರ್ಶನಕ್ಕೆ ಹಾಜರಾಗುತ್ತಾನೆ. ರವಿ ಅನ್ಯ ಭಾಷೆಯವನೆಂದೆಣಿಸಿ ಕೆಲಸದಿಂದ ವಂಚಿತನಾಗುತ್ತಾನೆ. ನಿರುದ್ಯೋಗದಿಂದ ನರಳಿದ್ದ ರವಿ ಬೇರೆ ರಾಜ್ಯದಲ್ಲಿಯಾದರೂ ತನ್ನ ಸಾಮರ್ಥ್ಯ ಪರಿಗಣಿಸಿ ಕೆಲಸ ದಕ್ಕಬಹುದೆಂದುಕೊಂಡಿದ್ದ, ಅಲ್ಲಿಯೂ ಸಂಕುಚಿತ ಸೀಮೆಗಳು ಅಡ್ಡಬಂದು ನಿರಾಶನಾದ ರವಿ, ನದಿಗೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತಾನೆ. ಪ್ರಸ್ತುತ ಕಥೆಯಲ್ಲಿ ಸಿದ್ಧರಾಮ ಹೊನ್ಕಲ್‌ರು ನಿರುದ್ಯೋಗ, ಪ್ರಾದೇಶಿಕ ಭಾಷಿಕ ಮತ್ತು ಗಡಿ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಲು ಪ್ರಯತ್ನಿಸಿದ್ದಾರೆ.

'ನದಿಯ ನೀರಾಗಿ ಹರಿದು ಹೋದ', 'ಹಣ್ಣು', 'ಹೂಳು', 'ತಿರುವುಗಳು', 'ಹುಲ್ಲೂರಿನ ದಳ್ಳೂರಿ', 'ದಾರಿ', 'ಅಕ್ಕವ್ವ', 'ಕಾಡುಪ್ರೀತಿ ಮತ್ತು ನಾನು', 'ಸೋಪಾನಗಳು' ಕಥೆಯ ಮೂಲಕ ವಿದ್ಯೆ ಮತ್ತು ಅಧಿಕಾರದ ಮದ ಅಹಂಕಾರಗಳ ಚಿತ್ರಣ ನೀಡಿದ್ದಾರೆ. ತಮ್ಮ ಭವಿಷ್ಯಕ್ಕಾಗಿ ಬದುಕನ್ನೇ ಒತ್ತೆಯಿಟ್ಟು ಹೆತ್ತವರನ್ನು ಮರೆಯುವ ಮತ್ತು ಅವಮಾನಿಸುವ ವಿದ್ಯಾವಂತ ಮತ್ತು ನೌಕರಸ್ಥ ಮಕ್ಕಳ ವಿಚಿತ್ರ ವರ್ತನೆ ಈ ಎರಡೂ ಕಥೆಗಳಲ್ಲಿ ಮೂಡಿಬಂದಿದೆ.

ಸಾಮಾನ್ಯವಾಗಿ ಸಾಹಿತಿಗಳು ವ್ಯವಸ್ಥೆಯ ಪ್ರಜ್ಞೆ ಹೊಂದಿದವರಾಗಿದ್ದು ಸಾಮಾಜಿಕ ಮಾನವೀಯ ಮತ್ತು ಅಭಿವೃದ್ಧಿಪರ ಕಾಳಜಿ ಉಳ್ಳವರಾಗಿರುತ್ತಾರೆ. ಸಾಹಿತಿಯೊಬ್ಬ ತನ್ನ ಉದ್ಯೋಗದಲ್ಲಿಯ ನ್ಯೂನ್ಯತೆಗಳನ್ನು ಎತ್ತಿ ಬರೆದು ವಜಾಗೊಳ್ಳುವ ಅಧಿಕಾರಿಶಾಹಿಯ ಕ್ರೂರತನದ ಚಿತ್ರಣ 'ಹೀಗೊಬ್ಬ ಕಥೆಗಾರ' ಕಥೆಯ ಮೂಲಕ ಚಿತ್ರಶೇಖರ ಕಂಠಿಯವರಿಂದ ಚಿತ್ರಣಗೊಂಡಿದೆ. ಸ್ವತಃ ಬರಹಗಾರ ಮತ್ತು ನೌಕರಸ್ಥರಾಗಿರುವ ಕಂಠಿಯವರು ಸೋಮುವಿನ ಪಾತ್ರದ ಮೂಲಕ ಬರಹಗಾರ, ನೌಕರಸ್ಥರ ಮನೋಸ್ಥಿತಿಯನ್ನು ಅಭಿವ್ಯಕ್ತಿಸಿದ್ದಾರೆ.

ಈ ದೇಶದಲ್ಲಿ ಸುಲಭವಾಗಿ ಎಲ್ಲರ ಮೋಸಕ್ಕೆ ಬಲಿಯಾಗುವವ ರೈತನೊಬ್ಬನೆ ವ್ಯಾಪಾರಿ ನೌಕರ ಹಾಗು ಅಧಿಕಾರಿ ವರ್ಗದವರೆಲ್ಲ ರೈತರಿಗೆ ಕೃತಘ್ನರೆ. ಈ ಹದಗೆಟ್ಟ ಆರ್ಥಿಕ ಪರಿಸ್ಥಿತಿಯಿಂದಾಗಿ ಬ್ಯಾಂಕಿನಿಂದ ಸಾಲ ಯಾಚಿಸಿದ ರೈತನನ್ನು ಗೋಳಾಯಿಸುವ ಬ್ಯಾಂಕಿನ ಅಧಿಕಾರಿಗಳ ಕ್ರೂರತನ

ಮತ್ತು ಧರೆಯಂತೆ ಎಲ್ಲವೂ ಸಹಿಸಿಕೊಂಡು ಶೋಷಣೆಗೆ ಬಲಿಯಾಗುವ ರೈತನ ಮುಗ್ಧತನವನ್ನು ಶ್ರೀಮತಿ ಸರಿತಾ ಕುಸುಮಾಕರ ದೇಸಾಯಿಯವರು 'ಸರಕಾರದ ಸಹಾಯ' ಕಥೆಯಲ್ಲಿ ಹೃದಯ ಮಿಡಿಯುವಂತೆ ಚಿತ್ರಿಸಿದ್ದಾರೆ. ಇವರದೆ ಆದ ಇನ್ನೊಂದು ಕಥೆ 'ಲಕ್ಷ್ಮಣ ರೇಖೆ'ಯಲ್ಲಿ ಸ್ನೇಹದ ಪರಿಧಿಯನ್ನು ಚಿತ್ರಿಸಿದ್ದಾರೆ, 'ಸೌದಾಮಿನಿ' ಈ ಕಥೆಯ ನಾಯಕಿ. ಇವಳನ್ನು ಶ್ಯಾಮ ಪ್ರೀತಿಸಿ ಜಾತಕ ಕೂಡಿಬಾರದೆ ಮದುವೆಯಾಗದ ಸ್ನೇಹಿತನಾದರೆ, ಮೂರ್ತಿ ಇವಳ ಕೈಹಿಡಿದಾತ. ಈ ಮೂವರ ನಡುವಿನ ಪರಸ್ಪರ ಭಾವನೆಗಳ ತೊಳಲಾಟ ಕಂಡು ಬಂದರೂ ಮೂರ್ತಿ ಮತ್ತು ಸೌದಾಮಿನಿಯರು ತನ್ನ ಬಗೆಗೆ ಹೊಂದಿರುವ ಗೌರವ ಪ್ರೀತಿ ಆದರಗಳಿಂದ ಆತನ ಭಾವನೆಗಳಿಗೆ ಬಲಿಯಾಗದೆ ಆದರಣೀಯವಾಗಿಯೇ ಉಳಿಯುತ್ತಾನೆ. ಪರಿಶುದ್ದ ಬಾವನೆಗಳನ್ನು ಅರ್ಥಮಾಡಿಕೊಳ್ಳುವ ಹೃದಯ ವೈಶಾಲ್ಯತೆ ಈ ಮೂವರಲ್ಲೂ ಕಂಡುಬರುತ್ತದೆ. ಹೀಗೆ ತಮ್ಮ ಪರಿಶುದ್ಧ ಭಾವನೆಗಳಿಂದ ತಮ್ಮ ಮನಸ್ಸಿಗೆ ತಾವೇ ಲಕ್ಷ್ಮಣರೇಖೆಯ ಪರಿಧಿಯನ್ನು ಹಾಕಿಕೊಂಡು ಸ್ನೇಹಕ್ಕೆ ಅರ್ಥ ನೀಡಿದ್ದಾರೆ.

'ಹುಚ್ಚು ಮನಸ್ಸಿನ ಹೂಬಾಣಗಳು' ಕಥೆಯಲ್ಲಿ ವಿಸಾಜಿಯವರು ಮನುಷ್ಯನ ಮನಸ್ಸಿನಲ್ಲಿ ಹುದುಗಿರುವ ಅನೇಕ ಗುಣಗಳ ಜೊತೆಗೆ ಒಬ್ಬ ಕುಡುಕನ ಜೀವನವನ್ನು ಕುರಿತು ಹೇಳಲಾಗಿದೆ. ಮಾಧವಾನಂದ-ಶೋಭನಾದೇವಿ ದಂಪತಿಗಳ ಕುಟುಂಬ ಸಭ್ಯ ಮತ್ತು ಸುಶೀಲತೆಯಿಂದ ಕೂಡಿದ್ದಿತ್ತು. ಇವರ ಕೇರಿಯಲ್ಲಿಯೇ ಕುಡುಕನ ಕುಟುಂಬವೊಂದು ಎದುರು ಮನೆಯಲ್ಲಿಯೇ ವಾಸವಾಗಿತ್ತು. ಆ ಕುಡುಕ ದಿನಾಲು ಕುಡಿದು ಬಂದು ಹೆಂಡತಿಗೆ ಪೀಡಿಸುವುದನ್ನು ಕಂಡು ಅವರು ಅವನ ಹೆಂಡತಿಯ ಬಗ್ಗೆ ಕನಿಕರ ವ್ಯಕ್ತಪಡಿಸುತ್ತಿದ್ದರು. ಮುಂದೆ ಅದೇ ಕುಟುಂಬವು ಸಂಸಾರಿಕವಾಗಿ ಇಲ್ಲಿಯ ವಸ್ತುವಾಗಿದೆ. ಇಲ್ಲಿ ಕಥೆಗಾರರು ಒಬ್ಬರು ಕಷ್ಟದಲ್ಲಿರುವಾಗ ಇನ್ನೊಬ್ಬರು ಭಾಗಿಯಾಗಬೇಕೆಂಬ ಮಾನವೀಯತೆಯ ಗುಣವನ್ನು ಎತ್ತಿ ತೋರಿಸಿದ್ದಾರೆ.

ಇವರ ಇನ್ನೊಂದು ಕಥೆಯಾದ 'ಮಲ್ಲಪ್ಪ ಹಿರಿ ಹಿರಿ ಹಿಗ್ಗಿದ' ಇದರಲ್ಲಿ ಒಂದು ಕುಟುಂಬದ ಸುತ್ತ ಹೆಣೆಯಲಾದ ಚಿತ್ರಣವಿದೆ. ಸೇವೆ ಕರ್ತವ್ಯಗಳ ಅರ್ಥವನ್ನು ಸ್ಪಷ್ಟವಾಗಿ ಪಾತ್ರಗಳ ಮೂಲಕ ಹೇಳ ಹೊರಟಿರುವುದು ಗಮನಾರ್ಹವಾಗಿದೆ. ಮಲ್ಲಪ್ಪ ಒಬ್ಬ ಬಡವ, ಜೀವನವನ್ನು ನಡೆಸಲು ಒಂದು ಸಣ್ಣದಾದ ಅಂಗಡಿಯನ್ನು ಇಟ್ಟುಕೊಂಡಿದ್ದನು. ಮೊದಲನೆಯ ಹೆಂಡತಿ ಮಲ್ಲವ್ವ ತೀರಿಕೊಂಡಿದ್ದರಿಂದ ಮರುಮದುವೆಯಾಗಿ ಶಾಂತವ್ವನನ್ನು ಮಡದಿಯಾಗಿ ಸ್ವೀಕರಿಸುತ್ತಾನೆ. ಮೊದಲನೆ ಹೆಂಡತಿ ಮಗನಾದ ರಾಮುವಿಗೆ ಮೊದಮೊದಲು ಪ್ರೀತಿಯ ತಾಯಿಯಾಗಿ ಕಂಡು ಬಂದು. ನಂತರ ಈಕೆಯು ಒಂದು ಮಗುವಿಗೆ ಜನ್ಮವೆತ್ತಂದಿನಿಂದ ರಾಮುನನ್ನು ವಿಧಿಮಾಯಿಯಾಗಿ ಕಾಡಲು ಪ್ರಾರಂಭಿಸುತ್ತಾಳೆ. ಮುಂದೆ ಕೆಲವು ದಿನಗಳ ನಂತರ ಮಲತಾಯಿ ಶಾಂತವ್ವನಿಗೆ ಕ್ಷಯ ರೋಗ ಬಂದಾಗ ಸ್ವಂತ ಮಗ ತಿರುಗಿ ನೋಡದ ಸಂದರ್ಭದಲ್ಲಿ ಮಲಮಗನಾದರೂ ರಾಮು ತಾಯಿಯ ಆರೈಕೆ ಮಾಡಿ ಗುಣವಾಗಲು ಹೆಣಗಾಡುತ್ತಾನೆ.

ರಾಮುನಂತಹ ಮಹಾನ್ ವ್ಯಕ್ತಿಗಳು ಇನ್ನು ಸಮಾಜದಲ್ಲಿ ಅಲ್ಲಿ ಇಲ್ಲಿ ಇದ್ದಾರೆ ಎಂದು ಕಥೆಗಾರರು ಮನವರಿಕೆ ಮಾಡಿಸಿದ್ದಾರೆ.

ಅಕ್ಕಣ್ಣನವರ 'ಬಿಸಿಲು ಬೆಳದಿಂಗಳು' ಕಥೆಯಲ್ಲಿ ವಿಷಮ ದಾಂಪತ್ಯದ ದಾರುಣ ಚಿತ್ರಣವಿದೆ. ಹಣದ ಮುಂದೆ ಗಂಡ-ಹೆಂಡತಿಯ ಸಂಬಂಧವು ವ್ಯವಹಾರಿಕವಾಗಿಯೇ ಹಣದ ಆಸೆಯಿಂದ ಗಂಡನನ್ನು ಬಿಟ್ಟು ಬೇರೆ ಕಡೆಗೆ ವಾಸವಾಗಿರುವುದು, ಕೊನೆಗೆ ಒಂದುಗೂಡುವುದೇ ಇಲ್ಲಿಯ ವಸ್ತು. ನಾಗರತ್ನ ರಮೇಶನನ್ನು ಪ್ರೇಮಿಸಿ ಮದುವೆಯಾಗಿರುತ್ತಾಳೆ. ಕೆಲವು ಕಾಲದ ನಂತರ ಈಕೆಯ ಆಸೆಗಳನ್ನು ಹತ್ತಿಕ್ಕಿದಾಗ ಗಂಡನಿಂದ ಬೇರೆಯಾಗಿ ವಾಸವಾಗಿರುತ್ತಾಳೆ. ಆದರೆ ಶೈಲಜಾ ತನ್ನ ತಾಯಿ ತುಳಿದಿರುವ ತಪ್ಪು ದಾರಿಯಿಂದ ನೊಂದುಕೊಂಡು ಬದುಕಿಗೆ ಬೆನ್ನು ಮಾಡುತ್ತಾಳೆ. ತನ್ನ ಭವಿಷ್ಯದ ಬಗ್ಗೆ ಚಿಂತೆ ಮಾಡುತ್ತಾಳೆ. ಕೊನೆಗೆ ನಾಗರತ್ನ ಮಗಳ ಮಾತಿನಿಂದ ಗಂಡನಿಲ್ಲದೆ ತಾನು ಬದುಕುವುದು ಸಾಧ್ಯವಿಲ್ಲವೆಂದು ತಿಳಿದು, ಪಶ್ಚಾತಾಪದಿಂದ ಮರಳಿ ಗಂಡನೊಂದಿಗೆ ಕೂಡಿ ಬಾಳುವೆ ಮಾಡುತ್ತಾಳೆ. ಗಂಡನೊಂದಿಗೆ ಕೂಡಿದ ಮೇಲೆ ನಾಗರತ್ನಳ ಹೃದಯ ಬಿಸಿಲಿನ ಜಳದಿಂದ ಮಾಯವಾಗಿ, ಬೆಳದಿಂಗಳಿನಿಂದ ತಂಪಾಗುತ್ತದೆ.

ಇನ್ನೊಂದು ಕಥೆಯಾದ 'ತಾನೊಂದು ಬಗೆದರೆ' ಇದರಲ್ಲಿ ತಂದೆ-ತಾಯಿಯರ ಅಭಿಪ್ರಾಯದ ವಿರುದ್ಧವಾಗಿ ಮದುವೆಯಾಗುವ ಚಿತ್ರಣವಿದೆ. ಎಲ್ಲ ಸಂಬಂಧಗಳ ಮೂಲ ಆಸ್ತಿಯೇ ಎನ್ನುವಂತೆ ಶ್ರೀಮಂತಿಕೆಯ ಒತ್ತಡಕ್ಕೆ ಮಣಿದು ಶಿವ ಪ್ರಸಾದರ ವಿರುದ್ಧವಾಗಿ ಹಿರಿಯ ಮತ್ತು ಎರಡನೆಯ ಮಗ ಇಬ್ಬರು ಮದುವೆ ಮಾಡಿಕೊಂಡು ಮಾವನ ಮನೆಯಲ್ಲಿಯೇ ಉಳಿದುಕೊಳ್ಳುತ್ತಾರೆ. ಆದರೆ ತಂದೆ-ತಾಯಿಗಳಿಗೆ ಮಗಳ ಮದುವೆ ಮಾಡಿದ ನಂತರ ಕಿರಿಯಮಗನ ಮದುವೆ ಮಾಡಬೇಕೆಂಬ ಇಚ್ಛೆ ಇರುತ್ತದೆ. ಆದರೆ ಇಲ್ಲಿ ಕಿರಿಮಗ ಸಹ ತಂದೆ-ತಾಯಿಗಳ ವಿರುದ್ಧವಾಗಿ ಗಂಗಾಳನ್ನು ಮದುವೆಯಾಗುತ್ತಾನೆ. ಹೀಗೆ ತಂದೆ-ತಾಯಿಗಳು ತಾವೊಂದು ಮಾಡಬೇಕೆಂದರೆ ದೈವೊಂದು ಬಗೆಯುತ್ತದೆ. ಇಲ್ಲಿ ಕಥೆಗಾರರು ತಂದೆ-ತಾಯಿ ಕನಸು ನುಚ್ಚು ನೂರಾಗುವುದನ್ನು ಚಿತ್ರಿಸಿದ್ದಾರೆ. ಇವೆರಡು ಕಥೆಗಳು ಅಷ್ಟೊಂದು ಪರಿಣಾಮಕಾರಿಯಾಗಿ ಮೂಡಿಬಂದಿಲ್ಲ. ಇವುಗಳಲ್ಲಿ ಸತ್ಯವಿದೆ ಆದರೆ ಹೊಸತನವಿಲ್ಲ.

ಇವರ ಮತ್ತೊಂದು ಕಥೆಯಾದ 'ಶೋಧ' ಕಥೆ ಎಲ್ಲ ಕಥೆಗಳಿಗಿಂತಲು ದೀರ್ಘವಾದ ಕಥೆಯಾಗಿದ್ದು. ಸಿನಿಮಾ ಮಾದರಿಯದಾಗಿದೆ. ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ನಡೆಯುವ ಘಟನೆಗಳಲ್ಲಿ ಇದೊಂದು ಉತ್ತಮ ನಿದರ್ಶನವಾಗಿದೆ. ಇಲ್ಲಿ ಕಥಾನಾಯಕಿಯಾದ ನೀಲಾಳ ಜೀವನದ ಸುತ್ತ ಹೆಣೆಯಲಾದ ಕಥೆಯಾಗಿದೆ. ತಂದೆಯಿಲ್ಲದೆ ನೀಲಾ ತಾಯಿಯ ಆಶ್ರಯದಲ್ಲೀಯೆ ಬೆಳೆದು ಪದವಿಧರೆಯಾಗಿದ್ದಳು. ಚಿಕ್ಕವಳಿರುವಾಗಲೇ ಸೋದರ ಮಾವನಾದ ಚೆನ್ನಬಸಪ್ಪನೊಡನೆ ವಿವಾಹವಾಗಿರುತ್ತದೆ. ಆದರೆ ತನ್ನ ಗಂಡ ಹಳ್ಳಿಯ ಮುಗ್ಧನೆಂದು ತಿರಸ್ಕರಿಸಿ ಹತ್ತಿರ ಬರಗೊಡದೇ

ದೂರವಿರುತ್ತಾಳೆ. ಮುಂದೆ ಜಗದೀಶನಲ್ಲಿ ತನ್ನಷ್ಟಕ್ಕೆ ತಾನೇ ಅನುರಕ್ತಗೊಂಡು ತಾಳಿಕಟ್ಟಿದ ಚೆನ್ನಬಸಪ್ಪನನ್ನೇ ಬಿಟ್ಟು ಓಡಿಹೋಗುತ್ತಾಳೆ. ಆದರೆ ಜಗದೀಶ ಮಾತ್ರ ಅಂಥವನಲ್ಲ. ಕೆಲವು ದಿನಗಳ ನಂತರ ಆಕೆಯನ್ನು ಉದ್ಯೋಗದಲ್ಲಿ ಸೇರಿಸಿ ಮರಳಿ ಮನೆಗೆ ಕಳುಹಿಸುವುದರಲ್ಲಿ ಸಫಲನಾಗುತ್ತಾನೆ. ಕೊನೆಯಲ್ಲಿ ನಾಯಕಿ ನೀಲಾ ಚನ್ನಬಸಪ್ಪನೊಂದಿಗೆ ಕೂಡಿಕೊಳ್ಳುವುದೇ 'ಶೋಧ' ಕಥೆಯ ತಿರುಳಾಗಿದೆ.

'ಸಂಬಂಧ' ಈ ಕಥೆ ರಜಾಕಾರರ ಹಾವಳಿಯಲ್ಲಿ ಹಿಂದೂ-ಮುಸ್ಲಿಂರಲ್ಲಿ ಆದ ಹೋರಾಟದ ಸತ್ಯ ಘಟನೆಯ ಮೇಲೆ ರಚಿತಗೊಂಡಿದೆ. ಹೈದರಾಬಾದ್ ಕರ್ನಾಟಕದ ರಜಾಕಾರರ ಹಾವಳಿಯ ಸಮಯದಲ್ಲಿ ಹಿಂದು-ಮುಸ್ಲಿಂರಲ್ಲಿ ಒಬ್ಬರಿಗೊಬ್ಬರು ಹಿಂಸಿಸುವುದು, ಕೊಲೆ ಮಾಡುವ ಪ್ರಸಂಗ ಬರುತ್ತದೆ. ಆಗ ನವಾಬನ ಆದೇಶದ ಮೇರೆಗೆ ಮೊದಲು ಮುಸ್ಲಿಂರು ಹಿಂದೂ ಜನರನ್ನು ಹಿಂಸಿಸುವ ಆಜ್ಞೆಯಾಗುತ್ತದೆ. ಇಂತಹ ಸಮಯದಲ್ಲಿ ಮುಸ್ಲಿಂನಾದ ಮಹ್ಮದಸಾಬ, ಆತ್ಮೀಯನಾದ ಶಂಕ್ರಪ್ಪ ಮಾಸ್ತರನನ್ನು ಹಾಗೂ ಅವರ ಕುಟುಂಬವನ್ನು ಮುಚ್ಚಿಟ್ಟು ಉಳಿಸಿಕೊಳ್ಳುತ್ತಾನೆ. ಮುಂದೆ ಕೆಲವು ದಿನಗಳ ನಂತರ ದೆಹಲಿ ಸರ್ಕಾರದ ಆದೇಶದ ಮೇರೆಗೆ ಹಿಂದೂ ಜನರು ಮುಸ್ಲಿಂರನ್ನು ಹಿಂಸಿಸಬೇಕೆಂಬ ಆಜ್ಞೆಯಾಗುತ್ತದೆ. ಆಗ ಶಂಕ್ರಪ್ಪ ಮಾಸ್ತರನು ತನ್ನನ್ನು ಉಳಿಸಿದ ಮಹ್ಮದಸಾಬನನ್ನು ಅವನ ಹೆಂಡತಿ ಮಕ್ಕಳನ್ನು ತಂದು ನೆಲಮಾಳಿಗೆಯಲ್ಲಿ ಬಚ್ಚಿಡುತ್ತಾನೆ. ಕೊನೆಗೂ ಇವೆರಡು ಸಂಬಂಧಗಳು ಜಾತೀಯತೆ ಮರೆತು ತಮ್ಮ ಮಕ್ಕಳ ಮದುವೆ ಮಾಡಿ, "ರಕ್ತ ಸಂಬಂಧ" ಬೆಳೆಸಿಕೊಳ್ಳುವುದರಲ್ಲಿ ಮುಂದುವರೆಯುತ್ತವೆ. ಇಲ್ಲಿ ಇವರು ಜಾತಿ ಧರ್ಮ ಮರೆತು 'ಮಾನವ ಧರ್ಮ' ಒಂದೇ ಎಂಬ ತತ್ವದಿಂದ ಮರೆಯುತ್ತಾರೆ. ಈ ಕಥೆಯನ್ನು ಶ್ರೀಕಾಂತ ಪಾಟೀಲರು ವಿಶಿಷ್ಟ ರೀತಿಯಲ್ಲಿ ಚಿತ್ರಿಸಿದ್ದಾರೆ

ಶಿವಕುಮಾರ ನಾಗವಾರರ 'ಏಳೂರು ಸರಪಂಚ' ಕಥೆ ಕರ್ನಾಟಕದಲ್ಲಿ ೧೯೮೭ ರ ಸುಮಾರಿಗೆ ಜನತಾ ಸರ್ಕಾರವು ಗ್ರಾಮ ಮಟ್ಟದಲ್ಲಿ ಪಕ್ಷ. ರಾಜಕೀಯದ ಮುಖಾಂತರ ಅಧಿಕಾರ ವಿಕೇಂದ್ರೀಕರಣ ಮಾಡಿದ ಹಿನ್ನಲೆಯಾಗಿದೆ. ಕಥೆಗಾರರು ತಮ್ಮೂರಿನ ಮಂಡಲ ಪಂಚಾಯಿತಿಯ ವಾಸ್ತವತೆಯನ್ನು ಕೇಂದ್ರ ಬಿಂದುವಾಗಿಟ್ಟುಕೊಂಡು ಈ ಕಥೆಯನ್ನು ಹೆಣೆದಿದ್ದಾರೆ. ರಾಜಕೀಯ ಎಂಬುದು ವಿವಿಧ ಕುಟುಂಬಗಳಲ್ಲಿನ, ವಿವಿಧ ಜನಾಂಗಗಳಲ್ಲಿನ ಸಂಘರ್ಷಗಳನ್ನು ಅಧಿಕಾರ ಪ್ರವೃತ್ತಿಯ ಸರಪಣಿಯನ್ನು,ಅಧಿಕಾರ ಸ್ಥಾಪಿಸುವಾಗ ತಮ್ಮ ಹಕ್ಕನ್ನು ಯಾವ ರೀತಿಯಾಗಿ ಬೇರೆ ಜಾತಿಯವರ ಮೇಲೆ ಚಲಾಯಿಸಬೇಕೆಂಬುದೇ ಇಲ್ಲಿಯ ವಸ್ತುವಾಗಿದೆ. ಹಳ್ಳಿಯ ಮಂಡಲ ಪಂಚಾಯಿತಿ ಪ್ರಧಾನನ ಹುದ್ದೆಗೆ ಊರಿನ ಎಲ್ಲಾ ಪ್ರಮುಖರು ಬಡಿದಾಡಿದರೂ ಸಹ ಆ ಸ್ಥಾನ ದೊರಕಿದ್ದು, ಕೊನೆಗೆ ಅನ್ಯಾಯದ ವಿರುದ್ಧ, ಅಸಹ್ಯ ವರ್ತನೆಗಳ ವಿರುದ್ಧ ಧ್ವನಿ ಎತ್ತುತ್ತಿದ್ದ ಶಫಿಗೆ ತನ್ನ ಪ್ರತಿಜ್ಞೆಯಂತೆ ಕೊನೆಗೂ 'ಶಫಿ' ಏಳೂರು ಸರಪಂಚನಾಗಿ ಮೆರೆದಿರುವುದು ಇಲ್ಲಿಯ ವಸ್ತು.

ಇವರ ಇನ್ನೊಂದು ಕಥೆಯಾದ 'ಟುಮ್ಯಾ' ಈ ಕತೆಯ ವಿಶಿಷ್ಟತೆಯೆಂದರೆ ನಿರೂಪಕರೇ ಇಲ್ಲಿ ಚಿಕ್ಕಪ್ಪನ ಪಾತ್ರದ ರೂಪದಲ್ಲಿ ಕಾಣಿಸಿಕೊಂಡಿದ್ದಾರೆ. ತಮ್ಮ ಸಹೋದರ ಮಗನನ್ನೇ ಆಧಾರವಾಗಿಟ್ಟುಕೊಂಡು ಸ್ವಲ್ಪ ಭಾವುಕತೆಯಿಂದ ವಸ್ತುವನ್ನು ವಿಶ್ಲೇಷಿಸಿದ್ದಾರೆ. ಟುಮ್ಯಾ ತಂದೆ-ತಾಯಿಯ ಪ್ರೀತಿ ಅರಿಯದೆ ಅವರ ಆಶ್ರಯದಲ್ಲಿ ಬೆಳೆಯದೆ, ತನ್ನ ಚಿಕ್ಕಪ್ಪನ ಪ್ರೀತಿ-ವಾತ್ಸಲ್ಯವನ್ನುಂಡು ಬೆಳೆಯುತ್ತಾನೆ. ಚಿಕ್ಕಪ್ಪನು ಸಹ ಟುಮ್ಯಾನನ್ನು ತನ್ನ ಮಕ್ಕಳಿಗಿಂತ ಅತಿಯಾಗಿ ಪ್ರೀತಿಸುತ್ತಿದ್ದನು. ಆದರೂ ಸುರೇಶ ತನ್ನ ತಂದೆ-ತಾಯಿಯರ ಜೊತೆಗೆ ಕೂತೇ ಮಾಡುತ್ತಿದ್ದ ಊಟ, ಒಂದೇ ಹಾಸಿಗೆಯ ಮೇಲೆ ಮಲಗುವುದನ್ನು ನೋಡಿ, ಟುಮ್ಯಾ ಆ ಭಾಗ್ಯತನಗಿಲ್ಲವಲ್ಲ ಎಂಬ ಕೊರತೆಯಿಂದ ಚಡಪಡಿಸುತ್ತಿದ್ದ. ತಂದೆ-ತಾಯಿ ಮಾಡಿದ ಪ್ರೀತಿಯೇ ಬೇರೆ ಆ ಸ್ಥಾನವನ್ನು ಬೇರೆಯವರು ಭರಿಸಲು ಎಂದಿಗೂ ಅಸಾಧ್ಯ ಎಂಬ ಅಂಶವನ್ನು ಕಥೆಗಾರರು ಓದುಗರಿಗೆ ತಿಳಿಸುವ ಯತ್ನಮಾಡಿದ್ದಾರೆ.

'ಅಂತರಂಗ' ಕಥೆಯಲ್ಲಿ ಮನುಷ್ಯನ ಜೀವನದಲ್ಲಿ ನೋವು ನಿರಾಶೆಗಳು ಬಂದಾಗ, ಕಷ್ಟ ಪರಂಪರೆಗಳು ಬಂದಾಗ, ಬೇರೆಯವರೊಡನೆ ಬಾಳಿನ ಬೇರು ಸೇರಿದಾಗ, ಮನಕ್ಷೋಭೆಗೊಂಡು ಯೋಚನಾ ಲಹರಿಯಲ್ಲಿ ಮುಳುಗುವುದೇ ಇಲ್ಲಿಯ ವಸ್ತು, ರಜನೀಶ ರಾಜಕೀಯ ಕ್ಷೇತ್ರದ ಪ್ರಮುಖ ವ್ಯಕ್ತಿ. ಇವರಿಗೆ ಕಲಾ ಎನ್ನುವ ಸುಂದರ ಪತ್ನಿ, ಶಾಂತರಾಮ ಮತ್ತು ರಂಜನಾ ಎಂಬಿಬ್ಬರು ಮಕ್ಕಳಿಂದ ಕೂಡಿದ ಸುಖಿ ಕುಟುಂಬವಾಗಿತ್ತು. ಆದರೆ ಮುಂದೆ ರಜನೀಶ ಚುನಾವಣೆಯಲ್ಲಿ ಸೋತು ರಾಜಕೀಯ ರಂಗದಿಂದ ದೂರವಾಗುತ್ತಾನೆ. ಇದೇ ಕಾರಣಕ್ಕಾಗಿ ತಂದೆಯಿಂದ ಮಗನು ಬೇರೆಯಾಗುತ್ತಾನಲ್ಲದೆ, ಹೆಂಡತಿ ಬೇರೆಯವನೊಡನೆ ಚೆಲ್ಲಾಟವಾಡುತ್ತಿರುವುದನ್ನು ನೋಡಿ ಮನ ಕರಗಿ ಜೀವನವೇ ಇಷ್ಟೇ ಎಲ್ಲವೂ ಶೂನ್ಯ ತನ್ನ ಪ್ರೀತಿಯ ವಸ್ತುಗಳೆಲ್ಲ ತನ್ನ ಕೈಬಿಟ್ಟವೆಂದು ದಿಗಂಬರನಾಗಿ ಮನೆ ಬಿಟ್ಟು ತೆರಳುತ್ತಾನೆ. ಆರಂಭದಲ್ಲಿ ಯೋಚನಾ ಲಹರಿಯಲ್ಲಿ ತೊಡಗಿದ ವ್ಯಕ್ತಿಯೇ ಈ ರಾಜಕೀಯ ಪುಡಾರಿ ರಜನೀಶ. ದೇಶಪಾಂಡೆಯವರು ಈ ಕಥೆಯ ಮೂಲಕ ದುಡ್ಡಿನಿಂದಲೇ ಎಲ್ಲಾ/ದುಡ್ಡೇ ದೊಡ್ಡಪ್ಪ ಎಂಬ ಸಂದೇಶವನ್ನು ಸಾರಿದ್ದಾರೆ.

ಚಂದ್ರಕಾಂತ ಪಾಟೀಲರು 'ಆತ್ಮಹತ್ಯೆ' ಕಥೆಯಲ್ಲಿ ಇಂದಿನ ಸಮಾಜದ ಜ್ವಲಂತ ಸಮಸ್ಯೆಯಾದ ನಿರುದ್ಯೋಗದ ಹೆಸರಿನಲ್ಲಿ ಎಷ್ಟು ಮುಗ್ಧ ಜೀವಿಗಳು ಬಲಿಯಾಗುತ್ತಿವೆ ಎಂಬ ನೋವಿನ ದುರಂತದ ಗಂಭೀರವಾದ ವಸ್ತುವನ್ನೊಳಗೊಂಡ ಕಥೆಯಾಗಿದೆ. ರಾಮು ವಿದ್ಯಾವಂತ ಯುವಕ, ಪದವಿ ಮುಗಿಸಿದ ನಂತರ ಉದ್ಯೋಗ ಹುಡುಕುವುದಕ್ಕೆ ಅಲೆದಾಡುತ್ತಾನೆ. ತನ್ನ ಭವಿಷ್ಯದ ಬಗ್ಗೆ ತಂದೆ-ತಾಯಿಗಳ ದುಃಖವನ್ನು ದೂರ ಮಾಡುವುದಕ್ಕಾಗಿ ಬಹುಬೇಗನೆ ಉದ್ಯೋಗ ಹಿಡಿದು ಹಣ ಸಂಪಾದಿಸಿ ಅವರನ್ನು ಸುಖದಿಂದ ಇಡಬೇಕೆನ್ನುವುದು ಅವನ ವಿಚಾರವಾಗಿರುತ್ತದೆ. ಇಂದಿನ

ಭ್ರಷ್ಟಾಚಾರದ ಸಮಾಜದಲ್ಲಿ ಹಣ ಕೊಟ್ಟವರಿಗೆ ಉದ್ಯೋಗ ದೊರೆಯುತ್ತಲಿದೆ. ಆದರೆ ರಾಮು ಒಬ್ಬ ಬಡವ, ಹಣದ ಸಲುವಾಗಿ ಶ್ರೀಮಂತರ ಹತ್ತಿರ ಹೋಗಿ ಅವರ ಅಟ್ಟಹಾಸಕ್ಕೆ ಬಲಿಯಾಗುತ್ತಾನೆ. ಆದರೂ ಪ್ರಯೋಜನವಾಗಲಿಲ್ಲ. ಅದರಿಂದ ಬದುಕಿನಲ್ಲಿ ನಿರಾಶೆಹೊಂದಿ ಆತ್ಮಹತ್ಯೆ ಮಾಡಿಕೊಳ್ಳುವುದು ಇಲ್ಲಿಯ ವಸ್ತುವಾಗಿದೆ.

'ಕತ್ತಲು ಕೋಣೆ' ಕಥೆಯ ಸಿನಿಮಾ ಮಾದರಿಯ ಕಥೆಯಾಗಿದೆ. ವಿವಿಧ ಪಾತ್ರಗಳ ಮೂಲಕ ಚಿತ್ರಿಸುತ್ತಾ ನೈನಾ ಕಿರಿಯ ವಯಸ್ಸಿನಲ್ಲಿ ವಿಧವೆಯಾಗಿ ಎಂಥೆಂಥ ಕಷ್ಟಗಳನ್ನು ಎದುರಿಸುತ್ತಾಳೆ, ಇಂದಿನ ಸಮಾಜದಲ್ಲಿ ಒಬ್ಬಂಟಿಯಾದ ಹೆಣ್ಣನ್ನು ಅದರಲ್ಲೂ ವಿಧವೆಯಾದ ಹದಿಹರೆಯದ ಹೆಣ್ಣನ್ನು ಯಾವ ರೀತಿ ನೋಡುತ್ತಾರೆ ಎಂಬುದನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಅಲ್ಲದೆ ನೈನಾ ವಿಧವೆಯಾದರೂ ಒಳಮನಸ್ಸಿನ ಕಾಮದ ಬಯಕೆಯನ್ನು ಈಡೇರಿಸಿಕೊಳ್ಳಲು ಹದಿನೈದು ವರ್ಷದ ಕಿಶೋರನಾದ ರಾಜೇಶನೊಡನೆ ಕಾಮದ ಚೆಲ್ಲಾಟ ಆಡುತ್ತಾಳೆ. ಕಾರಣ ನೈನಾ ಇನ್ನು ತಂಬು ಯೌವ್ವನೆ, ಅಲ್ಲದೆ ಬದುಕಿನ ಸುಖಗಳನ್ನು ಉಣ್ಣಲು ಹಲವಾರು ಕನಸುಗಳನ್ನು ಇಟ್ಟುಕೊಂಡಿದ್ದವಳಾಗಿದ್ದಳು, ಆದರೆ ರಾಜೇಶ ಇನ್ನು ಕಿಶೋರ. ಅವನಲ್ಲಿ ಲೈಂಗಿಕ ಸುಖದ ಕಲ್ಪನೆಗಳೇ ಇರುವುದಿಲ್ಲ, ಆದರೂ ರಾಜೇಶನಲ್ಲಿ ಲೈಂಗಿಕ ತೃಷೆಯನ್ನು ಹೆಚ್ಚಿಸಿ, ಕೊನೆಗೆ ಇಬ್ಬರು ಒಂದಾಗಿ ಬದುಕು ಸಾಗಿಸುವುದು ಇಲ್ಲಿಯ ವಸ್ತುವಾಗಿದೆ.

ಕಥೆಗಾರರು ಇಲ್ಲಿ ಎರಡು ಘಟನೆಗಳ ಚಿತ್ರಣ ನೀಡಿದ್ದಾರೆ, ನೀಚ ಸಮಾಜವು ವಿಧವೆಯಾದ ನೈನಾಳನ್ನು ನೋಡುವ ದೃಷ್ಟಿ ಒಂದು ಘಟನೆಯಾದರೆ, ಮತ್ತೊಂದು ಘಟನೆ ನೈನಾಳ ಒಳಮನಸ್ಸಿನಲ್ಲಿಯ ಕಾಮದ ಪಿಪಾಸೆ ಎಂತಹದ್ದು ಎಂಬುದನ್ನು ನಿರೂಪಿಸುತ್ತಾರೆ.

ಭಾಲಚಂದ್ರ ಜಯಶೆಟ್ಟಿಯವರ 'ಹೊಸ ಹೆಡ್ಮಾಸ್ತರ' ಕಥೆಯಲ್ಲಿ ರಾಸೂರಿನ ರಾಜಕೀಯ ಹಾಗೂ ಅಲ್ಲಿನ ಭ್ರಷ್ಟಗೊಂಡ ಶಿಕ್ಷಣ ವ್ಯವಸ್ಥೆಯನ್ನು ಕುರಿತು ಹೇಳಿದ್ದಾರೆ. ಹೊಸ ಹೆಡ್ಮಾಸ್ತರ ರಾಸೂರಿಗೆ ಬರುವುದಕ್ಕಿಂತ ಮುಂಚೆ ಅಲ್ಲಿನ ಹೆಡ್ಮಾಸ್ತರನು ಭ್ರಷ್ಟಾಚಾರಗಳಲ್ಲಿ ತೊಡಗಿರುತ್ತಾನೆ. ಆದಕಾರಣ ಊರಿನ ಮುಖ್ಯಸ್ಥ ಹಾಗೂ ರಾಜಕಾರಣಿಯಾದ ಕಾಶೀರಾಯರು ಹೊಸ ಹೆಡ್ಮಾಸ್ತರನನ್ನು ಕರಿಸುತ್ತಾರೆ. ಈ ಹೆಡ್ಮಾಸ್ತರ ತುಂಬಾ ಪ್ರಾಮಾಣಿಕ. ತಪ್ಪಿದ್ದನೆಲ್ಲಾ ಸರಿಪಡಿಸುತ್ತೇನೆ ಎಂಬ ಹುಚ್ಚಿನಲ್ಲಿ ಹೊಸ ಹೆಡ್ಮಾಸ್ತರ ಅಲ್ಲಿನ ಜನರನ್ನು ಕಾಳಜಿ ಮಾಡದೇ ಶಾಲೆಯಲ್ಲಿ ಬಿಗಿ ಶಿಸ್ತನ್ನು ಅಳವಡಿಸಿದಾಗ ಏನು ಪ್ರಯೋಜವಾಗದೆ ಕೊನೆಗೆ ತಾನೇ ಮುಂದೆ ಸೇವೆಯಿಂದ ಅಮಾನತ್ತಾಗಿ ಬಹುದೊಡ್ಡ ತೊಂದರೆಗೆ ಸಿಲುಕಿಕೊಳ್ಳವುದೇ ಇಲ್ಲಿಯ ವಸ್ತುವಾಗಿದೆ. ಇಲ್ಲಿ ಪ್ರಾಮಾಣಿಕ ಸರಕಾರಿ ನೌಕರನ ಪರಿಸ್ಥಿತಿಯನ್ನು ಹಾಗೂ ಆತನನ್ನು ಅಲ್ಲಿಯ ಜನರು, ರಾಜಕಾರಣಿಗಳು ಕಾಣುವ ಬಗೆಯನ್ನು ಚಾಚು ತಪ್ಪದೇ ಹೇಳಿದ್ದಾರೆ.

'ಉಪಚಾರ' ಕಥೆಯು ಪ್ರಚಲಿತ ಜಗತ್ತಿನಲ್ಲಿಯೂ, ವ್ಯಕ್ತಿ ಸಂಬಂಧಗಳಲ್ಲಿಯೂ ವ್ಯಾಪಾರಿಕ ಮನೋಭಾವ ಬೆಳೆದಿದೆ. ಲಾಭವಿಲ್ಲದೆ ವ್ಯಕ್ತಿಗಳು ಉಸಿರಾಡುವುದೂ ಇಲ್ಲ ಎಂಬ ಹಂತಕ್ಕೆ ಬಂದು ನಿಂತಿರುವುದನ್ನು ಈ ಕಥೆಯಲ್ಲಿ ಲಲಿತನಾಯಕರು ಗುರುತಿಸಿದ್ದಾರೆ, ಸಾಯುವ ವ್ಯಕ್ತಿಯಲ್ಲೂ ಲಾಭದ ಸಾಧ್ಯತೆ ಕಂಡುಕೊಂಡು ವ್ಯವಹರಿಸುವ ಸ್ವಾರ್ಥ ಮನೋಭಾವದ ಚಿತ್ರಣ ಇಲ್ಲಿದೆ. ಎರಡು ಮೂರು ವರ್ಷಗಳಿಂದ ಕಂಡ ವರ್ತನೆಗೂ ಈಗಿನ ವರ್ತನೆಗೂ ಆದಂತಹ ಬದಲಾವಣೆಗಳನ್ನು ನೆನೆದು ಇದೇನು ಪವಾಡವೋ? ಏನೋ? ಎಂದುಕೊಂಡು ಮಕ್ಕಳು ಮಾಡುವ ಆರೈಕೆಯನ್ನು ಅನುಭವಿಸುತ್ತಾಳೆ ಮುದುಕಿ. ಅದುವರೆಗೂ ತಂಗೂಳೋ, ಆರಿದ ಹಿಟ್ಟಿನ ಮುದ್ದೆಯನ್ನೋ ಮನೆ ಮಂದಿ ಊಟವಾದ ಮೇಲೆ ತಿನ್ನಲು ಇಡುತ್ತಿದ್ದರು. ಈಗ ಮೊದಲು ಊಟ ಬಡಿಸುವುದು, ಮಜ್ಜಿಗೆ ನೀಡುವುದು, ಮೊಮ್ಮಕ್ಕಳು "ಅಜ್ಜಣ್ಣಿ" ಎಂದು ಹತ್ತಿರ ಬರುವುದು ತನ್ನ ಸ್ನಾನ, ಊಟದ ಬಗ್ಗೆ ಹೆಚ್ಚು ಕಾಳಜಿ ವಹಿಸಿರುವುದನ್ನು ಕಂಡು ಉಬ್ಬಿಹೋಗುತ್ತಾಳೆ. ಸ್ವಾರ್ಥದ ಹಿನ್ನಲೆಯನ್ನು ಅರಿಯದೆ, "ಮೊನ್ನೆ ದಿವಸ್ವೇ ಬಂದವ್ನೇ ಅಜ್ಜಿ ಅಕ್ಕಸಾಲ್ಗ ರಾಮೋಜಪ್ಪ ನಮ್ಮೂಮ್ಮರಿಗೆ ನಿನ್ ಕಡಗದಾಗೆ ಕಾಲಂಧ್ಗೆ ಮಾಡ್ಕೊಡ್ತಾನಂತೆ"[೨೦] ಎಂದ ಮೊಮ್ಮಗಳ ಮಾತಿನಲ್ಲಿ ಮುದುಕಿಗೆ ರಾಜೋಪಚಾರದ ಸತ್ಯ ದರ್ಶನವಾಗುತ್ತದೆ. ಸಂಕುಚಿತ ಮನಸ್ಸುಗಳ ಕಂಡ ಮುದಿ ಮನಸ್ಸು ಘಾಸಿಗೊಳ್ಳುತ್ತದೆ.

ಕೌಟುಂಬಿಕ ಚೌಕಟ್ಟಿನಲ್ಲಿಯ ವ್ಯಕ್ತಿಗಳ ಸ್ವಾರ್ಥ ಸಂಕುಚಿತ ಮನಸ್ಸುಗಳ ಚಿತ್ರಣ ನೀಡುವ ಈ ಕಥೆ, ವ್ಯಕ್ತಿ ವೈಯಕ್ತಿಕವಾಗಿ ಗಳಿಸಿದ ಸಂಪತ್ತುಗಳ ಮೇಲೆ ಸಂಬಂಧಗಳು ಏರ್ಪಡುತ್ತವೆ. ಇಲ್ಲವಾದಲ್ಲಿ 'ಹಣವಿಲ್ಲದವನು ಹೆಣಕ್ಕಿಂತ ಕಡೆ' ಎಂಬ ಗಾದೆಯ ಕಟು ವಾಸ್ತವವನ್ನು ಪ್ರತಿನಿಧಿಸುತ್ತದೆ.

'ತಾಯಿ ಸಾಕೀಬಾಯಿ' ಕಥೆಯಲ್ಲಿ ಲೇಖಕಿ ಆಯ್ದುಕೊಂಡ ವಸ್ತು ಗಂಭೀರವಾದದ್ದು ಸಾಕೀಬಾಯಿ ಯೌವ್ವನದಲ್ಲೇ ವಿಧವೆಯಾದವಳು. ಸಹಜವಾಗಿ ಮುನಿಯನಲ್ಲಿ ತನ್ನ ಕಷ್ಟ ಸುಖಗಳನ್ನು ಹಂಚಿಕೊಳ್ಳುತ್ತಿದ್ದಳು. ಇದು ಸಂಪ್ರದಾಯ ನಿಷ್ಠ ಲಂಬಾಣಿಗಳಿಗೆ ಸರಿಬಾರದು, ಅಲ್ಲದೆ ಸಾಕೀಬಾಯಿಯ ಸವತಿಯ ಮಗನಾದ ಶಂಕರನಿಗೂ ಇವರ ಸಂಬಂಧ ಸರಿಬಾರದೆ ತಾಯಿಯ ಪ್ರೀತಿ, ಮಮತೆ ನೀಡಿದವಳನ್ನೇ ದ್ವೇಷಿಸುತ್ತಾನೆ. ಸೋಜಿಗದ ಸಂಗತಿ ಎಂದರೆ ಅವನು ಸ್ವಯಂ ಅಂತರ್ಜಾತಿ ವಿವಾಹಿತ, ವಿದ್ಯಾವಂತ ಯುವಕ ಕೂಡ. ಅವಳ ಸ್ವಂತ ಮಗನಾದ ದೇವಲ್ಯಾನನ್ನು ಸಹ ತಾಯಿಯ ವಿರುದ್ಧವಾಗಿ ಎತ್ತಿ ಕಟ್ಟಿ, ಹಿಂಸೆ ಕೊಡುವಲ್ಲಿ ಸಂಕುಚಿತ ಮನಸ್ಸುಗಳು ತಾಯಿಯನ್ನೇ ಗೋಳುಹೊಯ್ದುಕೊಳ್ಳುವ ಕರುಣಾಜನಕ ಸಂದರ್ಭವನ್ನು ಕಾಣಬಹುದು.

ಇಲ್ಲಿ ಶಂಕರನ ಹೆಂಡತಿ ಸೀತಾ ಮೇಲ್ವರ್ಗದಿಂದ ಬಂದ ಸುಶಿಕ್ಷಿತೆ, ತನ್ನತ್ತೆ ಸಾಕೀಬಾಯಿ ಮತ್ತು ಮುನಿಯರಿಗೆ ದೂರಹೋಗಿ ಬದುಕಲು ಹೇಳುತ್ತಾಳೆ. ಆದರೆ ಸಾಕೀಬಾಯಿ ಮುನಿಯನ

ಹೆಂಡಿರು ಮಕ್ಕಳನ್ನು ತನ್ನ ಸುಖಕ್ಕಾಗಿ ಬೀದಿಪಾಲು ಮಾಡಲಾಗದ ತ್ಯಾಗದ ಗುಣದವಳಾಗಿ ಮೂಡಿ ಬಂದಿದ್ದಾಳೆ. ಆದರೂ ಸೀತಾಳ ಮಾತಿನಂತೆ ಇಬ್ಬರೂ ಊರುಬಿಟ್ಟು ಹೊರಡುತ್ತಾರೆ. ಈ ವಿಷಯ ತಿಳಿದ ಶಂಕರ್ಯಾ ದೇವಲ್ಯಾ ಇಬ್ಬರೂ ಸಂಚುಮಾಡಿ ಅವರನ್ನು ಕೊಂದು ಮರಕ್ಕೆ ನೇತುಹಾಕಿ ಆತ್ಮಹತ್ಯೆ ಎಂದು ಸಾಧಿಸುತ್ತಾರೆ. ಊರವರ ಬಾಯಿಂದ ತನ್ನ ಗಂಡನ ಕುಕೃತ್ಯ ಕೇಳಿದ ಸೀತಾ ಅಸಹಾಯಕಳಾಗಿ ನಿಲ್ಲುವುದರೊಂದಿಗೆ ಕಥೆ ಮುಗಿಯುತ್ತದೆ. ಮಕ್ಕಳ ಕ್ರೌರ್ಯಕ್ಕೆ ಬಲಿಯಾಗುವ ಸಾಕೀಬಾಯಿ ಕಥೆ, ಇಂದು ಶಿಕ್ಷಣವು ರಕ್ತ ಸಂಬಂಧದಲ್ಲಿ ಶಿಥಿಲತೆಯನ್ನು ತರುತ್ತಿರುವ ವಾಸ್ತವದತ್ತ ಬೆರಳು ಮಾಡುತ್ತಿದೆ.

'ಮಾನ' ಕಥೆಯಲ್ಲಿಯ ವಸ್ತು, ತನ್ನ ಮಾನ ಮುಚ್ಚಿಕೊಳ್ಳಲು ತುಂಡು ಬಟ್ಟೆಯಿಂದಾಗಿ ಗೋಳಿನ ಅಂತ್ಯ ಕಂಡ ಮುದುಕ 'ರುಕ್ಮಜ್ಜ'ನ ಕಥೆಯಾಗಿದೆ. ಸರಕಾರದವರು ರೂಪಿಸಿದ ಯೋಜನೆಗಳು ಗ್ರಾಮೀಣ ಮಟ್ಟಕ್ಕೆ ಮತ್ತು ಗುಡ್ಡಗಾಡು ಜನಾಂಗಕ್ಕೆ ತಲುಪುತ್ತಿಲ್ಲ, ತಲುಪಿದರೂ ಫಲಾನುಭವಿಗಳಿಗೆ ಸಲ್ಲುತ್ತಿಲ್ಲ/ ಉಪಯೋಗವಾಗುತ್ತಿಲ್ಲ. ಪ್ರಸ್ತುತ ಕಥೆಯಲ್ಲಿ ವೃದ್ಧಾಪ್ಯ ವೇತನವೇನೋ ದೊರಕುತ್ತಿದೆ ಆದರೆ ಅದನ್ನು ಸ್ವತಃ ಖರ್ಚು ಮಾಡುವ ಹಕ್ಕಿಲ್ಲದ ರುಕ್ಮಜ್ಜ, ಅದು ಬಾರದೆ ಇದ್ದರೆ ಸುಖವಿತ್ತು ಎಂದು ಹಲಬುವುದು ಈ ಮಾತಿಗೆ ಪುಷ್ಟಿಕೊಡುತ್ತದೆ. ವೃದ್ಧಾಪ್ಯ ವೇತನದಿಂದಾಗಿಯೇ ಅಜ್ಜನ ಆರೈಕೆ ಮಾಡುತ್ತಿದ್ದ ರಾಮ್ಯಾ. ಈ ಸಲ ಬಂದ ದುಡ್ಡನ್ನು ತನಗೆ ತಿಳಿಸದೆ ಖರ್ಚುಮಾಡಿದ ನೆಪವೊಡ್ಡಿ ಮುದುಕನನ್ನು ನಿರ್ಲಕ್ಷಿಸಿ ಒಂದು ಮೂಲೆ ಸೇರುವಂತೆ ಮಾಡುತ್ತಾನೆ. ಮನೆ ಮಂದಿಗೆಲ್ಲಾ ಬೇಡವಾಗಿದ್ದ ಮುದುಕ ಅಲಕ್ಷ್ಯದಿಂದಾಗಿ ಅನಾರೋಗ್ಯಕ್ಕೊಳಗಾದರೂ, ತನ್ನನ್ನು ಬಿಟ್ಟು ದೇವಲ್ಯಾನಿಂದ ಮಾನ ಮುಚ್ಚಿಕೊಳ್ಳಲು ಚಡ್ಡಿ ತರಿಸಿದ್ದೇ ದೊಡ್ಡ ಅಪರಾಧವೆಂದೆನಿಸಿ ರಾಮ್ಯಾ ಮತ್ತವನ ಮನೆಯವರು ಕಳ್ಳುಬಳ್ಳಿಯ ಸಂಬಂಧವನ್ನೇ ಕಡೆಗಣಿಸಿದ್ದುದರಿಂದ ರುಕ್ಮಜ್ಜ ಕೂಳು ನೀರಿಲ್ಲದೆ ಗಂಟಲೊಣಗಿ ಸಾಯುವ ದಾರುಣತೆಯ ಚಿತ್ರಣವಿದೆ. "ವೃದ್ಧಾಪ್ಯ ವೇತನ ಯಾಕಾದರೂ ಬಂತೋ, ಇಲ್ಲದಿದ್ದಲ್ಲಿ ಒಂದೆರಡು ವರ್ಷ ಮೊದಲೇ ಸಾಯಬಹುದಿತ್ತು. ಈಗ ನಾನು ಬದುಕಿ ಯಾವ ದೇಶ ಆಳ ಬೇಕಾಗೈತೆ ಯಾಕ ಬದುಕಬೇಕು? ಯಾರಿಗಾಗಿ ಬದುಕಬೇಕು"?[೨೧] ಎಂದು ಹಲಬುತ್ತಾ ಕೊನೆಯ ಉಸಿರೆಳೆಯುವ ರುಕ್ಮಜ್ಜನ ಸ್ವಗತದ ಈ ಸಾಲುಗಳಲ್ಲಿ ವೃದ್ಧಾಪ್ಯದ ಸಾವಿನ ಕಂಪನ ತುಂಬಿಕೊಟ್ಟಿರುವ ಲಲಿತಾನಾಯಕರು ಹಣಕ್ಕಾಗಿ ಮಾನವ ಸಂಬಂಧಗಳು ಕಳಚುತ್ತಿರುವ ವರ್ತಮಾನ ಸಮಾಜದಲ್ಲಿನ ಸತ್ಯವನ್ನು ಈ ಕಥೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

ಜಯಶೆಟ್ಟಿಯವರ "ನಮ್ಮಾಕೆಯ ಸೋಶಿಯಾಲಿಸಂ" ಕಥೆಯು ಹಾಸ್ಯದ ಕಥೆಯಾಗಿ ಮೂಡಿಬಂದಿದೆ. ಇಂದು ನಾವು ಬದುಕನ್ನು ಸಾಗಿಸುವಲ್ಲಿ ಇನ್ನೊಬ್ಬರನ್ನು ಅನುಸರಿಸಿ (ನೋಡಿ) ಬದುಕು ಸಾಗಿಸದೇ, ಸ್ವಂತ ವಿಚಾರಮಾಡಿ ನಿರ್ಣಯ ತೆಗೆದುಕೊಳ್ಳಬೇಕೆಂದು ತಿಳಿಸುತ್ತದೆ.

ಇಂದಿನ ದಿನಗಳಲ್ಲಿ ಮಹಿಳೆಯು ಸಹ ಎಲ್ಲ ಕ್ಷೇತ್ರಗಳಲ್ಲಿ ಭಾಗವಹಿಸುತ್ತಿರುವುದು ಕಂಡು ಬರುತ್ತಿದೆ. ಅನೇಕ ಸಭೆ-ಸಮಾರಂಭಗಳಲ್ಲಿ ಆದರ್ಶ ಗೃಹಿಣಿಯ ಬಗೆಗೆ ಮಾತನಾಡಿ ಆದರೆ ಅದು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ನಡೆಯುವುದು ಬರುತ್ತಿಲ್ಲ. ಇಂಥ ಸಭೆ-ಸಮಾರಂಭಗಳ ಬಗ್ಗೆ ತಲೆಕೆಡಿಸಿಕೊಂಡ ಶಶಿರೇಖಾ ಅಡಿಗೆ ಮನೆಯ ಜವಾಬ್ದಾರಿಯನ್ನು ತನ್ನ ಗಂಡನಿಗೆ ಒಪ್ಪಿಸುತ್ತಾಳೆ. ಪಕ್ಕದಮನೆ ಶೋಭಾ ಪಾಟೀಲಳ ಗಂಡ ಅಡಿಗೆ ಮನೆಯ ಕೆಲಸ ಮಾಡುತ್ತಿದ್ದರೆ, ತನ್ನ ಗಂಡನು ಸಹ ಹಾಗೆ ಮಾಡಬೇಕೆಂದು ಈಕೆಯ ತಿಳುವಳಿಕೆಯಾಗಿದೆ. ಕೆಲವು ಉದ್ಯೋಗಸ್ಥ ಮಹಿಳೆಯರು ಸಮಯದ ಅನುಕೂಲಕ್ಕಾಗಿ ಸಮನಾಗಿ ಹಂಚಿಕೊಂಡು ಕಾರ್ಯನಿರ್ವಹಿಸಿದ್ದನ್ನು ನೋಡಿದ ಅರೆ ತಿಳುವಳಿಕೆಯ ಹೆಂಗಸರಂತೆ, ಅದನ್ನು ಕೇಳಿ ತನ್ನ ಗಂಡನನ್ನು ಇನ್ನೊಬ್ಬರ ಗಂಡನಿಗಿಂತ ಅಡಿಗೆಯ ಕೆಲಸದಲ್ಲಿ ಪ್ರವೀಣನನ್ನಾಗಿ ಮಾಡುವುದಕ್ಕಾಗಿ ಶಶಿರೇಖಾ ಆಸೆ ಪಡುತ್ತಾಳೆ. ಇದು ಇಂದಿನ ಮಹಿಳೆಯರ ಸಮಾಜವಾದಕ್ಕೆ ಪ್ರಸ್ತುತ "ನಮ್ಮಾಕೆಯ ಸೋಶಿಯಾಲಿಸಂ" ಕಥೆಯು ಜೀವಂತ ಸಾಕ್ಷಿ ಯಾಗಿದೆ. ಅಂದರೆ ಇಲ್ಲಿ ತೋರಿಕೆಯ ಬದುಕಿಗಿಂತ ನಿಜ ಬದುಕಿನಲ್ಲಿ ಪರಸ್ಪರ ದಂಪತಿಗಳು ಅರ್ಥೈಸಿಕೊಂಡು ಬಾಳುವ ಬದುಕೇ ಮುಖ್ಯ ಎನ್ನುವುದು ಕಥೆಗಾರರ ದೃಷ್ಟಿಕೋನಕ್ಕೆ ಪೂರಕವಾಗಿದೆ.

ಸಿದ್ಧಯ್ಯ ಪುರಾಣಿಕ ಕಥಾ ಸಂಕಲನಗಳು ಎರಡಿದ್ದರೂ ಸಹ ಒಂದಂತೂ ಅನುವಾದಗೊಂಡದ್ದು, 'ಕಥಾ ಮಂಜರಿ'ಯು ಪ್ರೀತಿ -ಪ್ರಣಯ ವಸ್ತುವನ್ನೊಳಗೊಂಡರೆ ಉಳಿದೆಲ್ಲವು ಸಂಕೀರ್ಣ ವಸ್ತುಗಳನ್ನು ಇಟ್ಟುಕೊಂಡವು. ಇನ್ನು 'ತುಷಾರಹಾರ' ಸಂಕಲನದಲ್ಲಂತೂ ಎಲ್ಲ ಸಂಕೀರ್ಣ ವಸ್ತು ಆಶಯ ಒಳಗೊಂಡ ಕಥಾ ಸಂಕಲನವಾಗಿದೆ. ವಿಶೇಷವಾಗಿ ಕಾಲ್ಪನಿಕತೆಗೆ ಮತ್ತು ಪೌರಾಣಿಕತೆಗೆ ಒತ್ತು ನೀಡಿದ್ದಾರೆ.

ಒಟ್ಟಿನಲ್ಲಿ ಹೇಳುವುದಾದರೆ ಹೈದರಾಬಾದ್ ಕರ್ನಾಟಕದ ಕಥೆಗಾರರೆಲ್ಲರೂ ಹೆಚ್ಚು-ಕಡಿಮೆ ಸಾಮ್ಯವಾದ ರೀತಿಯಲ್ಲಿ ವಸ್ತುಗಳನ್ನಾಯ್ದುಕೊಂಡಿದ್ದಾರೆ. ಆದರೆ ಕಾವ್ಯನಂದರು, ಇವರಿಗೆ ಹೊರತಾಗಿ ವಿಷಯ ವಸ್ತುವನ್ನು ಆಯ್ಕೆ ಮಾಡಿಕೊಂಡಿರುವುದು ವಿಶಿಷ್ಟವೇ ಸರಿ. ನಗರ ಜೀವನದ ಸನ್ನಿವೇಶಗಳ ಚಿತ್ರಣ ಕೊಡುವ ಕಥೆ 'ಮಣಿ ಮಾಲೆ' ನೈಜವಾಗಿ ಮೂಡಿಬಂದಿದೆ. ಕಾರಕೂನನ ಹೆಂಡತಿಯೊಬ್ಬಳ ಮಿತಿಮೀರಿದ ಮನದಾಸೆಯಿಂದಾಗಿ ದುರ್ದೆಸೆ ಗೀಡಾದ ಜೀವನ ಅನೇಕ ಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಅಲಂಕಾರದ ಆಭರಣಗಳಿಗಾಗಿ ಹಾತೊರೆದು ಆಕೆ ತನ್ನ ಶ್ರೀಮಂತ ಗೆಳತಿಯಿಂದ ಕೃತ್ರಿಮ ಆಭರಣ ಪಡೆದು ಧರಿಸಿ ಅದು ಕಳೆಯಲು, ನಿಜವಾದ ಆಭರಣ ಖರೀದಿಸಿಕೊಟ್ಟು ಅದರ ಬೆಲೆ ಮುಟ್ಟುವುದರೊಳಗಾಗಿ ಸೊರಗಿ ತನ್ನ ನೈಜ ಸೌಂದರ್ಯವನ್ನೇ ಕಳೆದುಕೊಂಡವಳು ಆಕೆಯ ಜೀವನ ಚಿತ್ರಣದ ಜೊತೆಗೆ ಬಡವ ಮತ್ತು ಶ್ರೀಮಂತರಲ್ಲಿಯ ಮಾನಸಿಕ ವೈಪರೀತ್ಯಗಳನ್ನು ಕಾಣುತ್ತೇವೆ.

ಭಾರತೀಯ ಸಮಾಜದಲ್ಲಿ ಅನಾದಿಕಾಲದಿಂದಲೂ ತಂದೆ-ತಾಯಿಗೆ ಕೊಟ್ಟ ಸ್ಥಾನ ಅತ್ಯಂತ ಶ್ರೇಷ್ಠವಾದದ್ದು ಅವರನ್ನು ದೇವರಂತೆ ಕಾಣುವ ನಮ್ಮ ದೇಶದಲ್ಲಿ ಅಪಚಾರ ಮಾಡಿದರೆ ಮನ ಒಪ್ಪುವುದಿಲ್ಲ ತಂದೆ-ತಾಯಿ ಕತೆ ಈ ಹಿನ್ನಲೆಯಲ್ಲಿ ರಚಿತವಾದುದಾಗಿದೆ. ತಾನಾಡಿದ ಒಂದೇ ಒಂದು ಸುಳ್ಳಿನಿಂದಾಗಿ ಬಯಸಿದ ಪಂಕಜೆಯನ್ನು ಮದುವೆಯಾಗಲೂ ಆಗದೆ, ಸಾವಿನ ಅಂಚಿನಲ್ಲಿದ್ದ ತಂದೆ-ತಾಯಿ ಅಣ್ಣಂದಿರನ್ನು ಉಳಿಸಿಕೊಳ್ಳಲೂ ಆಗದ 'ಅರ್ಧನಾರಿ' ದ್ವಂದ್ವತೆಯಲ್ಲಿ ಸಿಕ್ಕಿಕೊಂಡವನು. ತಂದೆ-ತಾಯಿ ಹಾಗೂ ಅಣ್ಣನ ಸಾವಿಗೆ ತಾನೇ ಕಾರಣನೆಂಬ ಪಶ್ಚಾತಾಪದಿಂದಾಗಿ ತನ್ನ ನೌಕರಿಗೆ ರಾಜಿನಾಮೆ ಕೊಟ್ಟು, ಹಳ್ಳಿಯ ಗುಡಿಯೊಂದರಲ್ಲಿ ಶಾಲೆಯನ್ನು ನಡೆಸಿ. ಅದೇ ಜೀವನ ಶ್ರೇಷ್ಠವೆಂದು ಆರಿಸಿಕೊಳ್ಳುತ್ತಾನೆ. ಜಾತಿಯತೆಯ ಕೀಳರಿಮೆ ಮಾನಸಿಕ ತೊಳಲಾಟಕ್ಕೆ ಕಾರಣವಾಗಿ ಅವನ ಬದುಕನ್ನೇ ದುರ್ದೆಸೆಗೆ ತರುವ ಸನ್ನಿವೇಶಗಳ ಚಿತ್ರಣ ಈ ಕಥೆಯಲ್ಲಿ ಮೂಡಿಬಂದಿದೆ. ನಗರೀಕರಣದ ಪ್ರಭಾವದಿಂದಾಗಿ ಮಾನವೀಯ ಸಂಬಂಧಗಳು ಕುಸಿಯುತ್ತಿರುವುದನ್ನು ಕಾಣತ್ತೇವೆ.

'ಕೆಸರಿನಲ್ಲಿ ಲಕ್ಷ್ಮೀ' ಕತೆ ಕೆಸರಿನ ಮಹತ್ವವನ್ನು ಎತ್ತಿ ಹೇಳುತ್ತದೆ. ನೋಡುವವರ ಮನ ತಣಿಸುವ ಗುಲಾಬಿ, ಕೇದಿಗೆ ಹೂಗಳು ತಮ್ಮ ಸೌಂದರ್ಯ ಸುಗಂಧಗಳಿಗೂ ಆಕರ್ಷಿತಳಾಗದ ಲಕ್ಷ್ಮೀ ಕೆಸರಲ್ಲಿ ಕಮಲಕ್ಕೆ ಮನಸೋತದನ್ನು ಕಂಡು ಅಸೂಯೆಪಟ್ಟು ತಮ್ಮ ಅಳಲನ್ನು ಆಕೆಯಲ್ಲಿ ನಿವೇದಿಸಿಕೊಳ್ಳುತ್ತವೆ. 'ಕೈ ಕೆಸರಾದರೆ ಬಾಯಿ ಮೊಸರು' ಎನ್ನುವಂತೆ ಬಾಳು ಸುಗಂಧವಾಗಬೇಕಾದರೆ ಕೆಸರೇ ಹಸಿರು, ಉಸಿರು ಆಗಿರುವುದರಿಂದ ಕೆಸರಲ್ಲಿ ಹುಟ್ಟಿ ಬೆಳೆದ ಕಮಲವೇ ಶ್ರೇಷ್ಠವೆಂದೂ, ಕೈ ಕೆಸರಾಗಿರುವವರಲ್ಲಿ ತಾನು ವಾಸಿಸುವುದಾಗಿ ಹೇಳುತ್ತಾಳೆ ಲಕ್ಷ್ಮೀ. 'ಗಂಡೆದೆಯ ಉಪ್ಪು-ಹೆಣ್ಣೆದೆಯ ಸಕ್ಕರೆ' ಈ ಕಥೆ ಸಮುದ್ರ ಹಾಗೂ ನದಿಗಳ ನೀರಿಗೆ ಇರುವ ವ್ಯತ್ಯಾಸ, ಅದರದರ ಗುಣ ಸ್ವಭಾವಗಳು ಸಹಜವಾದುದೆಂದು ಹೇಳುತ್ತದೆ. ನದಿಗಳು ಸೊಬಗಿನ ಪ್ರತೀಕವಾದರೆ ಸಮುದ್ರವು ಬೆವರಿನ ಪ್ರತೀಕವಾದುದು, ಜೀವನಕ್ಕೆ ಉಪ್ಪು ಮತ್ತು ಸಕ್ಕರೆಗಳೆರಡೂ ಅವಶ್ಯವಾದವುಗಳೆಂದು ಸಾರುತ್ತದೆ.

ನಿಸರ್ಗದಲ್ಲಿ ನಡೆಯುವ ಅನೇಕ ಘಟನೆಗಳ ಮೂಲಕ ಯಾವುದೇ ವಸ್ತುವನ್ನಾಗಲೀ ತುಚ್ಚೀಕರಿಸಿ ನೋಡಕೂಡದು ಎಂಬ ಅಂಶವನ್ನು ವ್ಯಕ್ತ ಪಡಿಸುತ್ತಾರೆ ಪುರಾಣಿಕರು. 'ಕಿರಿಯರ ಹಿರಿಮೆ', 'ಬೀಗಬೇಡ ಬಾಗಿನಡೆ', 'ಯಾರು ಯಾವಾಗ ಬೇಕಾಗುವರೂ ಯಾರಿಗೆ ಗೊತ್ತು?', 'ಯಾರಲ್ಲಿ ಯಾವ ಯೋಗ್ಯತೆ ಅಡಗಿದೆಯೋ ಯಾರು ಬಲ್ಲರು?', ಮತ್ತು 'ನೆರೆಯನ್ನು ಜರೆಯಬೇಡ" ಈ ಮುತಾಂದ ಕಥೆಗಳು ಇದೇ ಆಶಯವನ್ನು ಪ್ರತಿಬಿಂಬಿಸುತ್ತವೆ.

ವಿಶಾಲವಾಗಿ ಬಾನೆತ್ತರ ಬೆಳೆದ ಮರಗಳಿಂದ ಆವೃತ್ತವಾದ ಗಿರಿರಾಜನಿಗೆ ಹುಲ್ಲಿನ ಬಗ್ಗೆ ತಿರಸ್ಕಾರದ ಭಾವನೆ ಇದೆ. ಮುಂದೆ ಬಿರುಗಾಳಿಗೆ ಬುಡಮೇಲಾಗಿ ಮರಗಳು ಉರುಳಿ ಹುಲ್ಲು ಮಾತ್ರ ಹಾಗೇ ಉಳಿಯುತ್ತದೆ. ಹುಲ್ಲು "ದೀನ ಸ್ವರದಿಂದ ಕೇಳಿತು, ಈಗಲಾದರೂ ನಿನಗೆ

ಹಸುರಂಗಿಯಾಗುವ ಭಾಗ್ಯ ನನ್ನದಾಗುವದೇ ಪರ್ವತರಾಜ"? ಆಗ ಪರ್ವತರಾಜ ನಾಚಿ ನುಡಿದ ಕಿರಿಯರ ಹಿರಿಮೆಯನ್ನರಿತೆ ಹುಲ್ಲೆ! ನೀನು ನನ್ನ ಅಂಗಿ ಮಾತ್ರವಲ್ಲ "ನನ್ನ ರೋಮರಾಜಿ" ಎಂದಿತು. ಹೀಗೆ 'ಕಿರಿಯರ ಹಿರಿಮೆ' ಕಥೆ ಚಿತ್ರಿಸುತ್ತದೆ.

ಒಂದನ್ನೊಂದು ಕೀಳಾಗಿ ಕಾಣುವ ಹಲ್ಲು-ತುಟಿಗಳಿಗೆ ಒಂದನ್ನು ಬಿಟ್ಟು ಇನ್ನೊಂದಕ್ಕೆ ತಮ್ಮ ಯೋಗ್ಯತೆ ಹೆಚ್ಚಿಸಿಕೊಳ್ಳಲುಸಾಧ್ಯವಿಲ್ಲ ಎಂಬುದನ್ನು ಪರಸ್ಪರ ಅರಿತು, ಸ್ನೇಹ ಸಹಕಾರದಿಂದ ಬಾಳಬೇಕೆಂಬ ಸಂದೇಶ 'ನೆರೆಯನ್ನು ಜರೆಯಬೇಡ' ಕಥೆಯಾಗಿದೆ. ತುಟಿಗಳಿಂದ ಹಲ್ಲುಗಳಿಗಾಗುವ ದುರಾವಸ್ಥೆಯನ್ನು ಹಲ್ಲುಗಳು ಉರುಳಿ ತುಟಿಗಳಿಂದ ಮೊದಲಿನ ಮೋಹಕ ಮಂದಹಾಸ ಮಾಯವಾಗುವುದನ್ನು ಈ ಕಥೆಯಲ್ಲಿ ಚಿತ್ರಿಸಿದ್ದಾರೆ,

ಇಂದಿನ ವೈಜ್ಞಾನಿಕ ಯುಗದಲ್ಲಿ ಅಗಾಧವಾದ ಬೆಂಕಿಯನ್ನು ಹೊಂದಿರುವ ಅಣು ಬಾಂಬು ಹಾಗೂ ತನ್ನ ಗರ್ಭದಲ್ಲಿ ಭೂಮಿ ಹುದುಗಿಸಿಕೊಂಡ ಬೆಂಕಿನಿಂದಲೂ ಹೆಚ್ಚಿನ ಬೆಂಕಿ ತನ್ನಲ್ಲಿದೆ ಎನ್ನುತ್ತಾನೆ ಮಾನವ. ಮನುಷ್ಯ ಪ್ರಕೃತಿ(ಭೂಮಿ) ಹಾಗೂ ವಿಜ್ಞಾನಿಗಳ ನಡುವಿನ ಸಂವಾದವನ್ನು "ಬಗೆಯ ಬೆಂಕಿ ಮೊದಲು, ಜಗದ ಬೆಂಕಿ ಆಮೇಲೆ" ಕಥೆಯಲ್ಲಿ ಕಾಣುತ್ತೇವೆ, ಯಾವುದೇ ಬೆಂಕಿ ತನ್ನ ಮನಸ್ಸಿನಲ್ಲಿ ಉರಿದಾಗಲೇ ಹೊರ ಜಗತ್ತಿಗೆ ಕಾಣಿಸುತ್ತದೆ ಎನ್ನುತ್ತಾನೆ ಮಾನವ. ಇವನ ವಾದವನ್ನು ಶಿವನೂ ಸಹ ಒಪ್ಪುವ ಸನ್ನಿವೇಶದ ಚಿತ್ರಣಗಳನ್ನು ನೋಡಬಹುದಾಗಿದೆ.

ಮಾನವ ತಾನು ಕಂಡ ಚೆಲುವಾದ ಯಾವುದೇ ವಸ್ತುವನ್ನು ಪಡೆಯಲು ಏನೆಲ್ಲಾ ಪ್ರಯತ್ನ ಮಾಡುತ್ತಾನೆ. ಕೊನೆಗೆ ಹಿಂಸೆ ಕೊಟ್ಟಾದರೂ ಸರಿ ಅದನ್ನು ಪಡೆಯಬಹುದು. ತನಗೆ ಬೇಕಾದಷ್ಟನ್ನು ಮಾತ್ರ ಪಡೆಯದ ಅವನ ಅತಿಯಾಸೆ ಕೊಲೆ ಹಿಂಸೆಗಳಿಗೆ ಪ್ರಚೋದನೆ ನೀಡುತ್ತದೆ. ಮನುಷ್ಯನ ಈ ಕ್ರೂರ ಸ್ವಭಾವವನ್ನು "ನಿಮ್ಮದೇ ಭಯ ಬಹಳ ನಮಗೆ' ಹಾಗೂ 'ಸಲಿಗೆಯ ಸುಲಿಗೆಗೆ ಸುಲಿಗೆ ಎನ್ನಲಾದೀತೇ? ಎಂಬ ಕಥೆಗಳಲ್ಲಿ ದೃಷ್ಟಾಂತದ ಮೂಲಕ ಚಿತ್ರಣ ಕೊಡುತ್ತಾರೆ ಲೇಖಕರು ಕ್ರೂರ ಮೃಗಗಳ ಮಧ್ಯದಲ್ಲಿ ವಾಸಿಸುವ ಜಿಂಕೆಯೊಂದು, ಹುಲಿ ಸಿಂಹಗಳಾದರೋ ತಮಗೆ ಬೇಕಾದಾಗ ಬೇಕಾದಷ್ಟು ಮಾತ್ರ ಕೊಲೆ ಮಾಡುತ್ತವೆ. ಆದರೆ ಮಾನವ ಮಾತ್ರ ತನ್ನ ಮನ ಬಂದಂತೆ ತನ್ನಾಸೆಗು ಮೀರಿ ಕೊಲೆಗೈಯುತ್ತಾನೆಂದು ಹೇಳುತ್ತದೆ.

ಅದೇ ರೀತಿ ಹೂವೊಂದರ ಗಂಧವನ್ನು ಗಾಳಿಯೂ ಬಂಡನ್ನು ದುಂಬಿಯೂ ಮಕರಂದವನ್ನು ಜೇನು, ಪರಾಗವನ್ನು ಪಾತರಗಿತ್ತಿಯೂ ಕಬಳಿಸುತ್ತಿರುವುದನ್ನು ಕಂಡ ಕವಿಗೆ ಕನಿಕರವೆನಿಸುತ್ತದೆ. ಕವಿಯ ಕನಿಕರಕ್ಕೆ ಮರುಳಾಗದ ಹೂ ಈ ಸುಲಿಗೆದಾರರು ನನ್ನನ್ನು ಹಾಗೇ ಬಿಡುತ್ತಾರೆ ಆದರೆ ನಿನ್ನ ಕುಲದ ಮಾನವರು ನನ್ನನ್ನೇ ಕೀಳುತ್ತಾರೆಂದು ಹೇಳಿದಾಗ ಕವಿಯ ಮನ ಮಿಡಿಯುತ್ತದೆ. "ಸುಲಿಗೆ ಎಲ್ಲೆಲ್ಲಿಯೂ ಇದೆ, ಆದರೆ ಸುಲಿಗೆ ಸುಲಿಗೆಯಲ್ಲಿ ಎಷ್ಟು ಬೇಧ, ಸಲಿಗೆಯ ಸುಲಿಗೆಗೆ ಸುಲಿಗೆಯನ್ನಲಾದೀತೇ"? ಎಂದು

ಒಂದು ವಾಚನಾಲಯದ ಪತ್ರಿಕೆಗಳನ್ನು ರದ್ದಿಗೆ ಹಾಕುವಾಗ ತನಗಿಂತಲೂ ಹಳೆಯದಾದ ತಾಳೇಗರಿ. ಕೋರಿ ಕಾಗದವನ್ನು ರದ್ದಿಗೆ ಹಾಕದಿರುವುದನ್ನು ಕಂಡ ಪತ್ರಿಕೆ ಪ್ರತಿಭಟಿಸುವುದು. ಆಗ ವ್ಯವಸ್ಥಾಪಕರು ಯಾವುದರಲ್ಲಿ ಸತ್ಯ, ತತ್ವ ತಥ್ಯಗಳಿರುವವೋ ಅವು ಉಳಿಯುವವು' ಎಂದು ನೀಡುವ ಸಂದೇಶ "ಉಳಿಯುವುದಾವುದು- ಅಳಿವುದಾವುದು" ಕಥೆಯಲ್ಲಿದೆ.

ಯಾವುದೇ ಒಂದು ಯಂತ್ರದ ಬೃಹತ್ತಾದ ಭಾಗಕ್ಕಿರುವಷ್ಟು ಮಹತ್ವ ಚಿಕ್ಕದಾದ ಭಾಗಕ್ಕೂ ಇರುವದೆನ್ನುವುದನ್ನು "ಬಿಡಿಯಿಂದ ಇಡಿ, ಇಡಿಯಿಂದ ಬಿಡಿ" ಕಥೆಯಿಂದ ತಿಳಿದುಬರುತ್ತದೆ. ಉತ್ಪಾದನೆಯ ಕಾರ್ಯಕ್ಕೆ ತಾನೇ ಕಾರಣನೆಂದು ಚಿಕ್ಕಭಾಗದ ಜೊತೆಗೆ ಜಗಳ ತೆಗೆಯುತ್ತದೆ, ದೊಡ್ಡಭಾಗ. ಆಗ ಚಿಕ್ಕ ಭಾಗ ತನ್ನ ಸ್ಥಾನದಿಂದ ದೂರ ಸರಿದುಯಂತ್ರ ನಿಲ್ಲಲು ಕಾರಣವಾಗುತ್ತದೆ. ಇದನ್ನು ಕಂಡ ದೊಡ್ಡ ಭಾಗಕ್ಕೆ ವಿವೇಕ ಉದಿಸಿ, ಯಾವುದೇ ಕಾರ್ಯಕ್ಕೆ ಹಿರಿ-ಕಿರಿಯರಿಬ್ಬರೂ ಅಷ್ಟೇ ಮಹತ್ವದ್ದೆಂಬ ಅಂಶವನ್ನು ಒಪ್ಪಿಕೊಳ್ಳುತ್ತದೆ. ಸೃಷ್ಟಿ ನಿಯಮವೇ ವಿಚಿತ್ರವಾದುದು. ಒಂದೊಂದರಲ್ಲಿ ಒಂದೊಂದು ವಿಶೇಷತೆಯನ್ನು ಅಡಗಿಸಿಟ್ಟು, ಒಂದು ಮತ್ತೊಂದರಿಂದ ಭಿನ್ನವಾಗಿರಲು ಕಾರಣವಾಗುತ್ತದೆ.

'ಸರ್ವವೂ ಶಿವಪ್ರಸಾದ' ಕತೆ ಕೆಲ ಪಕ್ಷಿಗಳು ತಮ್ಮಲ್ಲಿನ ಕೆಲ ನ್ಯೂನ್ಯತೆಗಳಿಂದ ವ್ಯಥೆಪಟ್ಟುಕೊಳ್ಳುವುದನ್ನು ಚಿತ್ರಿಸುತ್ತದೆ. ನವಿಲಿನಲ್ಲಿ ನಾಟ್ಯಕಲೆ ಹಾಗೂ ರೋಪಿದೆ, ಆದರೆ ರಾಗವಿಲ್ಲ ಕೋಗಿಲೆಯ ರಾಗಗಳು ಇಲ್ಲ. ಹಂಸ ಪಕ್ಷಿಗೆ ರೂಪಿದೆ. ಗಿಳಿಗೆ ರೂಪವಿದೆ ಆದರೆ ನವಿಲಿನ ಕುಣಿತ ಕೋಗಿಲೆಯ ರಾಗಗಳು ಇಲ್ಲ, ಹಂಸ ಪಕ್ಷಿಗೆ ರಾಗ ಹಾಗೂ ಗಿಳಿಯ ಸವಿ ನುಡಿಯಿಲ್ಲ. ಈ ಪಕ್ಷಿಗಳ ಕೊರಗುವಿಕೆಯನ್ನು ಕಂಡ ವನದೇವಿ, ಚರ ಜೀವಿಗಳು ಯಾವಾಗಲೂ ಇದ್ದುದನ್ನು ಕಡೆಗಣಿಸಿ ಇಲ್ಲದುದಕ್ಕಾಗಿ ಬಾಯ್ಬಿಡುವದು ಸರಿಯಲ್ಲ. ಇದ್ದುದನ್ನೇ ಸವಿದು ಆನಂದಿಂದ ಇರಬೇಕು ಎಂದು ಬುದ್ಧಿವಾದ ಹೇಳುತ್ತಾಳೆ.

ಹೀಗೆ ಪುರಾಣಿಕರ ಕಥೆಗಳು ಸರಳ ಹಾಗೂ ಹೃದಯಂಗಮವಾಗಿದ್ದು, ಓದುಗನ ಮನಸ್ಸನ್ನಾಕರ್ಷಿಸುತ್ತವೆ. ಇವರ ಕಥೆಗಳಲ್ಲಿ ಹಾಸ್ಯ, ವ್ಯಂಗ್ಗ ಮತ್ತು ಅನುಭವದ ನುಡಿಗಳಿವೆ. ಕಥೆಗಳ ಗಾತ್ರ ಕಿರಿದಾದರೂ ಸಾಹಿತ್ಯದ ದೃಷ್ಟಿಯಿಂದ ಇವು ವಿಶಿಷ್ಟವೆನಿಸಿವೆ.

'ಪಾರವ್ವನ ಪಂಚಾಯಿತಿ' ಜಯತೀರ್ಥ ರಾಜಪುರೋಹಿತರ ಪ್ರಥಮ ಸಂಕಲನದ ಪ್ರಥಮ ಕಥೆ, ಈ ಕಥೆಯು ಅಖಿಲ ಕರ್ನಾಟಕ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದಿದೆ. ಇಂದು ಪ್ರತಿಯೊಂದು ಹಳ್ಳಿಗಳಲ್ಲಿ ನಡೆಯುವ ಘಟನೆಗಳ ಚಿತ್ರಣವೇ ಅಂದಿನ ರೀತಿಯಲ್ಲಿ ಹೇಗೆ ನಡೆಯುತ್ತಿದ್ದವು ಎಂಬುದರ ಚಿತ್ರಣ ಹೊಂದಿದ ಕಥೆಯಾಗಿದೆ. ರಜಾಕಾರರ ಹಾವಳಿ, ಭಾರತದ ವಿಭಜನೆ, ಭಾರತ ಪಾಕಿಸ್ತಾನ ವಿಭಜನೆಯ ನಂತರ ಜನರ ದ್ವಂದ್ವಗಳು ಹಾಗೂ ಸಂಘರ್ಷ,

ಸಾಮಾಜಿಕ ಮೌಲ್ಯಗಳು, ಐತಿಹಾಸಿಕ ಘಟನೆಗಳು ಮುಂತಾದ ವಿಷಯಗಳೇ ರಾಜಪುರೋಹಿತರ ಕಥೆಯ ವಸ್ತುಗಳಾಗಿವೆ.

"ಯಾರು ನಮ್ಮವರು" ಎಂಬ ಕಥೆಯಲ್ಲಿ ಸತ್ಯಾಗ್ರಹಿ ರಾಜಣ್ಣ ನಿಜಾಮ್ ಗಡಿ ದಾಟುವ ಸಂದರ್ಭದ ಕಥೆಯಾಗಿದೆ. ರಾಜಣ್ಣನಿಗೆ ಪೋಲಿಸರು ಬೆನ್ನಟ್ಟಿಕೊಂಡು ಬಂದಾಗ ನಂಬಿಯಣ್ಣನೆಂಬ ಒಬ್ಬ ಸಾಮಾನ್ಯ ರೈತ ರಕ್ಷಿಸಿದ ಎಂಬುದೇ ಮೂಲವಸ್ತುವಾಗಿದೆ. ಇಂದಿನ ಗಂಡಸರು ತಾವು ಏನೂ ಮಾಡಿದರೂ ನಡೆಯುತ್ತೆ. ಆದರೆ ತಮ್ಮ ಹೆಂಡತಿಯನ್ನು ಮಾತ್ರ ಯಾರು ಕಣ್ಣೆತ್ತಿ ನೋಡಬಾರದು ಎಂಬ ಸ್ವಾರ್ಥ ಭಾವನೆಯವರಿಂದಲೇ ತುಂಬಿದ ಇಂದಿನ ಸಮಾಜದಲ್ಲಿ, ನಂಬಿಯಣ್ಣನಂತಹ ದೇಶಪ್ರೇಮಿಗಳು ಇರುತ್ತಾರೆಂಬುದಕ್ಕೆ ಈ ಕಥೆಯೇ ಸಾಕ್ಷಿ. ಪೋಲಿಸರು ರಾಜಣ್ಣನಿಗೆ ಹುಡುಕಲು ಬಂದಾಗ ನಂಬಿಯಣ್ಣ ರಾಜಣ್ಣನನ್ನು ತನ್ನ ಪತ್ನಿಯ ಪಕ್ಕದಲ್ಲಿ ಮಲಗಿಸಿ, ನನ್ನ ಮಗ ಮಲಗಿದ್ದಾನೆಂದು ಹೇಳಿ ಆತನನ್ನು ರಕ್ಷಿಸುತ್ತಾನೆ. "ನಾವು ಮೊದಲು ಮನಸೇರು" ಎನ್ನುವ ರೈತನ ನುಡಿ ನಿಜವಾಗಿಯೂ ಪ್ರಶಂಸನೀಯ, ಕಷ್ಟಕಾಲದಲ್ಲಿಯೇ 'ನಮ್ಮವರ್ಯಾರು' ಎಂಬುದು ತಿಳಿಯುತ್ತದೆ.

"ಸೈದಾ ಸುಮತಿಯಾದಳು" ಎಂಬ ಕಥೆಯಲ್ಲಿ ತನ್ನ ಪತಿ ದೇಶದ್ರೋಹಿ ಎಂದು ತಿಳಿದ ಸೈದಾ ಅವನನ್ನು ಪೋಲಿಸರಿಗೆ ಹಿಡಿದುಕೊಡುತ್ತಾಳೆ. ಸುಮತಿಯಾಗಿದ್ದವಳು ಮುಸ್ಲಿಂ ಮಸ್ತಾನ ಅಲಿಯನ್ನು ಮದುವೆಯಾಗಿ ಸೈದಾ ಆದವಳು. ಕೊನೆಗೆ ದೇಶಪ್ರೇಮದಿಂದಾಗಿ ಮತ್ತೆ ಸುಮತಿಯಾಗುತ್ತಾಳೆ. ಇದಿಷ್ಟೇ ಕಥೆಯ ಹಂದರ.

ಯುದ್ಧದ ಸನ್ನಿವೇಶಗಳಿಂದ ಕೂಡಿದ "ಡಾ॥-ಶಾಲಿನಿ" ಕಥೆ ತುಂಬಾ ಆಕರ್ಷಕವಾಗಿದೆ. ಸೈನ್ಯದಲ್ಲಿ ವೈದ್ಯಳಾಗಿದ್ದ ಶಾಲಿನಿ ಅತ್ಯಂತ ಕರುಣಾಮಯಿ. ಯುದ್ಧದಲ್ಲಿ ಕಾಲು ಕಳೆದುಕೊಂಡ ಸಂಜಯನ ಆರೈಕೆಯನ್ನು ಡಾ॥ ಶಾಲಿನಿ ಮಾಡುತ್ತಿರುತ್ತಾಳೆ. ಸೈನ್ಯದಲ್ಲಿ ಸಂಜಯ ಕಾಲುಕಳೆದುಕೊಂಡ ಸುದ್ದಿ ತಿಳಿದ ಸಂಜಯನ ಪ್ರೇಯಸಿ ಅವನನ್ನು ಬಿಟ್ಟು ಬೇರೊಬ್ಬನನ್ನು ಮದುವೆಯಾಗುತ್ತಾಳೆ. ಇದರಿಂದ ನಿರಾಶೆಯಿಂದ ನಿಶ್ಯಕ್ತನಾಗುತ್ತಾನೆ. ಸಂಜಯ ಅಂಗವಿಕಲನಾದರೂ ಅಲ್ಲ ಗಳೆಯದೇ ಕರುಣಾಮಯಿಯಾದ ಡಾ॥-ಶಾಲಿನಿ ಸಂಜಯನನ್ನು ಮದುವೆಯಾಗಿ ಹೊಸ ಜೀವನ ನೀಡುತ್ತಾಳೆ. ಇಲ್ಲಿ ಶಾಲಿನಿಯ ಆದರ್ಶತೆ ಮೆಚ್ಚುವಂತದ್ದು

'ರೋಹಿಣಿ' ರಾಜಪುರೋಹಿತರ ಎರಡನೇ ಕಥಾಸಂಕಲನ ಈ ಶೀರ್ಷಿಕೆಯನ್ನು ಹೊತ್ತ ಕಥೆ ರೋಹಿಣಿಯಲ್ಲಿ ಗೊಡ್ಡು ಸಂಪ್ರದಾಯ ಪಾಲಿಸುವ ಪಂಡಿತ ಮನೆತನದ ಚಿತ್ರಣವಿದೆ. ಇಲ್ಲಿ ಶ್ರೀಧರ ಪಂಡಿತರು ಕರ್ಮನಿಷ್ಠ ಮನೆತನದಿಂದ ಬಂದವರು ಹಾಗೂ ಮೀಮಾಂಸ ಶಾಸ್ತ್ರಭ್ಯಾಸ ಮಾಡಿದವರಾಗಿದ್ದರು. ಇವರ ಮಗಳೆ ರೋಹಿಣಿ 'ಅಷ್ಟವರ್ಷಾಭವೇತ್ಕನಾ' ಅಂದರೆ ಹೆಣ್ಣುಮಕ್ಕಳನ್ನು

ಎಂಟು ವರ್ಷದೊಳಗೆ ಮದುವೆ ಮಾಡಬೇಕೆಂಬ ಸಂಪ್ರದಾಯ ಆಗಿನ ಕಾಲದಲ್ಲಿದ್ದಿತು ಈ ಸಂಪ್ರದಾಯಕ್ಕೆ ತಪ್ಪಿ ಇವರ ಮಗಳು ಋತುಮತಿಯಾದಾಗ ಅದೇ ಸಮಾಜ ಅವಳನ್ನು ಕಾಡಿಗೆ ಬಿಟ್ಟುಬರಲು ಸೂಚಿಸುತ್ತೆ. ಅದರಂತೆ ತಂದೆ ಅನಿವಾರ್ಯವಾಗಿ ಮಗಳನ್ನು ಅಡವಿಯಲ್ಲಿ ಬಿಟ್ಟು ಬರುತ್ತಾನೆ. ಅವಳು ಕೆಲದಿನಗಳ ನಂತರ ಬಂಜಾರ ಯುವಕ ನಾಯಕನನ್ನು ಮದುವೆಯಾಗಿ ಬಂಜಾರಿ ಆಗುವುದೇ ಈ ಕಥೆಯ ವಸ್ತುವಾಗಿದೆ. ವಾಸ್ತವ ಪ್ರಜ್ಞೆಯಿಲ್ಲದ ಕರ್ಮಜ್ಞಾನ ಎಂದಿಗೂ ಸಹಾಯಕ್ಕೆ ಬರಲಾರದು, ಕುರುಡು ಸಂಪ್ರದಾಯಕ್ಕಾಗಿ ರೋಹಿಣಿ ಬಲಿಯಾಗಬೇಕಾಯಿತೆಂಬುದನ್ನು ಲೇಖಕರು ಈ ಕಥೆಯ ಮೂಲಕ ತಿಳಿಸಿದ್ದಾರೆ.

'ಕಾಂಡಕ್ಟ್ ಸರ್ಟಿಫಿಕೇಟು' ಈ ಕಥೆಯಲ್ಲಿ ಜಯತೀರ್ಥರು ತಮಗಾದ ಅನ್ಯಾಯ ಬೇರೆಯವರಿಗಾಗಬಾರದೆಂದು ತಾವು ಶಿಕ್ಷಕರಾದ ಮೇಲೆ ಎಲ್ಲರಿಗೂ ಒಳ್ಳೆಯ ನಡತೆಯ ಸರ್ಟಿಫಿಕೇಟ ಕೊಡುತ್ತಿದ್ದರು ಎಂದು ಸ್ವಂತ ಕತೆಯನ್ನೇ ಇಲ್ಲಿ ಹೆಣೆದಿದ್ದಾರೆ. ಅವರು ಚಿಕ್ಕವರಿದ್ದಾಗ ಬಡತನದಿಂದಾಗಿ ವಾರದ ಮನೆಗಳಲ್ಲಿ ಊಟ ಮಾಡುತ್ತಿದ್ದುದು. ಒಮ್ಮೆ ಹಸಿವಿನಿಂದ ಬಳಲಿದ್ದು, ಶಿಕ್ಷಕರು ಶಾಲೆಯಿಂದ ಹೊರಹಾಕಿದ್ದು, ನಡತೆ ಚೆನ್ನಾಗಿಲ್ಲವೆಂದು ಬರೆದದ್ದು, ನಂತರ ಹೇಗೋ ಕಷ್ಟಪಟ್ಟು ಶಾಲೆ ಕಲಿತು, ಪ್ರೊಫೆಸರ ಆಗಿದ್ದು, ಎಲ್ಲವನ್ನು ನೆನಪಿಸಿಕೊಂಡು ಕಥೆಯ ಮುಖಾಂತರ ಅತ್ಯಂತ ಸರಳವಾಗಿ ಹಿನ್ನೋಟದ ತಂತ್ರದೊಂದಿಗೆ ನಿರೂಪಿಸಿದ್ದಾರೆ.

'ನಂಬಿಕೆ' ಕಥೆಯಲ್ಲಿ ಗೌರವ್ವನ ಪಾತ್ರ ತುಂಬಾ ಚೆನ್ನಾಗಿ ಮೂಡಿದೆ. ಮೈಲಾರಲಿಂಗನಲ್ಲಿ ಅನನ್ಯ ನಂಬಿಕೆ ಇಟ್ಟುಕೊಂಡವಳು. 'ಬಿಳಿ ಇರುವಿ ಎದ್ದಾವ' ಎನ್ನುವ ಸಂಕೇತದ ಮೂಲಕ ಬ್ರಿಟಿಷರನ್ನು ಹಾಗೂ ಇಂದಿನ ಬಟ್ಟೆಯ ರಾಜಕಾರಣಿಗಳನ್ನು ಟೀಕಿಸುವ ಪರಿ ಎಲ್ಲರೂ ಮೆಚ್ಚುವಂತದ್ದು.

'ಗಣತಿ ಗಣಾಚಾರಿ' ಭಾರತದ ಸ್ವಾತಂತ್ರ್ಯಾನಂತರ ಪಂಚವಾರ್ಷಿಕ ಯೋಜನೆಗಳು, ಗಣತಿಯನ್ನು ಹತ್ತು ವರ್ಷಕೊಮ್ಮೆ ಮಾಡತೊಡಗಿದರು. ಅಂಥ ಒಂದು ಗಣತಿ ಮಾಡುವ ಸಂದರ್ಭದಲ್ಲಿ ಗಣತಿ ಗಣಾಚಾರಿಗೆ ಉಂಟಾದ ತಾಪತ್ರಯಗಳನ್ನು ಹೇಳಿ ಗಣತಿಯ ಮಹತ್ವವನ್ನು ಈ ಕಥೆಯಲ್ಲಿ ಅರ್ಥಪೂರ್ಣವಾಗಿ ತಿಳಿಸಿ ಕೊಟ್ಟಿದ್ದಾರೆ. ಇದರಲ್ಲಿನ ವಿಷಯ ಸಾಮಾನ್ಯವಾಗಿರಬಹುದು ಆದರೆ ಅದು ಜನತೆಯವರೆಗೆ ಹೋಗಿ ಮನಮುಟ್ಟಿಸುವ ಪ್ರಯತ್ನ ಇಲ್ಲಿ ಕಥೆಗಾರರು ಮಾಡಿದ್ದಾರೆ.

'ಗೋಮಯ ವಿವೇಕ' (ಗೋಮಯ ಎಂದರೆ 'ಆಕಳ ಸಗಣಿ', ವಿವೇಕ ಎಂದರೆ ತಿಳುವಳಿಕೆ') ಭಾರತ ಸಂಪ್ರದಾಯವನ್ನನುಸರಿಸುವ ದೇಶ ಯಾವುದನ್ನು ಮಾಡಿದರೂ ಅದಕ್ಕೊಂದು ವೈಜ್ಞಾನಿಕ ದೃಷ್ಟಿಕೋನ ಇದ್ದೇ ಇರುತ್ತದೆ ಎಂಬುದನ್ನು ಈ ಕಥೆಯಲ್ಲಿ ಸ್ಪುಟ್ಟವಾಗಿ ಮೂಡಿಸಿದ್ದಾರೆ.

'ನಾನೇ ಕೊಂದನೇ' ಈ ಕಥೆಯ ರಾಜಪುರೋಹಿತರು ತಾವು ಅಧಿಕಾರದಲ್ಲಿದ್ದಾಗ ಆದ ಅನುಭವದ (ಘಟನೆಯ) ಚಿತ್ರಣವಿದೆ. ಒಬ್ಬ ಕೆಳದರ್ಜೆಯ ಅಧಿಕಾರಿ ಮೇಲಾಧಿಕಾರಿಗಳನ್ನು ಭ್ರಷ್ಟ

ಮಂತ್ರಿಗಳನ್ನು ತೃಪ್ತಿಪಡಿಸಲಿಕ್ಕೆ ಅವರ ಊಟೋಪಚಾರ ಇತರ ಖರ್ಚುಗಳಿಗಾಗಿ ಲಂಚ ತೆಗೆದುಕೊಳ್ಳುತ್ತಾನೆ. ಮುಂದೆ ಜನರೇ ಈ ಅಧಿಕಾರಿಯ ಮೇಲೆ ರೊಚ್ಚಿಗೇಳುತ್ತಾರೆ. ಕೊನೆಗೆ ಕೆಳದರ್ಜೆಯ ಅಧಿಕಾರಿ ಜನರ ಕೋಪಕ್ಕೆದುರಾದಾಗ ಬೇರೆ ಅಧಿಕಾರಿಗಳಿಗೆ ಮೊರೆ ಹೋಗುತ್ತಾನೆ. ಆಗ ಯಾವ ಅಧಿಕಾರಿಗಳು ಈತನ ರಕ್ಷಣೆಗೆ ಬರದೇ, ವಿಚಾರಣೆ ನಡೆಸೋಣ ಎನ್ನುತ್ತಾರೆ. ಈ ಕಾರಣಕ್ಕಾಗಿ ಎದೆಯೊಡೆದು ಸಾಯುವ ಅಧಿಕಾರಿಯ ಚಿತ್ರ ಈ ಕಥೆಯಲ್ಲಿ ತುಂಬಾ ಮಾರ್ಮಿಕವಾಗಿ ಮೂಡಿಬಂದಿದೆ.

'ಶಿಥಿಲ ಶಿಲೆ' ಈ ಕಥಾ ಸಂಕಲನ ಕರ್ನಾಟಕ ವಿಶ್ವವಿದ್ಯಾಲದಿಂದ ಪಠ್ಯಪುಸ್ತಕವಾಗಿದ್ದಿತು. ಈ ಸಂಕಲನದ ಕಥೆಗಳು ಸುಧಾ, ಮಯೂರ, ಕರ್ಮವೀರ, ಉದಯವಾಣಿ ಹೀಗೆ ಅನೇಕ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಕನ್ನಡನಾಡಿನ ಚರಿತ್ರೆಯಲ್ಲಿ ಬರುವ ಪಾತ್ರಗಳನ್ನು ಘಟನೆಗಳನ್ನು ಈ ಸಂಕಲನದಲ್ಲಿ ಹಿಡಿದಿಟ್ಟಿದ್ದಾರೆ.

'ಶಿಥಿಲ ಶಿಲೆ' ಈ ಕಥೆಯಲ್ಲಿ ಕೇತವ್ವೆ ನಾಯಕಿ, ಹಜಾರ ರಾಮನ ದೇವಾಲಯದಲ್ಲಿ ನರ್ತನ ಮಾಡುತ್ತಿರುವ ಕೇತವ್ವೆ, ರಾಜ ಬುಕ್ಕರಾಯನ ಕಾಲದಲ್ಲಿ ದೇವದಾಸಿಯಾಗಿದ್ದಳು. ಇದೇ ಕಾರಣಕ್ಕಾಗಿ ಪೂಜಾರಿ ಕೇತವ್ವೆ ಎಷ್ಟೇ ಶುದ್ಧ ಶಿಲ್ಪದ ಮೂರ್ತಿಯಾಗಿದ್ದರೂ ಸಹ ಅವಳನ್ನು 'ಶಿಥಿಲ ಶಿಲೆ' ಎನ್ನುವರು. ಶಿಲೆ ಶಿಥಿಲವಾದರೇನಂತೆ! ಅದು ಹೊತ್ತು ನಿಂತ ಶೀಲ, ಚರಿತ್ರೆ ಶಿಥಿಲವಾಗಿಲ್ಲವಲ್ಲ ಎಂದು ಮೆಚ್ಚಿ ಪಾಂಚಾಲಶೆಟ್ಟಿ ಕೇತವ್ವೆಗೆ ಭೂಮಿಯನ್ನು ದತ್ತಿಯಾಗಿ ನೀಡಿದ ಸಂಗತಿ ಇಲ್ಲಿದೆ. ಕೇತವ್ವೆ ತನ್ನ ವೃತ್ತಿಗೆ ವಿರುದ್ಧವಾದ ನಿರ್ಣಯ ತೆಗೆದುಕೊಂಡದ್ದನ್ನು ನೋಡಿ ಪಾಂಚಾಲ ಶೆಟ್ಟಿ ಸಹಕರಿಸಿ ಅವಳ ಶೀಲ ಸಂರಕ್ಷಣೆಗೆಂದು ದಾನವಾಗಿ ಭೂಮಿಯನ್ನು ಕೊಟ್ಟಿದ್ದು ಅತ್ಯಂತ ಮಹತ್ವಪೂರ್ಣ.

'ಬಾಣ ಸಂದರ್ಶನ' ಬಾಣನು ಮೊದಲಿಗೆ ಹರ್ಷವರ್ಧನ ಅರಸನನ್ನು ಸಂದರ್ಶಿಸಿದ ಘಟನೆಯೇ ಈ ಕಥೆಯ ವಸ್ತುವಾಗಿದೆ. ಇಲ್ಲಿ ಕಥೆಗಾರರು ಬಾಣನ ಜಾಣ್ಮೆ, ಅವನ ತಾರುಣ್ಯದ ವಿಷಯ ಲೋಲುಪತೆಯನ್ನು ಕಥೆಯುದ್ದಕ್ಕೂ ಚೆನ್ನಾಗಿ ವರ್ಣಿಸಿದ್ದಾರೆ. ರಾಜಪುರೋಹಿತರು ಇದೇ ಭಾಗದವರಾದರೂ ಸಹ ಇತರ ಕಥೆಗಾರರಿಗಿಂತ ಪೂರ್ತಿ ಭಿನ್ನವಾಗಿ ಕಥೆಗಳ ವಿಷಯವಸ್ತುವನ್ನು ಆರಿಸಿಕೊಂಡು ಕಥೆ ರಚಿಸಿದ್ದು ಕಂಡು ಬರುತ್ತದೆ.

ರಾಜಶೇಖರ ನೀರಮಾನ್ವಿಯವರ 'ವೃತ್ತ' ಕಥೆಯು ಅನುಭವಗಳಿಂದ ನುರಿತ ವ್ಯಕ್ತಿತ್ವವೊಂದು ವರ್ತಮಾನದ ನೆಲೆಯಲ್ಲಿ ನಿಂತು ನಡೆಸುವ ಅವಲೋಕನದಲ್ಲಿ 'ವೃತ್ತ'ದ ಜೀವನ ಬಿಚ್ಚಿಕೊಳ್ಳುತ್ತದೆ. ಮುಗಿದುಹೋದ ಜೀವನದ ಚಿತ್ರಣದೊಂದಿಗೆ ಮುಂದಿನ ಜೀವನದ ರೀತಿಯ ಹೊಳಹೊಸ್ಪಷ್ಟವಾಗುತ್ತದೆ. ಪ್ರೀತಿ ನಿಷ್ಠೆಗಳ ಸಂಕೇತವಾದ ನಾಯಿಯ ಸಾವಿನೊಂದಿಗೆ ಆರಂಭವಾಗುವ ಶಂಕರಗೌಡನ ಜೀವನಚಿತ್ರ, ನೆನಪುಗಳಲ್ಲಿ ಕೂಡಿಕೊಳ್ಳುತ್ತಾ ಹೋದಂತೆ ಸ್ವಾತಂತ್ರ್ಯ ಹೋರಾಟಗಾರರ ರಕ್ಷಣೆ,

ರಜಾಕಾರರ ಹಾವಳಿ, ಹುಸೇನಿಗೆ ರಕ್ಷಣೆ ನೀಡುವುದು. ಗೌಡತಿಯೊಂದಿಗಿನ ಸಂಬಂಧ ಹೀಗೆ ಹತ್ತಾರು ಮಜಲುಗಳಲ್ಲಿ ಜೀವನಮೌಲ್ಯಗಳು ಘರ್ಷಣೆಗೆ ಕಾರಣವಾಗುತ್ತವೆ. ಒಬ್ಬನೇ ಮಗನ ನಡವಳಿಕೆ, ಅವನ ಸ್ವಾರ್ಥ ರಾಜಕಾರಣದಲ್ಲಿ ಒಳ್ಳೆಯ ಮೌಲ್ಯಗಳ ಪರಂಪರೆಯ ಅವನತಿಯ ಚಿತ್ರ ಗಾಢವಾಗಿ ಮೂಡಿಬಂದಿದೆ. ಕೊನೆಯಲ್ಲಿ ಮಗನ ಕೊಲೆಗೆ ನಡೆದಿರುವ ಸಂಚಿನ ಹಿನ್ನಲೆಯಲ್ಲಿ ಒಮ್ಮೆಲೆ ಸಂಭವಿಸುವ ಗೌಡನ ಸಾವು ತುಂಬಾ ಮಾರ್ಮಿಕವಾಗಿ ಮೂಡಿ ಬಂದಿದೆ.

'ದುರಸ್ತಿ' ಸಾರ್ವತ್ರಿಕ ಜೀವನದ ಒಳ್ಳೆಯ ಮೌಲ್ಯಗಳ ಅವನತಿಯ ಇನ್ನೊಂದು ಮುಖವನ್ನು ನೀರಮಾನ್ವಿಯವರು ಈ ಕಥೆಯಲ್ಲಿ ತೋರಿಸಿದ್ದಾರೆ. ಇದು ಎರಡು ಹಂತಗಳಲ್ಲಿ ನಡೆಯುವ ಕಥೆ. ಸೈಕಲ್ ರಿಕ್ಷಾದ ಮತ್ತು ಮನುಷ್ಯ ಸ್ವಭಾವದ ದುರಸ್ತಿಯ ಎರಡು ದಡಗಳನ್ನು ತುಂಬಿ ಮುಂದುವರೆಯುವ ಒಂದು ಹೃದಯ ವಿದ್ರಾವಕ ಘಟನೆ. ಇಲ್ಲಿನ ಜೀವನದ ಚಿತ್ರ ನೀತಿ ಭ್ರಷ್ಟತನದ ಹಲವು ಪದರುಗಳು, ಗಂಗಿ, ನಾಗಮ್ಮ, ಅಯ್ಯಾ ಇವರುಗಳ ವೈಯಕ್ತಿಕ ಜೀವನದಲ್ಲಿ ನಡೆಯುವ ಸಿಮೆಂಟ ಕಳ್ಳಸಾಗಾಣಿಕೆ, ಹುಡುಗಿಯರ ಮಾರಾಟದಲ್ಲಿ ಹಣ ಮೊದಲಾದ ಕಾಮನೆಗಳೇ ಪ್ರಧಾನವಾಗುತ್ತವೆ. ಕಂಡುಂಡ  ಅನುಭವಗಳನ್ನು ಸಮೀಕ್ಷಿಸುತ್ತಾ, ವಿಮರ್ಶಿಸುತ್ತಾ. ಆತ್ಮಾವಲೋಕನ ಮಾಡಿಕೊಳ್ಳುತ್ತಾ ಸಾಗುವ ಕಥಾನಾಯಕನ ನಿರ್ಧಾರದಲ್ಲಿ ಕಥೆಗಾರರ ಆಶಯ ಧ್ವನಿಸುತ್ತದೆ.

'ಹಂಗಿನರಮನೆಯ ಹೊರಗೆ'– ಆಸ್ಪತ್ರೆಯಲ್ಲಿ ರೋಗಿಯಾಗಿ ಕಾಯುತ್ತಿರುವ ಕಥಾನಾಯಕ ಅಲ್ಲಿ ನಡೆಯುವ ಸಂಗತಿಗಳು, ವ್ಯಕ್ತಿಗಳ ನಡುವಿನ ಕ್ರಿಯೆ– ಪ್ರತಿಕ್ರಿಯೆಗಳು ದಾಖಲೆಯಾಗುವ ರೀತಿ ವಿಭಿನ್ನ ಶೈಲಿಯಲ್ಲಿ ಮೂಡಿಬಂದಿದೆ. ಅವನ ಕರುಳುಬೇನೆ ರೋಗ, ಗುಣಪಡಿಸಲು ಮಾಡಬೇಕಾದ ಶಸ್ತ್ರ ಚಿಕಿತ್ಸೆ, ಆಸ್ಪತ್ರೆ ಇವುಗಳನ್ನು ಕೇವಲ ಘಟನೆ ಅಥವಾ ಸಂಗತಿಗಳಾಗಿ ನೋಡದೆ, ಆ ಸಂದರ್ಭದಲ್ಲಿ ಕೊಟ್ಟ ಸಾಂಕೇತಿಕ ಅರ್ಥಗಳನ್ನು ಗಮನಿಸಬೇಕು. ಅವನ ದೈಹಿಕ ಆರೋಗ್ಯ ಕೂಡ ಮಾನಸಿಕ ಅನಾರೋಗ್ಯಕ್ಕೂ ಕಲ್ಪಿಸುವ ಸಂಬಂಧ ತೀರ ವಿಭಿನ್ನ ಶೈಲಿಯಲ್ಲಿ ಮೂಡಿಬಂದಿದೆ. ನವ್ಯದಲ್ಲಿ ಬರೆದ ನೀರಮಾನ್ವಿಯವರು ಆ ಘಟ್ಟದ ಲಕ್ಷಣಗಳಾದ ಸಿನಿಕತನ ಸಂಕೇತಗಳು, ಕಾಮ, ಪ್ರಕೃತಿ ಮುಂತಾದವುಗಳನ್ನು ಈ ಸಂಕಲನದ ಕಥೆಗಳಲ್ಲಿ ವಿಪುಲವಾಗಿ ಬಳಸಿ ಬರೆದಿದ್ದಾರೆ.

ಅಂತರಾಷ್ಟ್ರೀಯ ಮಟ್ಟದ ಶ್ರೇಷ್ಠ ಅನುಭಾವದ ಕನ್ನಡ ಸಾಹಿತಿಯಾದ ಪಂಚಾಕ್ಷರಿ ಹಿರೇಮಠರು ತಮ್ಮ ಕಥಾ ಸಂಕಲನದವಾದ 'ಎನ್ನಾಲೇಕ' ವನ್ನು ೧೯೬೬ ರಲ್ಲಿ ಪ್ರಕಟಿಸಿದರು 'ಎನ್ನಾಲೇಕ' ಸಂಕಲನದ ಕಥೆಗಳಲ್ಲಿ ಪ್ರೀತಿ–ಪ್ರೇಮ ಆದರ್ಶತೆಗಳು ಬಂದು ಅವೆಲ್ಲಾ ಆದ್ಯಾತ್ಮಿಕ ಹಿನ್ನಲೆಯಲ್ಲಿ ಮುಂದುವರೆದು ಧಾರ್ಮಿಕ ಪ್ರೀತಿ ಸಮನ್ವಯಗೊಳಿಸುವ ಕತೆಗಳಾಗಿವೆ. "ರಾತ್ರಿರಾಣಿ" ಸರ್ವಾರ್ಪಣ ಭಾವದ ರಾಧ, ಎನ್ನಾಲೇಕ, ಪ್ರೀತಿ ಅವಳ ಬದುಕು ಬಂಗಾರಗೊಳಿಸಿತು" ಕಥೆಗಳಲ್ಲಿ ಪ್ರೀತಿಯ ವೈಚಾರಿಕ ನಿಲುವು ಕಂಡುಬರುತ್ತದೆ. ಆದರೆ ಕಥೆಯ ಆರಂಭದಲ್ಲಿ ಬೇರೆ ರೀತಿಯ (ನಿರೂಪಣೆ)ಅರ್ಥ

ಬರುವಂತೆ ಭಾಸವಾಗುತ್ತದೆ. ಮುಂದೆ ಮುಂದೆ ಓದುತ್ತಾ ಹೋದಾಗ ಅದರ ನಿಜವಾದ ತಿರುಳು ಅರ್ಥವಾಗುತ್ತದೆ. ಇದೇ ಇವರ ವಿಶೇಷತೆ. ಇನ್ನು ಪ್ರವಾಸದ ಹಿನ್ನೆಲೆಯಲ್ಲಿ ಬರೆದ ಕಥೆಗಳ ವಸ್ತುವಂತೂ ಮೌಲ್ಯಯುಳ್ಳದ್ದಾಗಿದೆ. ಪ್ರವಾಸಿಗರ ತಾಣವಾದ ಹಾಗೂ ಐತಿಹಾಸಿಕ ಬೀಡಾದ ಚಿತ್ರದುರ್ಗದ ಕೋಟೆ ಹಾಗೂ ಉಚ್ಚಂಗಿದುರ್ಗದ ಕುರಿತು ಲೇಖಕರು ತುಂಬಾ ಮನಮೋಹಕವಾಗಿ ವರ್ಣಿಸಿದ್ದಾರೆ.

'ಉಚ್ಚಂಗಿ ದುರ್ಗ' ಇದರ ಹಿನ್ನೆಲೆ ಪ್ರಾಮುಖ್ಯತೆ, ಆ ಹೆಸರಿನಿಂದ ಕರೆಯಲು ಕಾರಣ, ಎಲ್ಲ ವಿಷಯವನ್ನು ಕಥೆಯ ಮೂಲಕ ತಿಳಿದುಕೊಳ್ಳುವಷ್ಟು ವಸ್ತುವನ್ನು ಸವಿಸ್ತರವಾಗಿ ಪರಿಚಯಿಸುವ ನಿರೂಪಣೆ ತುಂಬಾ ಚೆನ್ನಾಗಿದೆ. ಈ ಕಡೆಯಿಂದ ಹೋದರೆ ದಾರಿ ಸುಗಮ ಎಂಬುದರ ಚಿತ್ರಣ, ಆಪವಿತ್ರ ಭುಮಿಯ ಮಹತ್ವ ಎಲ್ಲವನ್ನು ಈ ಕಥೆಯಲ್ಲಿ ಕೊಂಡಾಡಿದ್ದಾರೆ. ಈ ದುರ್ಗದಲ್ಲಿ ಬರುವ ಮೂರು ಹೊಂಡಗಳಾದ "ಬಟ್ಟಲುಹೊಂಡ, ಅರಿಶಿಣ ಹೊಂಡ ಹಾಗೂ ಹೊನ್ನಿಹೊಂಡ ಇವುಗಳ ಹಿನ್ನಲೆಯನ್ನು ವಿವರವಾಗಿ ಹೇಳಿದ್ದಾರೆ. ಈ ಹೊಂಡಗಳಲ್ಲಿ ಆಗಿನ ರಾಜ ಮನೆತನದ ರಾಣಿವಾಸದ ರಾಣಿಯರು, ರಾಜಕನ್ಯೆಯರು ಸ್ನಾನ ಮಾಡುತ್ತಿದ್ದರು. ಆದ್ದರಿಂದ ಈ ಹೆಸರು ಅದಕ್ಕೆ ಬಂದಿವೆ ಎಂಬ ವಿಚಾರ.

ಹೀಗೆ ಗತಿಸಿ ಹೋದ ಚರಿತ್ರೆಗಳನ್ನು ಪ್ರವಾಸದ ಹಿನ್ನೆಲೆಯಲ್ಲಿ ನಿರೂಪಿಸಿರುವ ವಿಧಾನ ತುಂಬಾ ಚೆನ್ನಾಗಿದೆ. ಕಥೆ ಓದುತ್ತಿದ್ದಂತೆ ನಮ್ಮ ಕಣ್ಣಿನ ಮುಂದೆ ದೃಶ್ಯಗಳು ಬಂದು ನಿಲ್ಲುತ್ತವೆ. ಇದು ಪಂಚಾಕ್ಷರಿ ಹಿರೇಮಠರ ರಚನೆಯ ವೈಖರಿಯಾಗಿದೆ.

ಲಕ್ಷ್ಮೀದೇವಿ ಶಾಸ್ತ್ರೀಯವರು ರಾಯಚೂರು-ಶಹಾಬಾದಗಳ ಸುತ್ತಮುತ್ತಲಿನ ಪರಿಸರದ ಸಂಗತಿಗಳನ್ನಿಟ್ಟುಕೊಂಡು ಕಥೆ ರಚನೆ ಮಾಡಿದ ಕಥೆಗಾರ್ತಿ. ಸಾಮಾನ್ಯ ಕುಟುಂಬದ ಜೀವನ, ಸ್ತ್ರೀಯರಲ್ಲಿಯ ಮಾನವೀಯ ಅನುಕಂಪ, ದಾಂಪತ್ಯ ಶ್ರೀಮಂತಿಕೆ, ಮೇಲು-ಕೀಳು ಮುಂತಾದವುಗಳನ್ನೇ ಮುಖ್ಯವಾಗಿಟ್ಟುಕೊಂಡು ಕಥೆ ಹೆಣೆದಿದ್ದಾರೆ. 'ಸಹಜ ಸ್ಥಿತಿ' ಯ ಕಥೆಗಳನ್ನು ಇವರಲ್ಲಿ ಹೆಚ್ಚಾಗಿ ಕಾಣುತ್ತೇವೆ.

ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಬಹುತೇಕ ಕಥೆಗಳು ಗ್ರಾಮೀಣ ಬದುಕಿನ ಚಿತ್ರಣ, ಹೆಣ್ಣಿನ ಅಂತರಂಗದ ನೋವು-ನಲಿವುಗಳು, ಊಳಿಗಮಾನ್ಯಪದ್ಧತಿಯ ರಾಕ್ಷಸ ಸ್ವಭಾವ. ಬಂಡಾಯದ ಮನೋಭಾವನೆ, ವಿಷಮದಾಂಪತ್ಯ, ಸಣ್ಣತನ ಅನುಮಾನ ಸಂಪ್ರದಾಯ ವಿರೋಧಿ ಬಣಗಳ ನಡುವಿನ ಘರ್ಷಣೆ ಈ ಎಲ್ಲ ಅಂಶಗಳನ್ನು ಒಳಗೊಂಡಿವೆ. ಆದಕಾರಣ ಪ್ರತ್ಯೇಕವಾಗಿ ವರ್ಗೀಕರಣದಲ್ಲಿ ವಿಷಯವಸ್ತು ಗುರುತಿಸುವುದು ಅಷ್ಟೊಂದು ಸಮಂಜಸವಾಗುವುದಿಲ್ಲ ಎಂಬ ಕಾರಣಕ್ಕಾಗಿ ಒಂದೊಂದು ಕಥೆಗಳ ವಿಷಯ ವಸ್ತುವನ್ನು ಬೇರೆ ಬೇರೆಯಾಗಿ ಗುರುತಿಸಲು ಇಲ್ಲಿ

ಪ್ರಯತ್ನಿಸಲಾಗಿದೆ. 'ಮಣ್ಣುಸೇರಿತು ಬೀಜ' ಕಥಾಸಂಕಲನದ ಶೀರ್ಷಿಕೆ ಹೊತ್ತ ಈ ಕಥೆಯಲ್ಲಿ ಸಾವಿನ ಭೀಕರತೆಯನ್ನು ಮರೆಮಾಡುವಷ್ಟು ಆಸ್ತಿಯ ವ್ಯಾಮೋಹ ಆವರಿಸುವುದು ಕಂಡುಬರುತ್ತದೆ. ಸಂಭವಿಸಿದ ಸಾವನ್ನು ಲೆಕ್ಕಿಸದೆ ಸ್ವಾರ್ಥ ಅನಾಥವಾಗುವ ಆಸ್ತಿ ಬಗ್ಗೆ ಇಲ್ಲಿ ಆಲೋಚಿಸಲಾಗಿದೆ. ನಾಗಮ್ಮನ ಆಸ್ತಿಗಾಗಿ ಹೊಂಚುಹಾಕುವ ಊರಿನ ಜನ ಇಬ್ಬರ ಈ ದೌರ್ಬಲ್ಯಗಳ ದುರುಪಯೋಗಕ್ಕಿಳಿಸಿದಾಗ ಇದರ ಬಿಸಿ ಬುದ್ಧಿಮಾಂದ್ಯನಾದ ಗಯ್ಯಪ್ಪನ ಅರಿವಿಗೂ ಮುಟ್ಟಿರುವುದನ್ನು "ನಮ್ಮನ್ನು ಊರಾಗ ಇರ್‌ಗೊಡವಲ್ರಪ್ಪೋ"[೨೨] ಎಂಬ ಆತನ ಚೀರುವಿಕೆ ತೋರಿಸಿಕೊಡುತ್ತದೆ. ಆ ಸ್ಥಿತಿಗೆ ಸ್ಪಂದಿಸಲು 'ಗಯ್ಯು' ಸಮರ್ಥನಾದಾಗ, ಜಂಬಣ್ಣ ಬಂದುದ್ದನ್ನು' ಎದುರಿಸಿ ಬದುಕಲು ನಿರ್ಧರಿಸುತ್ತಾನೆ. 'ಉಡಿಕಿಯಂತಹ ಪದ್ಧತಿ' ಮೂಲಕ ಬದುಕನ್ನು ಅನುಭವಿಸುವ ಹಕ್ಕನ್ನು ಆಯ್ಕೆಯ ಸ್ವಾತಂತ್ರ್ಯವನ್ನು ಜನಪದ ಸಂಸ್ಕೃತಿ ಕಲ್ಪಿಸಿ ಕೊಟ್ಟಿದ್ದಕ್ಕೆ ಒಂದು ಉದಾಹರಣೆ ಸಹ ಇಲ್ಲಿದೆ. ನಾಗಮ್ಮ ಬಸವಣ್ಣನಿಗೆ ಮೂರನೇ ಪತ್ನಿಯಾದರೆ, ಆತ ಆಕೆಗೆ ಮೂರನೇ ಪತಿ, ಸಮಾನತೆಯ ಅಂಶ ಇಲ್ಲಿದೆ.

ಇನ್ನೊಂದು ಕಥೆಯಾದ 'ದಾರಿ ಮೂಡಿಸುವ ಹೆಜ್ಜೆಗಳು', ಇದು ಅಪರೂಪದ ಕಥೆ ಎನ್ನಬಹುದು ಬಂಡಾಯದ ಬಹುಪಾಲು ಗುಣವನ್ನು ಒಳಗೊಂಡ ಎದೆಗಾರಿಕೆಯ ಹೆಣ್ಣಾಗಿ 'ತಿಮ್ಮಕ್ಕ ಚಿತ್ರಣಗೊಳ್ಳುತ್ತಾಳೆ. ತನ್ನ ಎಮ್ಮೆ ಗೊಡ್ಡಾದ ಬಗ್ಗೆ ದಿಗ್ಭ್ರಮಿಸುವ ಈಕೆ ತನ್ನ ಬದುಕು ಬರಡಾದ ಬಗ್ಗೆ ಚಿಂತಿಸದೇ, ಬಂದಂತಹ ಬದುಕನ್ನು ಧೈರ್ಯದಿಂದ ಎದುರಿಸುತ್ತಾಳೆ. ಹಿರೇಗೌಡನೊಂದಿಗೆ 'ಕೂಡಿಕೆ' ಮಾಡಿಕೊಂಡು ಆತನ ಪತ್ನಿಯ ಪ್ರೀತಿಗೆ ಪಾತ್ರಳಾಗುವ ಈಕೆ ತನ್ನ ಮಗಳು ರಡ್ಡೇರ ಹುಸೇನಿಯ ಪ್ರೀತಿಯ ಸುಳಿಗೆ ಸಿಕ್ಕಾಗ, ಆತ ಅವಳನ್ನು ಮದುವೆಯಾಗಲೇ ಬೇಕೆಂಬ ನಿರ್ಧಾರಕ್ಕೆ ಈಕೆ ಬರುತ್ತಾಳೆ. ಜಾತಿ ಈಕೆಗೆ ಒಂದು ಪ್ರಶ್ನೆಯೇ ಅಲ್ಲ, ತಿಮ್ಮಕ್ಕಳ ಎಮ್ಮೆಯ ಹುಡುಕಾಟದ ಮೂಲಕವೇ ಬಿಚ್ಚಿಕೊಳ್ಳುತ್ತಾ ಹೋಗುವ ಈ ಕಥೆಯಲ್ಲಿ ಕೆಲವೆಡೆ ವಿವರಣೆ ಎಮ್ಮೆಯ ಹುಡುಕಾಟದ ಮೂಲಕವೇ  ವಿವರಣೆ ಅತೀ ಎನಿಸುತ್ತದೆ.

ವಿಷಮ ದಾಂಪತ್ಯದ ದಾರುಣ ಚಿತ್ರಣ ನೀಡುವ ಕಥೆ 'ಒತ್ತೆ' ಆಗಿದೆ. ಇಟ್ಟುಕೊಂಡವಳು ಕಟ್ಟಿಕೊಂಡವಳಿಗಿಂತ ಗಂಡನ ಬಗ್ಗೆ ಹೆಚ್ಚು ಪ್ರೀತಿ- ನಿಷ್ಠೆ ಹೊಂದಿರುವುದು ಇಲ್ಲಿ ಕಂಡು ಬರುತ್ತದೆ. ರಾಚನ ಹೆಂಡತಿ ಅತಿಯಾಸೆಯಿಂದ ಗಂಡನನ್ನು ಗೋಳು ಹುಯ್ದು ಕೊಂಡರೆ, "ಜಡ್ಡು ಬಾಳಬಲ್ಕಂಡಿದ್ದಂತಾಗಾದಲ್ಲ"[೨೩] ಎಂದು ಆತನ ಜ್ವರಕ್ಕಾಗಿ ತಾನು ಕಣ್ಣೀರು ಸುರಿಸುವ ರಾಚಿ, ಇಟ್ಟುಕೊಂಡ ದೇವಕಿ ಪತ್ನಿಗಿಂತ ಮಿಗಿಲಾಗುತ್ತಾಳೆ. ಗೌಡರಮನೆ ಜಗಳ, ರಾಚನ ಬದುಕಿಗೆ ಆಸರೆಯಾಗಿದ್ದ ಗದ್ದೆ, ಅವನ ಕೈ ತಪ್ಪುವಂತೆ ಮಾಡಿದ ಅಘಾತ ರಾಚನನ್ನು ಬಲಿ ತೆಗೆದುಕೊಳ್ಳುತ್ತದೆ.

ಇಲ್ಲಿ ರಾಚಪ್ಪ ಗೊರಲು ಕಾಯಿಲೆಯಿಂದ ನರಳುವುದು ಸಾಂಕೇತಿಕವಾಗುತ್ತದೆ. ಮಾದಿಗರ

ದೇವಕಿಯ ಪ್ರೀತಿ ನಿಷ್ಠೆ ಅನುಪಮವಾಗಿ ಅಚ್ಚೊತ್ತಿವೆ. ಆ ಬಡವಿಯ ಪ್ರೀತಿಗಾಗಿ ಮಾಡುವ ತ್ಯಾಗ ಕೈಗೂಡದೇ ಹೋಗುವುದು ನೋವನ್ನೂಂಟು ಮಾಡುತ್ತದೆ. ಕೈಹಿಡಿದವಳನ್ನು ತೃಪ್ತಿ ಪಡಿಸಲಾಗದಿದ್ದರೂ ಕಂಡ ಹೆಣ್ಣುಗಳ ಮೇಲೆಲ್ಲ ಕಣ್ಣಾಡಿಸುವ ವ್ಯರ್ಥ ಹಂಬಲದ ಗೌಡನನ್ನು ಈ ಸಂಕಲನದ "ಹೊತ್ತು ಮೂಡುವ ಸಮಯ"ದಲ್ಲಿ ಕಾಣಬಹುದಾಗಿದೆ. "ಅಲ್ಲ! ಈಕಿ ಹೋಗಿ ಹೋಗಿ ನನಗಂಡನ ತಕ ಮಲಗಿ ಅದೇನು ಸುಖ ಉಂಡಿದ್ದಾಳಂತೀನಿ"[೨೪] ಎಂಬ ಗೌಡನ ಪತ್ನಿಯ ಮಾತು ಅವನ ಒಳಗನ್ನು ಹೊರಹಾಕುತ್ತದೆ. ಕಾಳುಕಡಿ ಆಸೆಗಾಗಿ ಆತನಡಿ ಸೆರಗು ಹಾಸುವ ಹೆಣ್ಣುಗಳಿಲ್ಲಿದ್ದಾರೆ. ಗೌಡತಿ ಲಿಂಗನನ್ನು ತನ್ನ ಕಾಮ ತೃಪ್ತಿಗಾಗಿ ಬಳಸಿಕೊಂಡ ತಪ್ಪಿಗೆ ಲಿಂಗ ಗೌಡನಿಂದ ಕೊಲೆಯಾಗುತ್ತಾನೆ. ಪತ್ನಿಯನ್ನು ಏನೂ ಮಾಡದೇ ಬಿಟ್ಟುಬಿಡುತ್ತಾನೆ. ಅವಳ ಬಯಕೆ ಬೆಳೆಯುತ್ತಾ ಹೊರಟಂತೆ ಆ ಬಯಕೆಯ ಈಡೇರಿಕೆಗಾಗಿ ಲಿಂಗನ ಮಗನನ್ನು ಆಕೆ ಬಳಸಿಕೊಳ್ಳುತ್ತಾಳೆ. ಅವಳ ಈ ಕ್ರಿಯೆ ಈತನಿಗೂ ಸಿಕ್ಕ ನೆಲೆಯನ್ನು ತಪ್ಪಿಸುತ್ತದೆ. ಕೆಳವರ್ಗದ ಗಂಡುಗಳನ್ನು ತನ್ನ ಕಾಮದಾಸೆಯ ಪೂರೈಕೆಗಾಗಿ ಬಳಸುವ ಗೌಡತಿ ಆ ಮೂಲಕ ಗೌಡನ ಸ್ವೇಚ್ಛೆಯನ್ನು ಪ್ರತಿಭಟಿಸುತ್ತಲೇ ಕೆಳವರ್ಗದ ಗಂಡುಗಳಿಗೆ ಸಿಕ್ಕ ನೆಲೆಯನ್ನು ತಪ್ಪಿಸುತ್ತಾಳೆ. ಗೌಡ ನಾಶ ಮಾಡಬಯಸಿದ ಮಾದಿಗರ ಹುಡುಗನಿಂದಲೇ ತನ್ನ ಮಡದಿಯಲ್ಲಿ ವಂಶದ ಕುಡಿ ಬೆಳೆಯುವುದು ಅರ್ಥಪೂರ್ಣವಾಗಿದೆ. ಸಗೋತ್ರ ಸಂಬಂಧದಿಂದ ಉಂಟಾದ ಬಂಜೆತನ ಅನ್ಯಗೋತ್ರ ಸಂಬಂಧದಿಂದ ಫಲವತ್ತಾಗುತ್ತದೆ. ಇಷ್ಟು ಈ ಕಥೆಯ ಹಂದರ. ಗೌಡನ ಆಮಿಷಕ್ಕೆ ಬಲಿಯಾಗಿ ಕರಿಯ ತನ್ನ ಪತ್ನಿಯನ್ನು ಕರಿಗೌಡನಿಗೆ ಒಪ್ಪಿಸಿಬಿಡುವ ಘಟನೆ "ಮೂಡಲು ಹರಿಯಿತು" ಕಥೆಯಲ್ಲಿ ಚಿತ್ರಿಸಲ್ಪಟ್ಟಿದೆ. ವಿವಾಹಕ್ಕೆ ಮುಂಚೆ ಆಕೆ ಮತ್ತು ಗೌಡನ ನಡುವೆ ಇದ್ದ ಸಂಬಂಧದ ಸುದ್ದಿ ಗೊತ್ತಾದಾಗ, ಮನ ಬಂದಂತೆ ಅವಳನ್ನು ನಿಂದಿಸಿದ ಕರಿಯ, ವಿವಾಹದ ನಂತರ ತಾನೇ ಅವಳನ್ನು ಅವಳ ಮೊದಲ(ಮಾಜಿ) ಪ್ರಿಯಕರನಾದ ಕರಿಗೌಡನಿಗೆ ಒಪ್ಪಿಸುವಲ್ಲಿ 'ಹಣ' ಕೆಲಸಮಾಡುತ್ತದೆ. ನೀತಿಯ ಪ್ರಶ್ನೆ ಇಲ್ಲಿ ಹಿಂದಾಗುತ್ತದೆ. ಮಾದರ ಭೀಮಕ್ಕನ ಮಗಳು ಚೆಲುವಿ ಮೈನೆರದ ಸುದ್ದಿ ಊರವರ ಬಾಯಿಯ ತೀಟೆ ತೀರಿಸುವ ಮಾತುಗಳಿಗೆ ಒಳಗಾಗುವಲ್ಲಿ ಕೆಳವರ್ಗದ ಹೆಣ್ಣುಗಳನ್ನು ಸಾರ್ವಜನಿಕ ಸೊತ್ತುಗಳಂತೆ ಭಾವಿಸುವ ಅಂಶ ಗೋಚರಿಸುತ್ತದೆ. ಕೆಳವರ್ಗದ ಹೆಣ್ಣುಗಳು ಇಲ್ಲಿ ಮೇಲ್ವರ್ಗದ ಗಂಡುಗಳ ತೊತ್ತುಗಳಾಗಿ ನರಳುತ್ತಾ ಬಂದಿದ್ದು, ಸಂಪ್ರದಾಯಗಳಲ್ಲಿ ಅಚಲವಾದ ನಂಬಿಕೆಯಿಟ್ಟುಕೊಂಡು ಬರುವ ಕೆಳವರ್ಗದ ಮುಗ್ಧ ಜನ, ಆ ನಂಬಿಕೆಗಳೇ ಅವರನ್ನು ಶೋಷಕವಾಗಿ ಕಾಡುವ ಪರಿ ಎಲ್ಲವೂ ಚಿತ್ರಣಗೊಳಪಡುತ್ತವೆ. ಇವೆಲ್ಲ ಅಂಶಗಳನ್ನು ಗಮನಿಸಿದಾಗ ಅಮರೇಶ ನುಗಡೋಣಿಯವರ ಮನೋಭಾವ ಮೂಲತಃ ಬಂಡಾಯ ಪ್ರವೃತ್ತಿಯದು ಎಂದು ಖಚಿತವಾಗುತ್ತದೆ. ಅವರ ಧೋರಣೆ ಕೇವಲ ಮಾತುಗಾರಿಕೆಯಾಗದೇ ಕ್ರಿಯಾರೂಪಕ್ಕಿಳಿದ ಕಲೆಯಾಗಿದೆ, ಪ್ರಾದೇಶಿಕತೆಯನ್ನು ಮೀರಿ ಬರೆದ ಶೈಲಿ ಎಲ್ಲರೂ ಮೆಚ್ಚುವಂತಾದ್ದಾಗಿದೆ.

ಹೈದರಾಬಾದ್ ಕರ್ನಾಟಕದ ವಕ್ತಾರ ಶಾಂತರಸ ಹೈದರಾಬಾದ್ ಕರ್ನಾಟಕ ಪ್ರದೇಶದ ಕಥೆಗಾರರಲ್ಲಿ ಇತರರಿಗಿಂತ ವಿಭಿನ್ನ ಕತೆಗಾರರಾಗಿ ಕಾಣಿಸಿಕೊಂಡವರು ಶಾಂತರಸರು. ಇದಕ್ಕೆ ಇವರ ಕಥೆಗಳ ವಿಷಯವಸ್ತುವೇ ಕಾರಣ. ಇವರ ಕಥೆಗಳಲ್ಲಿ ಮನುಷ್ಯನ ಮೂಲ ಪ್ರವೃತ್ತಿಗಳ ಶೋಧನೆ, ಮನಶಾಸ್ತ್ರಜ್ಞರಂತೆ ಮಾನವ ಸ್ವಭಾವಗಳ ವೈರುಧ್ಯಗಳನ್ನು ಕುರಿತ ಚಿಂತನೆ, ಇತಿಹಾಸಕಾರರಂತೆ ಚರಿತ್ರೆಯನ್ನು ಕಟ್ಟಿಕೊಡುವುದು ವಿರೋಧಗಳಿಲ್ಲದ ನಿರ್ಲಿಪ್ತ ನಿಲುವು ಮುಂತಾದ ಅಂಶಗಳು ಮುಖ್ಯವಾಗಿ ಕಂಡುಬರುತ್ತವೆ.

ಕಥೆಗೆ ವಸ್ತು ಯಾವುದೇ ಇರಲಿ ಅದರಲ್ಲಿ ಇವರ ಮನಸ್ಸು, ಸಾಮಾಜಿಕ ಬದುಕು, ಚೆನ್ನಾಗಿರಬೇಕೆಂಬುದರ ತುಡಿತ, ದೇಶಾಭಿಮಾನ, ನೈತಿಕ ಅವನತಿ, ಲೈಂಗಿಕತೆ, ಶೋಷಣೆ, ವ್ಯಕ್ತಿಯಲ್ಲಿನ ಆಕ್ರಮಣಕಾರಿ ವರ್ತನೆ, ಊಳಿಗಮಾನ್ಯ ವ್ಯವಸ್ಥೆಯ ಸಂಗತಿಗಳು, ವ್ಯಕ್ತಿ ದೌರ್ಬಲ್ಯ ಸಣ್ಣತನ, ಸೋಲು, ಸ್ವಾರ್ಥಪರತೆ, ಆತ್ಮಹತ್ಯೆ, ಸ್ವಾತಂತ್ರ್ಯಪ್ರಿಯತೆ, ಗ್ರಾಮೀಣ ಪರಿಸರ ಇವೇ ಸಂಗತಿಗಳು ಇವರ ಕಥೆಗಳಲ್ಲಿ ಪದೆ ಪದೆ ಬರುತ್ತದೆ.

ಶಾಂತರಸರ 'ಮಲ್ಲಮ್ಮ' 'ಬಡೇಸಾಬು ಪುರಾಣ' ಮುಂತಾದವು ಕನ್ನಡದ ಅಮೂಲ್ಯ ಕಥೆಗಳು"[೨೨] ಸಮಕಾಲೀನ ಲೇಖಕರನ್ನು ಸರಿಗಟ್ಟಿ ನಿಲ್ಲುವ ಯೋಗ್ಯತೆಯನ್ನು ಶಾಂತರಸರು ಪಡೆದುಕೊಂಡಿದ್ದಾರೆ. ಇತಿಹಾಸಕಾರರಿಗೆ ಮತ್ತು ಮನೋವಿಜ್ಞಾನಿಗಳಿಗೆ ಸಾಮಾಗ್ರಿ ಒದಗಿಸುವ ಇವರ ಕಥೆಗಳು ಬೇರೆ ಬೇರೆ ನಿಟ್ಟಿನಿಂದಲೂ ಅಧ್ಯಯನಕ್ಕೊಳಪಡಿಸಿ ಪರ್ಯಾಯ ಸಂಸ್ಕೃತಿಯನ್ನು ಕಟ್ಟಿಕೊಳ್ಳಬಹುದಾಗಿದೆ.

ಒಂದೇ ಘಟನೆ ಆವರ್ತನಗೊಳ್ಳುವುದು ಬಹಳ ಕಡಿಮೆ, ಒಂದೇ ರೀತಿಯ ವಿಚಾರಗಳನ್ನು ಪ್ರತಿಪಾದಿಸುವ ಘಟನೆಗಳು ಆವರ್ತನಗೊಳ್ಳುತ್ತವೆ. ಇಲ್ಲಿಯ ಕಥೆಗಳಲ್ಲಿ ಆವರ್ತನ ಅನಿವಾರ್ಯ ಅಂಶವಾಗಿ ಕಂಡುಬರುತ್ತದೆ. ಉದಾ: ಆತ್ಮಹತ್ಯೆ ಸಂಗತಿ, ಹಾದರ, ವೃದಾಂತ ಇತ್ಯಾದಿ.

ಶಾಂತರಸರ ಕಥೆಗಳಲ್ಲಿ ಸಾವಿಗೆ ಯತ್ನಿಸುವ ಪಾತ್ರಗಳಿವೆ. ಒಂದು: ಬಲತ್ಕಾರಕ್ಕೆ ಒಳಗಾದ ಹೆಣ್ಣು ಚೆನ್ನವ್ವ (ಸ್ವಾತಂತ್ರ್ಯ ವೀರ) ಇನ್ನೊಂದು: ತನ್ನ ಮೇಲೆ ಬಲತ್ಕಾರ ನಡೆಯುವುದೆಂದು ಖಾತರಿಯಾದ ಮೇಲೆ ನೇಣು ಹಾಕಿಕೊಂಡು ಆತ್ಮಹತ್ಯೆಗೆ ತೊಡಗುವುದು (ರಾಮವ್ವ-ಬಡೇಸಾಬು ಪುರಾಣ) ಇತ್ಯಾದಿ ಪಾತ್ರಗಳಿವೆ. ಆತ್ಮಹತ್ಯೆಗೆ ಯತ್ನಿಸುವ ಈ ಪಾತ್ರಗಳು ವ್ಯವಸ್ಥೆಯಲ್ಲಿನ ದುಷ್ಟತನ ಶೋಷಣೆ. ಅತ್ಯಚಾರ, ನೀಚತನಕ್ಕೆ ಬಲಿಯಾಗುವ ಸಂಕೇತವನ್ನು ಸೂಚಿಸುತ್ತವೆ

ಇದೇ ರೀತಿಯಾಗಿ 'ರೋಗಿ' ಕಥೆಯಲ್ಲಿ ಸಾವಿತ್ರಿ ಮತ್ತು 'ಸಾವು ಸತ್ತಾಗ' ಕಥೆಯಲ್ಲಿ ಈರಣ್ಣ ಆತ್ಮಹತ್ಯೆಯ ಪ್ರಸ್ತಾಪ ಮಾಡುತ್ತಾರೆ. ಈರಣ್ಣನಂತೂ ಎರಡು ಸಲ ಆತ್ಮಹತ್ಯೆಗೆ ಪ್ರಯತ್ನಿಸಿ ತನ್ನ ಮನಸ್ಸಿಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಾನೆ.

ವ್ಯಕ್ತಿ ಎಷ್ಟೇ ಧೈರ್ಯ ಶಾಲಿಯಾಗಿದ್ದರೂ ಕಠಿಣ ಪ್ರಸಂಗಗಳನ್ನು ಎದುರಿಸುವಾಗ ಅವನ ಮುಂದೆ "ಸೋಲು ಮತ್ತು ಸಾವು ಹಾಯ್ದು" ಹೋಗುತ್ತವೆ. ಕ್ರಿಯಾಶೀಲ ಮನಸ್ಸು ಸೋಲನ್ನು ಸ್ವೀಕರಿಸದೆ. ಕ್ಷಣ ಹೊತ್ತು ಸಾವನ್ನು ಬಯಸುತ್ತದೆ. ಸಾವನ್ನು ಬಯಸುವ ಈ ಮಾನಸಿಕ ಕ್ರಿಯೆ ಮನುಷ್ಯನ ವ್ಯಕ್ತಿತ್ವದ ಒಂದು ಭಾಗವಾಗಿದೆ. ಬಂದು ಹೋಗುವ ಇಂಥ ಬಯಕೆಗಳೇ ಬದುಕನ್ನು ರೂಪಿಸಿಕೊಳ್ಳುವ ಸಾಮಥ್ಯವನ್ನು ಕಟ್ಟಿಕೊಡುತ್ತವೆ.

ಶಾಂತರಸರ ಕಥೆಗಳಲ್ಲಿ 'ಹಾದರ'ದ ವಸ್ತು ಹೆಚ್ಚಾಗಿ ಪುನರಾವರ್ತನೆಗೊಳ್ಳುತ್ತದೆ. ಆದರೆ ಇದು ಕೇವಲ ಅಗ್ಗದ ಆಕರ್ಷಣೆಯ ತಂತ್ರವಾಗಿ ಬರದೆ, ಬದುಕಿನ ಅನಿವಾರ್ಯತೆಯ ಪ್ರಸಂಗವಾಗಿ ಪಾತ್ರಗಳಲ್ಲಿ ತರುತ್ತಾರೆ. ಅವರ ಕಥೆಗಳಲ್ಲಿ ಈ ವಸ್ತು ಆವರ್ತನಗೊಳ್ಳುವುದಕ್ಕೆ ಕಾರಣವನ್ನು ಕೇಳಿದಾಗ "ನನ್ನ ಸುತ್ತಮುತ್ತ ಅಂಥ ಜನರಿದ್ದರು, ಅಂಥ ಬದುಕಿತ್ತು. ಅಷ್ಟೇ ಅಲ್ಲ ಹೊಟ್ಟೆಪಾಡಿಗಾಗಿ ಅನಿವಾರ್ಯವಾಗಿ ಇಂಥ ಬದುಕು ಸಾಗಿಸುವ ಸ್ಥಿತಿಯೂ ನನಗೆ ನೋವಿನ ಸಂಗತಿಯಾಗಿ ಕಾಡಿತ್ತು"[೨೬] ಅದನ್ನೇ ಅಭಿವ್ಯಕ್ತಿಸಿದೆನೆಂದು ತಾವೇ ಹೇಳಿಕೊಂಡಿದ್ದಾರೆ.

ಬಡೇಸಾಬು ಪುರಾಣ ಕಥೆಯ ಪೋಲಿಸಗೌಡ ತನ್ನ ತಮ್ಮನ ಹೆಂಡತಿಯ ಜೊತೆಗೆ ಅನೈತಿಕ ಸಂಬಂಧ ಹೊಂದಿರುತ್ತಾನೆ. "ನೀನೇನು ಕಮ್ಮಿ, ತಮ್ಮನ ಹೆಣ್ತೀನ್ನ ಇಟಗೊಂಡವ! ಸಲೀಸಾಗಿ ಇಂತ ಹೆಣ್ಣುಗಳು ಸಿಕ್ರೆ ಬಿಟ್ಟೀಯಾ? ಯಂಕಪ್ಪನ ಗಂಟಲದಲ್ಲಿಯೇ ಈ ಮಾತು ಉಳಿದವು"[೨೭]

ಹೀಗೆ ಅನೇಕ ಹಾದರದ ಸಂಕೀರ್ಣ ಸಂಬಂಧಗಳು ಕಥೆಗಳಲ್ಲಿ ಬರುತ್ತವೆ. ಬದುಕಿನ ಅನಿವಾರ್ಯ ನೆಲೆಯಾದ ಲೈಂಗಿಕತೆ ಶಾಂತರಸರ ಕಥೆಗಳಲ್ಲಿ ಆವರ್ತನಗೊಂಡಿದೆ.

ಬಡೇಸಾಬು ಪುರಾಣ ಶಾಂತರಸರಿಗೆ ಕೀರ್ತಿ ತಂದು ಕೊಟ್ಟ ಕಥೆ ಇದು ಸಣ್ಣ ಕತೆಯ ಪರಿಮಿತಿ ಮೀರಿ ಕಿರಿಯ ಕಾದಂಬರಿಯ ಹರವು ಪಡೆದಿದೆ, "ಬಡೇಸಾಬು ಪುರಾಣ ಗಡಿನಾಡ ಮಹಾಕಾವ್ಯ"[೨೮] ಎಂತಲೂ (ಹಾ.ತಿ.ಕೃಷ್ಣಗೌಡರು ತಮ್ಮ ಪತ್ರದಲ್ಲಿ ಹೇಳಿದ್ದಾರೆ) ಫ್ಯೂಡಲ್ ವ್ಯವಸ್ಥೆಯನ್ನು ಚಿತ್ರಿಸುವ ಕಥೆ. ಈ ವ್ಯವಸ್ಥೆಯ ಕರಾಳತೆ, ವಿಕೃತ ಚಟುವಟಿಕೆಗಳನ್ನು ವಾಸ್ತವಿಕ ನೆಲೆಯಿಂದ ಚಿತ್ರಿಸಿ ಕಥೆಗಾರರು ಯಶಸ್ವಿಯಾಗಿದ್ದಾರೆ.

ಹತ್ತಿ ವ್ಯಾಪಾರಕ್ಕೆಂದು ರಂಗಾಪುರಕ್ಕೆ ಬರುವ ಬಡೇಸಾಬು, ಬಡ್ಡಮ್ಮನ ಸಲುವಾಗಿ ಅಲ್ಲಿಯೇ ನೆಲೆವೂರುವನು. ಮುಂದೆ ಕಿರಾಣಿ ಅಂಗಡಿ ಹಚ್ಚಿ ದಲಿತ ಹಿಂದುಳಿದವರಿಗೆ ಸಾಲ ಕೊಟ್ಟು ಅವರ ಮೇಲೆ ಹಿಡಿತ ಸಾಧಿಸುವನು. ಕ್ರಮೇಣ ಸೆರೆ ಅಂಗಡಿ ಮಾಂಸದ ಅಂಗಡಿಗಳನ್ನು ಪ್ರಾರಂಭಿಸಿ ಊರಿನ ಆರ್ಥಿಕ ವ್ಯವಸ್ಥೆಯನ್ನು ಕೈವಶ ಮಾಡಿಕೊಳ್ಳುತ್ತಾನೆ. ಊಗಗೌಡ ಸಾಹುಕಾರರ ದೌರ್ಬಲ್ಯ ತಿಳಿದುಕೊಂಡ ಬಡೇಸಾಬು ಆರ್ಥಿಕವಾಗಿ ಬೆಳೆದು ನಿಲ್ಲುತ್ತಾನೆ. ಕರ್ಯ, ತಿಮ್ಮ, ಜಂಗಲೆಪ್ಪ, ಸಲೀಮ

ಮುಂತಾದ ಪುಂಡರ ನಿಂಗಿಯ ಸಂಬಂಧ ಹಾಗೂ ಆನಂತರ ಹಣ ಪಡೆಯುತ್ತಾನೆ. ಮೊದಲು ಬುಡ್ಡಮ್ಮ ಆಮೇಲೆ ನಿಂಗಿಯ ಸಂಬಂಧ ಬೆಳೆಸಿ, ಆನಂತರ ಹಣ ಆಸೆ ತೋರಿಸಿ ಸಿಕ್ಕ ಸಿಕ್ಕ ಹೆಣ್ಣುಗಳನ್ನು ಭೋಗಿಸುತ್ತಾನೆ. ಇಷ್ಟಿದ್ದರೂ ಯಾರೂ ಬಡೇಸಾಬನ ವಿರುದ್ಧ ನಿಲ್ಲುವ ಧೈರ್ಯ ಮಾಡುವುದಿಲ್ಲ.

ಬಡೇಸಾಬುನ ಹತ್ತಿರ ಹಣ ಹಾಗೂ ಚಾಣಾಕ್ಷತನ ಇರುವುದರಿಂದ ಯಾವಾಗ? ಎಲ್ಲಿ ಹೇಗೆ ಕೆಲಸ ಮಾಡಿಕೊಳ್ಳಬೇಕೆಂಬುದನ್ನು ಅರಿತಿದ್ದ. ಊರಲ್ಲಿ ಹಬ್ಬಗಳು, ಉತ್ಸವಗಳು ಬಡೇಸಾಬನಿಲ್ಲದೆ ನಡೆಯುವಂತಿಲ್ಲ ಎನ್ನುವಷ್ಟರ ಮಟ್ಟಿಗೆ ಅನಿವಾರ್ಯವಾದನು. ಇದರೊಂದಿಗೆ ಪುಂಡಾಟಿಕೆ ಹೆಚ್ಚಿ ಮಾದರಗೇರಿಯ ನಾಲ್ವಾರು ಹೆಣ್ಣುಗಳಲ್ಲಿ ಮಲಗಿದ, ಪೂಜಾರಿ ಮಗಳು– ಮಲ್ಲವ್ವ ಅಂಗಡಿಗೆ ಬಂದಾಗ ಕೈಹಿಡಿದು ಜಗ್ಗಿದ, ಬಣಜಿಗರ ರಾಮವ್ವಳಿಗೆ ಹರಳು ಹೊಡೆದ, ಇದಕ್ಕೆಲ್ಲಾ ಊರಿನವರು ಬೇಸತ್ತು ಹೋಗುವರೇ ವಿನಃ ಅವನ ವಿರುದ್ಧ ಏನೂ ಮಾಡದ ಅಸಹಾಯಕರಾಗುತ್ತಾರೆ. ಆಗ ಇವನ ಅನ್ಯಾಯವನ್ನು ನುಂಗುತ್ತಾರೆ ಹೊರತು ಎದುರಿಸುವಂತಿರಲಿಲ್ಲ. ಮುಂದೆ ಊರನ್ನು ಎರಡು ಗುಂಪುಗಳಾಗಿ ಮಾಡಿ, ಅವುಗಳ ಸಂಘರ್ಷದ ಲಾಭಪಡೆದ ವ್ಯಕ್ತಿ ಮಾತ್ರ ತಾನಾಗುತ್ತಾನೆ.

ಹೀಗೆ ಬಡೇಸಾಬು ವ್ಯಾಪಾರಕ್ಕಾಗಿ ಬಂದು, ಆರ್ಥಿಕವಾಗಿ ಬೆಳೆದು ಊರಿನ ಎಲ್ಲ ಅಧಿಕಾರವನ್ನು ಕಬಳಿಸಿ, ಕರಾಳ ಶಕ್ತಿಯಾಗಿ ಬೆಳೆದು, ಕ್ರೌರ್ಯದ ಪ್ರತಿರೂಪವಾಗಿ ಬೆಳೆದು ನಿಲ್ಲುತ್ತಾನೆ. ಮೊದಮೊದಲು ವಿರೋಧಿಗಳನ್ನು ನಾಶಮಾಡಿ, ಆನಂತರ ತನಗೆ ಸಹಾಯ ಮಾಡಿದವರನ್ನು ನುಂಗುವ ಫ್ಯೂಡಲ್ ಗುಣ ಬಡೇಸಾಬು ರೂಢಿಸಿಕೊಂಡನು.

ಶಾಂತರಸರು ಇಲ್ಲಿ ವ್ಯಕ್ತಿಯ ಲೈಂಗಿಕ ಬದುಕನ್ನು ಪ್ರೇಮ, ಕಾಮ ಮತ್ತು ಹಾದರ ಈ ಮೂರು ನೆಲೆಗಳಲ್ಲಿ ಶೋಧನೆಗೊಳಪಡಿಸಿದ್ದಾರೆ. "ಶಾಂತರಸರ ಕಥೆಗಳು ಮೇಲ್ನೋಟಕ್ಕೆ ಹಾದರದ್ದೆಂದು ತೋರುತ್ತವೆ. ಆದರೆ ಗಂಭೀರವಾಗಿ ಪರಿಶೀಲಿಸಿದರೆ, ಊಳಿಗಮಾನ್ಯ ಸಂಸ್ಕೃತಿಯೊಳಗಿನ ಗಂಡು ಹೆಣ್ಣಿನ ವಿಲಕ್ಷಣ ಸಂಬಂಧಗಳ ಸ್ವರೂಪವನ್ನು ಈ ಕಥೆಗಳಲ್ಲಿ ಕಾಣಬಹುದಾಗಿದೆ."[೨೮] ಸಿಗ್ಮಂಡ ಫ್ರೈಡನ 'ಈಡಿಪಸ್ ಕಾಂಪ್ಲೆಕ್ಸ್' ಮತ್ತು ಎಲಕ್ಟ್ರಾ ಕಾಂಪ್ಲೆಕ್ಸ್' ಗಳ ಮಾದರಿಗಳು ಶಾಂತರಸರ ಕಥೆಗಳಲ್ಲಿ ದೊರೆಯುತ್ತವೆ. ಇವುಗಳ ಮೂಲಕ ಜಮೀನ್ದಾರಿ ವ್ಯವಸ್ಥೆಯ ಆಳ ನೆಲೆಗಳನ್ನು ಶೋಧಿಸುತ್ತಾರೆ. ಇಲ್ಲಿನ ಪಾತ್ರಗಳು ಲೈಂಗಿಕತೆಯನ್ನು ಪಾಪವೆಂದು ಭಾವಿಸುವುದಿಲ್ಲ. ಇದು ಜನರ ಮನಸ್ಸಿನಿಂದ ಮಹತ್ವವನ್ನು ಕಳೆದುಕೊಂಡು ಸಹಜ ಸ್ಥಿತಿಗೆ ಒಗ್ಗಿ ಬಿಟ್ಟಿರುತ್ತದೆ. ಆ ವ್ಯವಸ್ಥೆಯಿಂದ ಕಳಚಿಕೊಂಡ ನಾವು ಅವುಗಳಿಗೆ 'ಹಾದರ'ವೆಂದು ಕರೆಯುತ್ತೇವೆ.

ಸಾಮಾಜಿಕ ಲೈಂಗಿಕ ಬದುಕನ್ನು ಅರ್ಥೈಸುವ ಮತ್ತು ಸಂಬಂಧಗಳನ್ನು ಕಟ್ಟಿಕೊಡುವ ಶಾಂತರಸರು ಮನಃಶಾಸ್ತ್ರಜ್ಞನಂತೆ ಮನುಷ್ಯನ ಅಂತರ್ಯವನ್ನು ಶೋಧಿಸಿ ಕಲಾತ್ಮಕ ಚಿತ್ರ ನೀಡುತ್ತಾರೆ.

ಮನುಷ್ಯ ಎಂಥ ಸಂಭಾವಿತನೇ ಆಗಿರಲಿ, ಕಾಮುಕನೇ ಆಗಿರಲಿ ಅವನು ಒಂದು ಹೆಣ್ಣನ್ನು ಕಂಡಾಕ್ಷಣದ ಮನೋಸ್ಥಿತಿಯ ಯಥಾವತ್ತಾದ ಚಿತ್ರಣ ನಮ್ಮ ಮುಂದಿಡುತ್ತಾರೆ. ೧೯೭೦ ರಿಂದ ಈಚೆಗೆ ಬರೆದ ಕಥೆಗಳಲ್ಲಿ ಕಾಮ ಸಂಬಂಧಿ ವಿವರಗಳು ಜಾಸ್ತಿಯಾಗಿ ಬಂದಿವೆ. 'ಗೋದಾನ'. 'ಮುತ್ತುಗಳನಾಯ್ದು ಕೊಡಲೇ'? ಈ ಎರಡು ಕಥೆಗಳನ್ನು ಹೊರತುಪಡಿಸಿ ಎಲ್ಲ ಕಥೆಗಳು ಇದೇ ವಸ್ತುವಿನಿಂದ ತುಂಬಿಕೊಂಡಿವೆ.

ಒಟ್ಟಿನಲ್ಲಿ 'ಕಾಮ' ಒಂದು ಅನಿವಾರ್ಯ ಅಂಶವೆಂಬುದನ್ನು ಯಾರೂ ಅಲ್ಲಗೆಳೆಯಲಿಕ್ಕಾಗದು ಅದನ್ನು ಬಿಟ್ಟು ಬದುಕಲಿಕ್ಕೂ ಸಾಧ್ಯವಾಗದು. ಅದರ ಹಿತಮಿತ ಬಳಕೆಯಿಂದ ಬದುಕು ಸುಂದರಗೊಳಿಸಿಕೊಳ್ಳಬಹುದೆಂದು ಶಾಂತರಸರು ತಮ್ಮ ಕಥೆಗಳಲ್ಲಿ ತೋರಿಸಿಕೊಟ್ಟಿದ್ದಾರೆ.

## ಟಿಪ್ಪಣಿಗಳು

೧. ಬುದ್ಧಿ-ಭಾವ-ಬದುಕು: ಲೇ, ನಿರಂಜನ, ಪು. ೨೦

೨. ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ: ಲೇ, ಮಲ್ಲಿಕಾಘಂಟಿ, ಪು. ೨೩

೩. ಕಥೆ ಮತ್ತು ಕಥಾವಸ್ತು: ಲೇ, ಎಸ್.ಎಲ್.ಭೈರಪ್ಪ, ಪು. ೨೪

೪. ಕುತ್ತದಲ್ಲಿ ಕುದ್ದವರ ಕಥೆಗಳು: ಲೇ, ಚನ್ನಣ್ಣ ವಾಲೀಕಾರ, ಪು. ೨೪

೫. ಅಂತರ: ಲೇ, ಸೂಗಯ್ಯ ಹಿರೇಮಠ, ಪು. ೭೦

೬. ಕಾಡು ಪ್ರೀತಿ ಮತ್ತು ನಾನು: ಲೇ, ಚಿತ್ರಶೇಖರ ಕಂಠಿ, ಪು. ೫೪

೭. ಹಬ್ಬ ಮತ್ತು ಬಲಿ: ಲೇ, ಬಿ.ಟಿ.ಲಲಿತಾ ನಾಯಕ, ಪು. ೬೭

೮. ಬಿಸಿಲ ಹನಿಗಳು: ಲೇ, ಅಮರೇಶ ನುಗಡೋಣಿ. ಪು. ೧೭೪

೯. ಅಂತರ: ಲೇ, ಸೂಗಯ್ಯ ಹಿರೇಮಠ, ಪು. ೫೬

೧೦. ಅದೆ, ಪು ೫೬

೧೧. ಹುಳುಗಳು: ಲೇ, ಸೂಗಯ್ಯ ಹಿರೇಮಠ, ಪು. ೫೪

೧೨. ಕಾಡು ಪ್ರೀತಿ ಮತ್ತು ನಾನು: ಲೇ, ಚಿತ್ರಶೇಖರ ಕಂಠಿ, ಪು. ೧

೧೩. ಅದೆ, ಪು. ೨

೧೪. ಹಬ್ಬ ಮತ್ತು ಬಲಿ: ಲೇ, ಬಿ.ಟಿ.ಲಲಿತಾ ನಾಯಕ, ಪು. ೧೦೩

೧೫. ಅಮೀನಪುರದ ಸಂತೆ: ಲೇ, ಮಲ್ಲಿಕಾರ್ಜುನ ಹಿರೇಮಠ, ಪು. ೧೦೩

೧೬. ಅದೆ, ಪು. ೮೯

೧೭. ಅದೆ, ಪು. ೮೦

೧೮. ನೇಪಥ್ಯ: ಲೇ, ಚಿತ್ರಶೇಖರ ಕಂಠಿ, ಪು. ೮

೧೯. ಹಬ್ಬ ಮತ್ತು ಬಲಿ: ಲೇ, ಬಿ.ಟಿ.ಲಲಿತಾ ನಾಯಕ, ಪು. ೯೮

೨೦. ಅದೆ, ಪು. ೩೮

೨೦. ಹಬ್ಬ ಮತ್ತು ಬಲಿ: ಲೇ, ಬಿ.ಟಿ.ಲಲಿತಾ ನಾಯಕ, ಪು. ೩೮

೨೧. ಅದೆ, ಪುಟ ೯೮

೨೨. ಮಣ್ಣು ಸೇರಿತು ಬೀಜ: ಲೇ, ಅಮರೇಶ ನುಗಡೋಣಿ, ಪು. ೨೦

೨೩. ಅದೆ, ಪು. ೩೧

೨೪. ಅದೆ, ಪು. ೮೫

೨೫. ಶಾಂತರಸರ ಸಮಗ್ರ ಕಥೆಗಳು: ಶಾಂತರಸ, ಪು. ೨೪೬

೨೬. ಅದೆ, ಪು. ೧೪೬

೨೭. ಅದೆ, ಪು. ೧೬೭

೨೮. ಅದೆ, ಪು. ೪೧೭

೨೯. ಬಂಡೇಸಾಬು ಪುರಾಣ ಒಂದು ಪರಿಶೀಲನೆ: ಲೇ, ಎಸ್.ಶಿವಾನಂದ ಸಂಕ್ರಮಣ, ಪು. ೪೩

◆◆◆

ಅಧ್ಯಾಯ : ಐದು

# ಕಥಾ ಸಾಹಿತ್ಯದಲ್ಲಿ ಮಹಿಳಾ ಸಂವೇದನೆ

ಭಾರತೀಯ ಸಂದರ್ಭದಲ್ಲಿ ಮಹಿಳಾ ಗುರುತರವಾದ ಐತಿಹಾಸಿಕ ಹೆಜ್ಜೆಗಳೇನನ್ನೂ ಇಡಲಿಲ್ಲ. ಅಥವಾ ಅವಳಿಟ್ಟ ಹೆಜ್ಜೆಗಳನ್ನು ದಾಖಲಿಸಲಾಗಲಿಲ್ಲ. ಇಡಿಯಾಗಿ ಆಲೋಚಿಸಿದಾಗ ಮನುಕುಲದ ಸಂಸ್ಕೃತಿಯನ್ನು ನಿರ್ಮಿಸುವಲ್ಲಿ ಮಹಿಳಾ ಪಾತ್ರಕ್ಕೆ ಸಿಗಬೇಕಾದ ಜವಾಬ್ದಾರಿಯನ್ನು, ಮೌಲ್ಯವನ್ನು ಗೌಣವೆಂದು ಪರಿಗಣಿಸಲಾಯಿತು. ವೇದಕಾಲದಲ್ಲಿ ಬೆರಳೆಣಿಕೆಯ ಮಹಿಳೆಯರನ್ನು ಬಿಟ್ಟರೆ ಇಡೀ ಚಾರಿತ್ರಿಕ ಘಟ್ಟಗಳನ್ನು, ಮಹಿಳಾ ಸಂವೇದನೆ ಸ್ಪರ್ಶಿಸಲೇ ಇಲ್ಲ. ಮಹಿಳೆಯನ್ನು ಆರಾಧಿಸುವಲ್ಲಿ ದೇವತೆಗಳು ವಾಸಿಸಿದರೋ ಇಲ್ಲವೋ ಅದು ಬೇರೆ ಮಾತು. ಆದರೆ ಅವಳ ಅಸ್ತಿತ್ವವಂತೂ ನಾಶವಾಯಿತು. ೧೯ನೇ ಶತಮಾನದಿಂದೀಚೆಗೆ ಎಚ್ಚರಗೊಂಡಿರುವ ಮಹಿಳಾಪ್ರಜ್ಞೆ ಇದುವರೆಗೂ ನಿರ್ಮಿತವಾದ ಸಮಾಜವಿಜ್ಞಾನ ಮತ್ತು ಜೀವವಿಜ್ಞಾನದ ಪಾತಳಿಗಳನ್ನೆಲ್ಲಾ ಪುನರ್ ವಿಮರ್ಶಿಸಲು ಒತ್ತಾಯಿಸುತ್ತದೆ.

ಶತಶತಮಾನಗಳಿಂದಲೂ ನಡೆದು ಬಂದಿರುವ ಸಾಮಾಜಿಕ ಬದುಕಿನ ಸಂಘರ್ಷದಲ್ಲಿ ಹೆಣ್ಣಿಗೆ ದೊರೆತಿರುವ ವಿಷಯದ ಗಳಿಗೆಗಳು ಅತ್ಯಲ್ಪ. ಇಂದು ಮಹಿಳೆ ಜಾಗೃತಳಾಗಿ ಚಿಂತನಗೆ ತೊಡಗಿ ಸಂಘಟಿತಳು ಆಗಿದ್ದಾಳೆ. ಸುಸಜ್ಜಿತ ಸಮಾಜದ ಸಶಕ್ತ ರಾಷ್ಟ್ರದ ನಿರ್ಮಾಣಕ್ಕೆ ಆಕೆಯೂ ಕೊಡುಗೆ ನೀಡುತ್ತಿದ್ದಾಳೆ.

ಇತ್ತೀಚಿನ ದಿನಗಳಲ್ಲಿ ಸಂವೇದನೆ ಎಂಬ ಪದ ಸಾಹಿತ್ಯಿಕ ಲೋಕದಲ್ಲಿ ತೀವ್ರ ಚಲಾವಣೆಗೊಳ್ಳುತ್ತಲಿದೆ. ಇದು ಸಮಾಜಿಕ ಜೀವನದ ಜಾತಿ, ವರ್ಗ, ಧರ್ಮಗಳ ಇರುವಿಕೆಯನ್ನು ವಾಸ್ತವದ ನೆಲೆಯಲ್ಲಿ ಗ್ರಹಿಸುತ್ತ ತನ್ನ ಸಿದ್ಧಾಂತರೂಪಿ ಬರಹಕ್ಕೆ ನೆರವನ್ನು ಪಡೆದುಕೊಂಡಿದೆ. ಸಂವೇದನೆ ಸಮಾಜವೊಂದರ ಆರ್ಥಿಕ ತಳಹದಿ. ಅದರ ಮೇಲಿನ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಸಂಗತಿಗಳು ವ್ಯಕ್ತಿಯೊಬ್ಬನಿಗೆ ಕೊಡಮಾಡಿದ ಅವಕಾಶಗಳ ಅನುಭವದ ಮೂಲಕ

ಹೊರಸೂಸಿದ ತಿಳುವಳಿಕೆ ಅಥವಾ ಅನಿಸಿಕೆ ಎಂದು ಸಾಮಾನ್ಯ ಪರಿಭಾವಿಸುವಿಕೆ ಆಗಿದೆ. ಆಧುನಿಕವೆಂದೆನಿಸಿಕೊಂಡ ನೋಟ ನಮ್ಮಲ್ಲಿ ಉಂಟುಮಾಡಿದ ತಲ್ಲಣಗಳು ಚರಿತ್ರೆಯ ರಭಸಕ್ಕೂ ತಿರುಗಿರುವುದನ್ನು ಗಮನಿಸಬಹುದು.

ಕನ್ನಡ ಸಾಹಿತ್ಯದಲ್ಲಿ ಹೆಣ್ಣಿನ ಕುರಿತು ಪುರುಷರು ಬರೆದದ್ದು, ಹೆಣ್ಣು ಹೆಣ್ಣಿನ ಕುರಿತು ಬರೆದಿದ್ದು ಬೇಕಾದಷ್ಟಿದೆ. ಇದನ್ನೇ ಇತ್ತೀಚೆಗೆ ವಿಭಿನ್ನ ದೃಷ್ಟಿಯಿಂದ ಅಳೆದು ನೋಡಿ ಮಹಿಳಾ ಸಂವೇದನೆಗಳು ಎಂದು ಹೇಳಲಾಗಿದೆ. ಇಂಥ ಸಂದರ್ಭದಲ್ಲಿ ಒಂದು ಪ್ರಶ್ನೆ ಕಾಡುತ್ತದೆ. ಸಾಹಿತ್ಯದಲ್ಲಿ ಕಂಡುಬಂದ ಸಂವೇದನೆಗಳನ್ನು ಮಹಿಳಾ ಸಂವೇದನೆಗಳು ಎಂದು ತಾತ್ವಿಕವಾಗಿ ಕರೆಯಲಿಕ್ಕೆ ಸಾಧ್ಯವೆ? ಮೊದಲಿನಿಂದಲೂ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿನ ವ್ಯಕ್ತಿತ್ವವನ್ನು ತನ್ನ ಅನುಕೂಲಕ್ಕಾಗಿ ಸರಿ ಹೊಂದುವಂತೆ ಕಟೆದು ನಿಲ್ಲಿಸಲಾಗಿದೆ. ಹೀಗೆ ನಿರ್ಮಿಸಿದ ವ್ಯಕ್ತಿತ್ವದಲ್ಲಿ ಸ್ವಂತಿಕೆಯ ಪ್ರಶ್ನೆಯೇ ಇಲ್ಲವಾಗಿರುವುದು ಗಮನಾರ್ಹ. ಹೀಗಾಗಿ ಹೆಣ್ಣು ಸಂವೇದನೆಗಳು ಎಂದು ಕರೆಯಬಹುದಾದ ಅವಳದೇ ಆದ ಸಂವೇದನೆ, ಅನಿಸಿಕೆ, ಅನುಭವ, ತಿಳುವಳಿಕೆಗೆ ಇಂತಹ ಸಂಧಿಗ್ಧತೆಯಲ್ಲಿ ಸ್ಪಷ್ಟೀಕರಣಗೊಳಿಸುವುದು ಒಂದು ತೆರನಾದ ಸಂಕೀರ್ಣ ಸಂಗತಿಯಾಗಿದೆ. ಮಹಿಳೆ–ಪುರುಷ ಇವರೀರ್ವರ ಹೆಜ್ಜೆ ಗುರುತುಗಳಿಂದ ಕೂಡಿರುವ ಇತಿಹಾಸ ಸಮಷ್ಟಿ ಕೊನೆಯಲ್ಲಿ ಧ್ವನಿಸಬೇಕು. ಇದೊಂದು ಉದಾರವಾದ ಧೋರಣೆಯೆಂಬುದನ್ನು ಭಾವಿಸಲಾಗಿದೆ. ಅವನ, ಅವಳ ಅನುಭವ, ಅನಿಸಿಕೆಗಳ ವೈವಿಧ್ಯತೆ ಸೇರಿಕೊಂಡು ಮಹಿಳಾ–ವಾದ ರಚನೆಯಾಗಿದೆ.

ಈ ರೀತಿಯಾಗಿ ಒಂದು ಹೊಸ ವಿಚಾರಧಾರೆಯ ನೆರವಿನೊಂದಿಗೆ ಸಾಹಿತ್ಯ, ಸಮಾಜಗಳನ್ನು ಅರ್ಥೈಸಿಕೊಳ್ಳುವ ಸ್ಥಿತಿಯಲ್ಲಿ ಮಹಿಳೆಯ ಬಗ್ಗೆ ಬಂದಿದ್ದೆಲ್ಲವೂ ಮಹಿಳಾ ಸಂವೇದನೆ ಎಂದು ಹೇಳಲಾಗಿದೆ.

ಹೈದರಾಬಾದ್ ಕರ್ನಾಟಕದ ಕಥಾಸಾಹಿತ್ಯದಲ್ಲಿ ಈ ಭಾಗದ ಪ್ರಾದೇಶಿಕತೆಯನ್ನು ಮೈಗೂಡಿಸಿಕೊಂಡು ಸ್ತ್ರೀಯರು ಕೃಷಿಗೈದಿದ್ದಾರೆ. ಈ ಹಿನ್ನಲೆಯಲ್ಲಿ ಸ್ತ್ರೀ–ಚಿಂತನೆಯ ಕಥೆಗಳನ್ನು ಅನ್ವಯಿಸಿಕೊಂಡಿದೆ. ಇನ್ನೂ ಕೆಲವು ವರ್ಗದ ಮಹಿಳೆಯರು ಶೋಷಣೆಯ ಕೋಪದಿಂದ ಹೊರಬರಲಾಗದೇ ಅಲ್ಲಿಯೇ ಬಂಧಿಯಾಗಿರುವುದನ್ನು ಕಾಣಬಹುದು. ಪುರುಷ ಪ್ರಧಾನ ಈ ಚೌಕಟ್ಟಿನಲ್ಲಿ ಮಹಿಳೆ ಸಹಜವಾಗಿಯೇ ಹಲವು ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ.

**೫.೧ ಮಹಿಳಾ ಲೋಕದ ಸಮಸ್ಯೆಗಳ ಚಿತ್ರಣ:**

ಪುರುಷ ಸಮಾಜದಲ್ಲಿ ಮಹಿಳೆಯ ಸಮಸ್ಯೆಗಳು ಕುಟುಂಬದಿಂದಲೇ ಸೃಷ್ಟಿಯಾಗುತ್ತವೆ. ಕುಟುಂಬವು ಪುರುಷನಿಗಿಂತ ಮಹಿಳೆಗೆ ಹೆಚ್ಚು ಮಹತ್ವದ್ದೆಂದು ಪರಿಭಾವಿತವಾಗಿದೆ. ಮಹಿಳೆಗೆ ಸಂಬಂಧಿಸಿದ ಯಾವುದೇ ಚರ್ಚೆ ಕುಟುಂಬವನ್ನು ಹೊರತುಪಡಿಸಿ ನಡೆಯುವುದು ಅಸಾಧ್ಯ.

ಕಾರಣ ಅವಳ ಎಲ್ಲಾ ಚಟುವಟಿಕೆಗಳು ಕುಟುಂಬದ ಪರಿಧಿಯಲ್ಲೇ ಹೆಚ್ಚಾಗಿ ನಡೆಯುತ್ತವೆ. ಅವಳ ಬದುಕು ಕುಟುಂಬದ ಆಗು ಹೋಗುಗಳೊಂದಿಗೆ ಬೆರೆತು ಹೋಗಿರುತ್ತದೆ. ಅದಿಲ್ಲದೆ ಅವಳ ಬದುಕಿಲ್ಲ ಅಂದ ಮೇಲೆ ಮಹಿಳೆಯ ಕುರಿತು ಯಾವುದೇ ಅಧ್ಯಯನ ಕುಟುಂಬದಿಂದಲೇ ಆರಂಭವಾಗಬೇಕಾದುದು ಅನಿವಾರ್ಯವಾಗಬೇಕಾಗುತ್ತದೆ. ಈ ಕುಟುಂಬ ಸಂಸ್ಥೆಯ ಪ್ರವೇಶ ಮಹಿಳೆಗೆ ವಿವಾಹವೆಂಬ ಇನ್ನೊಂದು ಸಂಸ್ಥೆಯ ಮೂಲಕ ಆಗುತ್ತದೆ. ವಿವಾಹ ಮಹಿಳೆಯ ಬದುಕಿನ ಅನಿವಾರ್ಯವೆಂದು ಪಿತೃ ಸಂಸ್ಕೃತಿಯು ಕಡ್ಡಾಯಗೊಳಿಸಿದೆ. ಹೀಗೆ ಕಡ್ಡಾಯಗೊಂಡ ವಿವಾಹ ಮಹಿಳೆಯ ಬದುಕಿನ ಹತ್ತು ಹಲವು ಸಮಸ್ಯೆಗಳಿಗೆ ಕಾರಣವಾಗಿದೆ. ಎಲ್ಲಾ ಸಮಸ್ಯೆಗಳು ಹುಟ್ಟಿನಿಂದ ಸಾವಿನವರೆಗೆ 'ವಿವಾಹ' ಕೇಂದ್ರದ ಸುತ್ತವೇ ಸುತ್ತುತ್ತಿರುತ್ತವೆ. ಪುರುಷ ಚಿಂತನೆಯ ಸಮಾಜದಲ್ಲಿ ಮಹಿಳೆಗೆ ಇದೊಂದು ಅನಿವಾರ್ಯ ಈ ಅನಿವಾರ್ಯವನ್ನು ನಿರ್ವಹಿಸುವುದೇ ಮಹಿಳೆಯ ಬದುಕಿನ ಕಥೆ. ಇಷ್ಟವೊ ಅನಿಷ್ಟವೊ ಏನಿದ್ದರೂ ಮಹಿಳೆ ಈ ಕೇಂದ್ರವನ್ನು ಲಕ್ಷಿಸಿಯೇ ಬದುಕಬೇಕು. ಈ ಎಲ್ಲಾ ಅಂಶಗಳಿಗೂ ಹೈದರಾಬಾದ್ ಕರ್ನಾಟಕ ಪ್ರದೇಶದ ಕಥಾ ಸಾಹಿತ್ಯಕ್ಕೂ ನೇರವಾಗಿ ಅನ್ವಯಿಸುತ್ತವೆ. ಹೀಗೆ ಸೃಷ್ಟಿಯಾದ ಸಮಸ್ಯೆಗಳನ್ನು ಒಂದೊಂದಾಗಿಯೇ ಪರಸ್ಪರ ಸಂಬಂಧಿತವೆನಿಸುವಂತಹ ಹಲವು ಸಮಸ್ಯೆಗಳನ್ನು ಇಲ್ಲಿಯ ಕಥೆಗಳು ಚರ್ಚಿಸುತ್ತವೆ. ಈ ಸಮಸ್ಯೆಯ ಉಪಸಮಸ್ಯೆಗಳಾಗಿ ಬಾಲ್ಯವಿವಾಹ, ಪ್ರೇಮವಿವಾಹ, ಅಂತರ್ ಜಾತಿವಿವಾಹ, ವಿಧವಾ ವಿವಾಹಗಳ ಹೊಸ ಸಮಸ್ಯೆಗಳನ್ನು ಸೃಷ್ಟಿಮಾಡುತ್ತವೆ. ಈ ಸಮಸ್ಯೆಗಳಿಗೆ ನಿಶ್ಚಿತ ಪರಿಹಾರಗಳನ್ನು ಸೂಚಿಸುವುದು ಅಸಾಧ್ಯದ ಮಾತಲ್ಲ. ಎಚ್.ಎಸ್. ಶ್ರೀಮತಿಯವರ 'ವಿವಾಹ' ಕುರಿತು ವ್ಯಾಖ್ಯಾನ ಸಾಮಾಜಿಕ ಚಿಂತನೆ ಹಾಗೂ ಸಾಹಿತ್ಯ ಸೃಜನಶೀಲತೆಗಳು ವಿವಾಹ ಸಂಸ್ಥೆಯನ್ನು ಅರ್ಥೈಸುವಲ್ಲಿಯ ಅಸಮರ್ಪಕ ಅಥವಾ ಅಂಶಿಕ ನಿಲುವನ್ನು ಸ್ಪಷ್ಟಪಡಿಸುತ್ತದೆ. ಹೈದರಾಬಾದ್ ಕರ್ನಾಟಕ ಕಥಾಸಾಹಿತ್ಯವೂ ಇಂಥ ಸಾಮಾಜಿಕ ಚಿಂತನೆಯಿಂದ ಹೊರತಾದುದಲ್ಲ.

ಸಾಮಾಜಿಕ ಚಿಂತನೆಯಂತೆ ವ್ಯಕ್ತಿಯ ಬದುಕಿನಲ್ಲಿ ವಿವಾಹ ಅತ್ಯಂತ ಪ್ರಮುಖ ಘಟನೆ, ವಿವಾಹ ಸಂಸಾರದ ಅಡಿಪಾಯ ಅದು ಗಂಡು ಹೆಣ್ಣಿನ ಜೀವನದ ಮುಂದಿನ ಸಮಸ್ತ ಚಟುವಟಿಕೆಗಳಿಗೂ ಪ್ರಾರಂಭವನ್ನು ನೀಡುತ್ತದೆ. ಕುಟುಂಬ ಸಂಸ್ಥೆಗೆ ವಿವಾಹ ಸಂಸ್ಥೆಯೇ ಮೂಲ.

**ಕೌಟುಂಬಿಕ ಸಮಸ್ಯೆಗಳು:**

"ಪಿತೃಪ್ರಧಾನ ಸಮಾಜವು ಕುಟುಂಬವನ್ನು ಹೆಣ್ಣಿನ ಅತ್ಯಂತಿಕವೂ, ಸುರಕ್ಷಿತವೂ ಆದ ಸಾಮಾಜಿಕ ಸಂಸ್ಥೆ ಎಂದು ವ್ಯಾಖ್ಯಾನಿಸುತ್ತದೆ".[೧] ಕುಟುಂಬದ ಒಡತಿ ಮಹಿಳೆ ಎಂದು ವಿವರಿಸಲಾಗುತ್ತದೆ. ಆದರೆ ಕುಟುಂಬ ವ್ಯವಸ್ಥೆಯು ಪಿತೃಪ್ರಧಾನ ನಿರ್ದೇಶನಗಳ ಆಧಾರದ ಮೇಲೆ ರಚನೆಗೊಂಡದ್ದಾಗಿದ್ದು ಅಲ್ಲಿ ಮಹಿಳೆಯ ಸ್ಥಾನಮಾನ ಅವಕಾಶಗಳು ಪಕ್ಕಕ್ಕೆ ತಳ್ಳಲ್ಪಟ್ಟಿವೆ. ಮಹಿಳೆಯ ಮೇಲಿನ ದೌರ್ಜನ್ಯ ಅದರ ಸ್ಥಿರ ಮೌಲ್ಯವಾಗಿರುತ್ತದೆ. ಈ ದೌರ್ಜನ್ಯವನ್ನು ಪರಿಹರಿಸದೆ ಕೌಟುಂಬಿಕ

ವ್ಯಾಪ್ತಿಯಲ್ಲಿ ಮಹಿಳೆಯರು ಸುರಕ್ಷಿತರು ಎಂಬ ಅಭಿಪ್ರಾಯವನ್ನು ಸ್ವೀಕರಿಸುವ ಸ್ಥಿತಿಯಲ್ಲೂ ಇಲ್ಲ. ಕೌಟುಂಬಿಕ ಹಿಂಸೆಯ ಸಂದರ್ಭದಲ್ಲಿ ಸಾರ್ವಜನಿಕ ಅಭಿಪ್ರಾಯ ರೂಪಿಸುವುದನ್ನು ಕಾನೂನು ರಚನೆಯ ಅಗತ್ಯವನ್ನು ಯಾವುದೆ ಅನ್ಯ ಸಂಸ್ಥೆಯ ಮಧ್ಯಸ್ಥಿಕೆಯನ್ನು ನಿರಾಕರಿಸಲಾಗುತ್ತದೆ. ಕುಟುಂಬದೊಳಗಿನ ಕಲಹವು ಭೀಕರ ಸ್ವರೂಪವನ್ನು ತಲುಪಿದಾಗಲೂ ಇನ್ನೊಬ್ಬರ ಮಧ್ಯಸ್ಥಿಕೆಯು ಅನಗತ್ಯವೆನ್ನಲಾಗುತ್ತದೆ.

ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯ ಮತ್ತು ಹಿಂಸೆ ಪ್ರಧಾನವಾಗಿ ಗೃಹಿಣಿತ್ವ-ಸ್ತ್ರೀತ್ವವನ್ನೇ ಆಧರಿಸಿರುತ್ತವೆ. ಮೇಲ್ನೋಟಕ್ಕೆ ಇವುಗಳು ಮನೆಗೆ ಸಂಬಂಧಿದ್ದೆಂದು ಅನಿಸಿದರೂ ಬಹುಮುಖ್ಯವಾಗಿ ಈ ಪರಿಕಲ್ಪನೆಯು ಲೈಂಗಿಕತೆಯ ನಿರ್ಬಂಧದ ಒಳಗಡೆ ಸೃಷ್ಟಿಯಾಗಿದೆ. ಸಾಧಾರಣವಾಗಿ ಈ ಗೃಹಿಣಿತ್ವ, ಸ್ತ್ರೀತ್ವ ಲೈಂಗಿಕತೆಯ ಪ್ರಶ್ನೆಗಳೇ ದೌರ್ಜನ್ಯ ಮತ್ತು ಹಿಂಸೆಗಳಲ್ಲಿ ಕಂಡುಬರುತ್ತದೆ.

ಕುಟುಂಬ ಹಿಂಸೆ ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಪ್ರತಿನಿಧೀಕರಣಗೊಂಡುದನ್ನು ಮುಂದಿನ ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಸಂಧ್ಯಾ ಹೊನಗುಂಟಿಕರ ಅವರ 'ಬಾಲ ಕತ್ತರಿಸಿದರೆ ಡೊಂಕೆಲ್ಲಿ' ಕಥೆಯ ಪಾರಮ್ಮ, ಚಂದ್ರಕಾಂತ ಕುಸನೂರರ 'ಮಾಯೆ ಅಂದ್ರೆ ಮಾಯೆ' ಕಥೆಯ ರಾಚಮ್ಮ, ರಾಜಶೇಖರ ಹತಗುಂದಿಯವರ 'ಪೊರೆ ಕಳಚುವ ಪರಿ' ಕಥೆಯ ಶಾಣಮ್ಮ ಗೌಡ್ತಿ ಮೊದಲಾದ ಇಲ್ಲಿಯ ಮಹಿಳೆಯರು ಮನೆಯ ಜವಾಬ್ದಾರಿ ಹೊತ್ತು ನಿರ್ವಹಿಸುವವರಾದರೂ ಕುಟುಂಬ ಹಿಂಸೆಯಲ್ಲಿ ನರಳಿದವರು. ಬೇಜವಬ್ದಾರಿ, ದುಡುಕು, ಸಣ್ಣತನ, ಹೊರಚಾಳಿ ಇಲ್ಲಿಯ ಗಂಡಸರ ಮುಖ್ಯ ಲಕ್ಷಣಗಳು. ಸೋಮಾರಿತನದಿಂದ ಕುಳಿತು ಉಣ್ಣುವವರೇ ಅಧಿಕ. ಕೈಹಿಡಿದ ಹೆಂಡತಿಯ ಮೇಲೆ ಕ್ರೌರ್ಯ, ಹಿಂಸೆ, ದೌರ್ಜನ್ಯ ಮತ್ತು ಅಧಿಕಾರ ಚಲಾಯಿಸುತ್ತಾರೆ. ಹೆಂಗಸರನ್ನು ಕಾಡಿದಷ್ಟು ಮನೆತನದ ಮರ್ಯಾದೆ ಗೌರವಗಳು ಇಲ್ಲಿನ ಗಂಡಸರನ್ನು ಕಾಡುವುದಿಲ್ಲ. ಸ್ವಾರ್ಥ ಸಾಧನೆಗೆ ಆಚಾರ-ವಿಚಾರಗಳನ್ನು ಗಾಳಿಗೆ ತೂರಿ ಮನಸ್ಸಿಗೆ ಸರಿಯೆಂದುಕೊಂಡು ಕಂಡ ರೀತಿ ಬದುಕುವವರೇ ಹೆಚ್ಚು.

ಸಂಧ್ಯಾ ಹೊನಗುಂಟಿಕರ ಅವರ 'ಬಾಲಕತ್ತರಿಸಿದರೆ ಡೊಂಕೆಲ್ಲಿ' ಕಥೆಯ ಪಾರಮ್ಮ ಬಸಪ್ಪನನ್ನು ಮದುವೆಯಾದ ಮೇಲೆ ಕೆಲದಿನ ಮಾತ್ರ ಸಂತಸದಿಂದ ಕಳೆಯುತ್ತಾಳೆ. ಬಸಪ್ಪ ಕುಡುಕರ ಸಹವಾಸದಿಂದ ಕುಡಿಯಲು ಆರಂಭಿಸಿದ ಮೇಲೆ ಅದನ್ನು ವಿರೋಧಿಸಿದ ಕಾರಣಕ್ಕೆ ಅವನಿಂದ ಹೊಡೆತ ತಿನ್ನುವದು ಬಯ್ಗುಳ ಕೇಳುವುದು ದಿನನಿತ್ಯದ ಕ್ರಮವಾಗುತ್ತದೆ. ಕಾರಣ ಕೇಳುವುದನ್ನು ಬಿಟ್ಟ ಮೇಲೂ ನೆವವಿಲ್ಲದೆ ಹೊಡೆತ ತಿನ್ನಬೇಕಾಗುತ್ತದೆ, ಆದರೆ ಒಮ್ಮೆ ಅಕಸ್ಮಾತ್ ಬಸಪ್ಪ ತೀರ ಸಂಭಾವಿತನಂತೆ ವರ್ತಿಸಿ, ಅವಳನ್ನು ನಂಬಿಸಿ ಅವಳ ತಾಯಿ ಅವಳಿಗಾಗಿ ಕೊಟ್ಟಿದ್ದ

ಒಂದೇ ಒಂದು ಚಿನ್ನದ ಆಭರಣವನ್ನು ಸರಿ ಮಾಡಿಸಿಕೊಂಡು ಬರುವೆನೆಂದು ಹೇಳಿ ತೆಗೆದುಕೊಂಡು ಹೋಗಿ ಸಾಲಗಾರರಿಗೆ ಅದನ್ನು ಕೊಟ್ಟು, ಕುತ್ತಿಗೆ ಮಟ್ಟ ಕುಡಿದು ಮನೆಗೆ ಬಂದಾಗ "ನಮ್ಮವ್ವ ನಂಗಂತ ಕ್ವಟ್ಟಿದ್ದು ನಿಂಗ ಮರಾಕ ಏನು ಹಕ್ಕದ? ನಂಗ್ಯಾಕ ಸುಳ್ಳ ಹೇಳಿದಿ ಎಂಬ ಪಾರ್ವತಿಯ ಪ್ರಶ್ನೆಗೆ ಬಸಪ್ಪ' ನೀ ನನ್ನ ಮದಿ ಮಾಡ್ಕಂಡಿ ಅಂತ ನಿಮ್ಮವ್ವ ಅದು ಕ್ವಟ್ಟಾಳ ನಾನಿನ್ನ ಗಂಡ ನಿನ್ನಮ್ಯಾಲ ಪೂರಾ ಹಕ್ಕದ ಇವತ್ತ ನಿನ್ನ ಸರ ಮಾರಿನೀ ನಾಳೆ ನಿನ್ನು ಮಾರ್ತೀನಿ, ಆಗೇನು ಮಾಡ್ತಿ? ಸೂಳಿ ಹಕ್ಕ ಕೇಳಾಕ ಬಂದಾಳ ಹಕ್ಕ"[೨] ಎಂದು ಉತ್ತರಿಸಿ ದನಕ್ಕೆ ಬಡಿದಂತೆ ಬಡಿಯುತ್ತಾನೆ.

ಬಸಪ್ಪನ ಉತ್ತರ ಬರೀ ಒಬ್ಬ ಬಸಪ್ಪನದಲ್ಲ. ಬಸಪ್ಪನಂಥ ಕುಡುಕರ, ಹೆಂಡತಿಯ ಮೇಲೆ ಅಮಾನವೀಯವಾಗಿ ಅಧಿಕಾರ ಚಲಾಯಿಸುವವರ ಧೋರಣೆ ಅದೆ ಆಗಿರುತ್ತದೆ. ಸಮಾಜದಲ್ಲಿ ಬಹುಪಾಲು ಗಂಡಸರು ದುಡಿದು ಮನೆಯ ಜವಾಬ್ದಾರಿ ನಿರ್ವಹಿಸುವುದಿರಲಿ ತಮ್ಮ ದುಶ್ಚಟಕ್ಕೆ ಇದ್ದುದೆಲ್ಲವನ್ನು ಕಳೆದುಕೊಂಡು ಕೊನೆಗೆ ಹೆಂಡತಿಯನ್ನು ಮಾರಲು ಹೇಸದವರಾಗುತ್ತಾರೆ. ಇಂಥವರಿಗೆ ವಿವಾಹ ಮೋಜಿನ ಸಂಗತಿಯಾದರೆ ಹೆಣ್ಣಿಗೆ ಉರುಳಾಗಿ ಪರಿಣಮಿಸುತ್ತದೆ.

ಬಸಪ್ಪನ ಹೆಂಡತಿ ಬಗೆಗಿನ ಮಾತುಗಳನ್ನು ಕೇಳಿದ ಪಾರ್ವತಿ ಡೊಂಕನ್ನು ನಿವಾರಿಸಲು ನಾಯಿಬಾಲ ಕತ್ತರಿಸಿದಂತೆ ಹಕ್ಕು ಸ್ಥಾಪನೆಗೆ ಕಾರಣವಾದ ಹೆಂಡತಿ ಸಂಬಂಧವನ್ನೇ ಕತ್ತರಿಸಲು ಯೋಚಿಸಿ ನಿರಾಳವಾಗುತ್ತಾಳೆ. ಹೆಣ್ಣು ಬದುಕನ್ನು ಸುಧಾರಿಸಿಕೊಂಡು ಹೋಗಲು ಹೆಣಗಿದರೆ ಗಂಡು ಅದನ್ನು ಕೆಡಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತನಾಗುತ್ತಾನೆ. ಪುರುಷ ಪ್ರಧಾನ ವ್ಯವಸ್ಥೆಯ ಪಕ್ಷಪಾತ ನೀತಿಯಿಂದಾಗಿ ಹೆಚ್ಚಿನ ಸಂದರ್ಭದಲ್ಲಿ ಗಂಡು ಸ್ವೇಚ್ಛಾಚಾರಿಯಾಗುತ್ತಾನೆ. ಅವನ ಸ್ವೇಚ್ಛೆ ಪಾರ್ವತಿಯಂಥ ಮುಗ್ಧ ಯುವತಿಯರ ಬದುಕನ್ನು ಹಿಂಸೆಯಲ್ಲಿ ನರಳುವಂತೆ ಮಾಡುತ್ತದೆಂಬುದನ್ನು ಕಥೆ ಪ್ರತಿನಿಧಿಸುತ್ತದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆ ಹೀಗೇ ಇರಬೇಕೆಂದು ವಿಧಿನಿಯಮಗಳನ್ನು ರೂಢಿಸಲಾಗಿದೆ. ಜೀವನದ ಪ್ರತಿ ಸಂದರ್ಭಗಳಲ್ಲಿ ಅವಳು ಹೇಗೆ ವರ್ತಿಸಬೇಕೆಂದು ಸೂಚಿಸಲಾಗಿರುತ್ತದೆ. ಅದಕ್ಕೆ ವಿರುದ್ಧವಾಗಿ ನಡೆಯುವ ಸ್ವಾತಂತ್ರ್ಯ ಅವಳದಲ್ಲ ಯಾವುದೇ ರೂಢಿ ನಿಯಮ ಮಹಿಳೆಗಾಗಿಯೇ ಸೃಷ್ಟಿಸಲ್ಪಡುತ್ತದೆ. ಮತ್ತು ಕಡ್ಡಾಯವಾಗಿ ಹೇರಲ್ಪಡುತ್ತದೆ.

ಸಿದ್ಧರಾಮ ಹೊನ್ಕಲ್‌ರ 'ಸ್ಯಾಡಿಸ್ಟ್' ಕಥೆಯಲ್ಲಿ ಬಿ.ಇ.ಪದವೀಧರ ಅಮರೇಶ ತನಗೆ ನೌಕರಿ ಸಿಗಲಿಲ್ಲ ಅಥವಾ ಮಾವ ತನಗೆ ನೌಕರಿ ಕೊಡಿಸಲಿಲ್ಲವೆಂದು ಹೆಂಡತಿ ಸುಮಿತ್ರೆಯನ್ನು ದಿನವೂ ಹೊಡೆಯುತ್ತಿರುತ್ತಾನೆ. ಬೇಡವೆಂದ ತಂದೆ ತಾಯಿಯರನ್ನು ಮನೆಯಿಂದ ಹೊರದೂಡುತ್ತಾನೆ. ಸುಮಿತ್ರೆಯನ್ನು ತವರಿಗೆ ಕಳಿಸದೆ ಕಾಡಿಸುತ್ತಾನೆ. ಪುರುಷ ತನ್ನೆಲ್ಲ ದೌರ್ಬಲ್ಯಗಳನ್ನು ಕೊರತೆಗಳನ್ನು

ನೆಪವಾಗಿಸಿಕೊಂಡು ಹೆಂಡತಿಯನ್ನು ಹಿಂಸಿಸಲು ಮುಂದಾಗುತ್ತಾನೆ. ಗಂಡ ಹೆಂಡತಿಯನ್ನು ಹೊಡೆಯುವುದು ಒಂದು ಸಹಜ ಕ್ರಿಯೆ ಎಂಬಂತಾಗಿದೆ.

ರಾಜಶೇಖರ ಹತಗುಂದಿಯವರ 'ಪೊರೆ ಕಳಚುವ ಪರಿ' ಕಥೆ ಶಾಣಮ್ಮ ಗೌಡ್ತಿಯ ಮೇಲಾಗುವ ಕುಟುಂಬ ಹಿಂಸೆಯನ್ನು ಪ್ರತಿನಿಧಿಸುತ್ತದೆ. ಶಾಣಮ್ಮ ಗೌಡ್ತಿ ಗಾಣದೆತ್ತಿನ ಹಾಗೆ ದುಡಿದೂ ದುಡಿದೂ ಮೈಯಾಗಿನ ರಗುತ ಕಳಕೊಂಡು ಟಿಬಿ, ಬ್ಯಾನಿ ಬಂದವರಂಗಾಗಿ ಜೋಲಿ ಹೊಡೆಯುತ್ತಿದ್ದಳು. ಆದರೂ ಗಂಡ ಶಾಮರಾಯಗೌಡ ಅವಳನ್ನು ಲಕ್ಷಿಸುವುದಿಲ್ಲ. 'ಕುಡಿದು ಬಂದು ಧಪಾ ಧಪಾ ಬಡಿದಾಗ ಕಜ್ಜಿ ಹತ್ತಿದ ನಾಯಿಯಾಗುತ್ತಿದ್ದಳು. ಬಾಯಿಗೆ ಬಂದಂತೆ ಬೈದಾಡುತ್ತಿದ್ದಳು. ತಲೆ ಚಿಟ್ಟೆಂದು ಬ್ಯಾಸರಿಟ್ಟಾಗ ಸತ್ತೇ ಹೋಗಬೇಕೆಂದು ದಿನಕ್ಕೆ ಛಪ್ಪನ್ನ ಸರತಿ ಲೆಕ್ಕ ಹಾಕುತ್ತಿದ್ದಳು.

ಹೀಗೆ ಮಹಿಳೆ ಕುಟುಂಬಕ್ಕಾಗಿ ದುಡಿದರೂ ಗಣನೆಯಿಲ್ಲದೆ, ದುಡಿದ ದುಡ್ಡು ಗಂಡನ ಕುಡಿತಕ್ಕೆ ಬಳಕೆಯಾಗಿ, ಅವಳು ತೋರುವ ಸ್ವಲ್ಪ ವಿರೋಧವು ಪುನಃ ಅವಳಿಗೇ ಮಾರಕವಾಗಿ ಪರಿಣಮಿಸುತ್ತದೆ. ಸಾವಿಗಾಗಿ ಹಂಬಲಿಸುವುದು ಸಹಜವಾಗುತ್ತದೆ.

ಪುರುಷ ಹೇಗೇ ಇರಲಿ ಅದಕ್ಕೆ ಮಹಿಳೆ ತೋರುವ ವಿರೋಧ ಅವಳ ಜೀವಕ್ಕೆ ಮುಳುವಾಗುತ್ತದೆ. ಅವನನ್ನು ವಿರೋಧಿಸಿ ಬದುಕನ್ನು ಇನ್ನಷ್ಟು ದಾರುಣವಾಗಿಸಿಕೊಳ್ಳುವುದಕ್ಕಿಂತ ಹೊಂದಿಕೊಂಡು ಹೋಗುವುದೇ ಸರಿಯಾದ ಮಾರ್ಗವೆಂದು ಸೂಚಿಸುವ ಕಥೆ ಯಥಾಸ್ಥಿತಿಯನ್ನು ಪ್ರತಿನಿಧಿಸುತ್ತದೆ.

ಹೈದರಾಬಾದ ಕರ್ನಾಟಕ ಪ್ರದೇಶದಲ್ಲಿ ಮಹಿಳೆಗೆ ಕುಟುಂಬದ ಆರ್ಥಿಕ ಸಂಪನ್ಮೂಲಗಳ ಮೇಲೆ ಯಾವುದೇ ಅಧಿಕಾರವನ್ನು ನೀಡಿಲ್ಲ. ಆರ್ಥಿಕ ಸಂಬಂಧಿ ಕಾನೂನಿನ ಪರಿಧಿಯನ್ನು ಮೀರಿ ಅವಳಿಗೆ ಅದನ್ನು ನಿರಾಕರಿಸಲಾಗುತ್ತದೆ. ವಿಶ್ವದ ಆಸ್ತಿಯಲ್ಲಿ ಶೇಕಡ ೧ರಷ್ಟನ್ನು ಮಾತ್ರ ಮಹಿಳೆಯರು ಪಡೆದಿರುವುದು ಅವರ ಆರ್ಥಿಕ ಪರಿಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ. ಭಾರತೀಯ ಸಂವಿಧಾನದಂತೆ ಹಿಂದೂ ವಿವಾಹ ಕಾನೂನಿನ ಪ್ರಕಾರ ಹಿಂದೂ ವಿಧವೆಗೆ ಗಂಡನ ಆಸ್ತಿಯಲ್ಲಿ ಪಾಲು ಸಿಗುತ್ತದೆ, ಆದರೆ ಅದರಂತೆ ಮಾಡುವ ಪ್ರಯತ್ನಗಳು ನಡೆಯುತ್ತವೆ. ವಿಧವೆಗೆ ಮಕ್ಕಳಿಲ್ಲದಿದ್ದರೆ, ಹೆಣ್ಣು ಮಕ್ಕಳಿದ್ದರೆ, ಇಲ್ಲವೆ ಮಂದಬುದ್ಧಿಯ ಮಕ್ಕಳಿದ್ದರೆ ಅವಳ ಆಸ್ತಿಯನ್ನು ಹೇಗೋ ಲಪಟಾಯಿಸುವ ಹುನ್ನಾರಗಳು ಸೃಷ್ಟಿಯಾಗುತ್ತವೆ. ಕಥಾ ಸಾಹಿತ್ಯದಲ್ಲಿ ಮಹಿಳೆಯ ಮೇಲಾದ ಆರ್ಥಿಕ ಶೋಷಣೆಯನ್ನು ಮುಂದಿನ ಚರ್ಚೆಯಲ್ಲಿ ಗಮನಿಸೋಣ.

"ಪ್ರಿತೃಪ್ರಧಾನತೆ ಮತ್ತು ಬಂಡವಾಳಶಾಹಿ ವ್ಯವಸ್ಥೆಗಳೆರಡು ಮಹಿಳೆಯ ಆರ್ಥಿಕ ಅಧೀನತೆಗೆ ಕಾರಣವಾದ ಅಂಶಗಳು ಎಂಬ ಮೂಲಭೂತ ತತ್ವವನ್ನು ಪ್ರತಿಪಾದಿಸಿದವರು ಹಾಯ್ಡಿ ಹಾಟ್‌ಮನ್".[೩]

ಹೈದರಾಬಾದ್ ಕರ್ನಾಟಕ ಕಥಾಸಾಹಿತ್ಯದಲ್ಲಿ ಜಯತೀರ್ಥ ರಾಜ ಪುರೋಹಿತರ 'ಗಂಧವತೀ ಪೃಥಿವಿ' ಕಥೆಯ ಶಾರದ, ಶ್ರೀಕಾಂತ ಪಾಟೀಲರ 'ಮೂಡಲದಾಗ ಕೆಂಪು ರಾಶಿ ಮೂಡಿತ್ತು' ಕಥೆಯ ಸಣ್ಣಿ ಮತ್ತು ಬಸಮ್ಮ, ಅಮರೇಶ ನುಗಡೋಣಿಯವರ 'ಮಣ್ಣು ಸೇರಿತು ಬೀಜ' ಕಥೆಯ ನಾಗಮ್ಮ ಆರ್ಥಿಕ ಶೋಷಣೆಗೆ ಒಳಪಟ್ಟವರು.

ಅಮರೇಶ ನುಗಡೋಣಿಯವರ ಕಥೆ 'ಮಣ್ಣು ಸೇರಿತು ಬೀಜ'ದಲ್ಲಿ ಸಾವಿನ ಎದುರು ಮನುಷ್ಯನ ಸಣ್ಣತನಗಳು ಹೇಗೆ ರಾರಾಜಿಸುತ್ತವೆ ಎಂಬುದರ ಭೀಭತ್ಸ ಚಿತ್ರವಿದೆ. ಸಾಯುತ್ತಿರುವ ಹೆಣ್ಣಿನ ಆಸ್ತಿಯನ್ನು ಅಪಹರಿಸಲು ಅನೇಕರು ಹಾತೊರೆಯುತ್ತಾರೆ. "ಇದಂತು ಉಳ್ಯಾಂಗಿಲ್ಲ ಸಾಯ್ತದ ಗಂಟುಗಿಂಟು ಎಲ್ಲಿಟ್ಟಾದ ಕೇಳಿ ತಗಂಡು ಬಿಡು"[೪] ಎಂದು ಜಂಬಣ್ಣನಿಗೆ ಹೇಳುವ ಗುಂಡಮ್ಮ, ಮಗನಂತೂ ಹುಚ್ಚನಾದ ನಾಗಮ್ಮ ಸತ್ತ ಮೇಲೆ ಆಕೆ ಗಳಿಸಿದ ಆಸ್ತಿ ಗಂಟು ಎಲ್ಲ ತನಗಾದೀತು" ಎಂಬ ಆಸೆಯ ಜಂಬಣ್ಣ ನಾಗಮ್ಮನ ಆಸ್ತಿಯನ್ನು ನುಂಗಿ ನೀರು ಕುಡಿಯಲು ಹೊಂಚುವ ಗೌಡ, ಕುಲಕರ್ಣಿ ಅವಳು ಹಾಸಿಕೊಂಡ ಹೊಸ ಕೌದಿಗಾಗಿ ಆಸೆಗಣ್ಣಿಂದ ನೋಡುವ ತಳವಾರ ಯಂಕ, ನಾಗಮ್ಮನ ಗುಂಡಿನ ಹೊಲ ಎತ್ತಿ ಹಾಕಿ ತನ್ನ ಸೂಳೆಗೆ ಕೊಟ್ಟರಾಯಿತೆಂದು ಯೋಚಿಸುವ ರುದ್ರಪ್ಪ ಸರಕಾರದ ಜನತಾ ಮನೆಗಳಿಗೆ ಗುಂಡಿನ ಹೊಲ ಸೂಕ್ತವೆಂದು ಭಾವಿಸುವ ಬೀರಪ್ಪ ಕ್ಯಾತಣ್ಣ ಇವರೆಲ್ಲರ ಆಸೆ ನಾಗಮ್ಮನ ಮಗ ಗಯ್ಯಪ್ಪನಿಗೆ ಮಾತು ಬರುವ ಮೂಲಕ ಮಣ್ಣುಗೂಡುತ್ತದೆ.

ವಿಧವೆ ನಾಗಮ್ಮ ವ್ಯವಹಾರ ಜ್ಞಾನವಿಲ್ಲದೆ ತನ್ನಲ್ಲಿದ್ದ ಹಣಕಾಸನ್ನು ಇತರರಿಗೆ ಕೊಟ್ಟು ಕಳೆದುಕೊಳ್ಳುತ್ತಾಳೆ. ಇವರೆಲ್ಲ ಗಯ್ಯಪ್ಪನಿಗೆ ಮದುವೆ ಮಾಡಿದರೆ ಸರಿಯಾಗುವನೆಂದು ನಂಬಿಸಿ ಹಣ ಕೀಳುತ್ತಾರೆ. ಅವಳ ಆಸ್ತಿಯ ಮೇಲೆ ಕಣ್ಣಿರಿಸಿದ್ದ ಗೌಡ ಹೆಣ್ಣು ಕೊಡದಂತೆ ಮಾಡುತ್ತಾನೆ. ತಾನು ಹೆಂಗಸಾದುದರಿಂದಲೆ ಹೀಗಾಯ್ತು ಈ ಎಲ್ಲ ಕೆಲಸಕ್ಕೆ ತನ್ನಣ್ಣನನ್ನು ಮುಂದೆ ಮಾಡದಿದ್ದರೆ ಒಳ್ಳೆಯದಿತ್ತೇನೋ ಎಂದು ನಾಗಮ್ಮ ಯೋಚಿಸುವುದು ಸಹಜವೇ ಆಗಿದೆ. ಸಾಂಪ್ರದಾಯಿಕ ಕುಟುಂಬಗಳಲ್ಲಿ ಹೊರಗಿನ ಮತ್ತು ಆರ್ಥಿಕ ವ್ಯವಹಾರಗಳನ್ನು ಪುರುಷನೇ ನಿರ್ವಹಿಸಿದ್ದು ಮಹಿಳೆಗೆ ಆ ಅವಕಾಶ ಲಭಿಸಿಲ್ಲವಾಗಿ ಅವಳು ವ್ಯವಹಾರ ಕುಶಲಳಾಗುವುದು ಸಾಧ್ಯವಾಗಿಲ್ಲ.

ಹೆಣ್ಣಿನ ಅಂತರಂಗವನ್ನು ಒಳಹೊಕ್ಕು ಅವಳ ನೋವು ನಲಿವುಗಳನ್ನು, ರಾಕ್ಷಸರ ಸ್ವಭಾವವನ್ನು ನಿರ್ಮಮವಾಗಿ ತೋರಿಸಿರುವುದು ಕಥೆಯ ಮಹತ್ವವನ್ನು ಹೆಚ್ಚಿಸಿದೆ.

ಜಯತೀರ್ಥ ರಾಜ ಪುರೋಹಿತ 'ಗಂಧವತೀ ಪೃಥಿವಿ' ಕಥೆ ಗಂಡು ಸಂತಾನವಿಲ್ಲದ ತಂದೆಯ ಆಸ್ತಿಯಲ್ಲಿ ಹೆಣ್ಣುಮಕ್ಕಳಿಬ್ಬರು ಪಾಲು ಕೇಳುವ ವಸ್ತುವನ್ನು ಆಧರಿಸಿದೆ. ಭಾರತೀಶ ಶಿಕ್ಷಕನಾಗಿ ದುಡಿದು ಸಂಪಾದಿಸಿದ ಸ್ಥಿರಾಸ್ತಿ ಎಂದರೆ ಮನೆ. ಹೆಂಡತಿ ಮಗ ತೀರಿಕೊಂಡ ಮೇಲೆ

ಒಂಟಿಯಾಗಿರುತ್ತಿದ್ದಾಗ ಅದೆ ಊರಿಗೆ ವರ್ಗವಾಗಿ ಬಂದ ಹಿರಿಮಗಳು ಹಾಗೂ ಅಳಿಯನನ್ನು ಮನೆಯಲ್ಲಿ ಇರಿಸಿಕೊಳ್ಳುತ್ತಾನೆ. ಇದನ್ನು ಸಹಿಸದ ಕಿರಿಯ ಅಳಿಯ ಹೆಂಡತಿಯ ಮೂಲಕ ಪಾಲು ಕೇಳುತ್ತಾನೆ.

ತನ್ನ ಮನೆಯಲ್ಲಿ ಪಾಲು ಪಡೆದು ತನ್ನನ್ನು ಅಧಿಕಾರ ವಂಚಿತನನ್ನಾಗಿಸಲು ನೋಡುವರೆಂದು ಯೋಚಿಸುವ ಭಾರತೀಶ "ನೀನು ಮಗಳ ಆದರೆ ನಿನ್ನ ಗಂಡ ನನ್ನ ಮಗನಾಗಬಲ್ಲನೆ? ಅವನು ಪರಕೀಯ ನನ್ನನ್ನೇಕೆ ಪರಾಧೀನ ಮಾಡುವಿ?"[೫] ಎಂದು ಪ್ರಶ್ನಿಸುತ್ತಾನೆ. ಆಸ್ತಿ ಹೆಣ್ಣಿನ ತಂದೆಯದೇ ಆದರೂ ಅದರ ಅಧಿಕಾರ ಪಡೆಯುವವನು ಅಳಿಯ. ಅಳಿಯನ ಮನೆಯಲ್ಲಿರುವುದು ಪರಾಧೀನತೆಯ ಸಂಕೇತ.

ಹೆಣ್ಣು ಆಸ್ತಿಯಲ್ಲಿ ಪಾಲು ಪಡೆದಾಗಲೂ ಬಳಸುವ ಸ್ವಾತಂತ್ರ್ಯ ಅವಳಿಗಿರುವುದಿಲ್ಲ. ಆಸ್ತಿಯ ಹಕ್ಕು ಹೆಸರಿಗೆ ಮಾತ್ರ ಇರುವುದರಿಂದಲೇ ಮಹಿಳೆಯ ಬದುಕು ಪುರುಷಾಧಿಕಾರದಲ್ಲಿ ಬಂಧಿತವಾಗಿದೆ. ಪುರುಷ ನಿರ್ದೇಶನದಂತೆಯೆ ಭಾರತೀಶನ ಕಿರಿ ಮಗಳು ತಂದೆಯ ಆಸ್ತಿಯಲ್ಲಿ ಪಾಲು ಕೇಳುತ್ತಾಳೆ. ಹೆಣ್ಣು ಮಗಳು ಪರಕೀಯಳು, ಅವಳಿಗೆ ಕೊಡುವ ಆಸ್ತಿಯೂ ಪರಕೀಯವಾಗುತ್ತದೆ. ಮಗನ ಮನೆಯಲ್ಲಿ ಭಾವಿಸಲಾಗುವ ಸ್ವಂತಿಕೆ ಮಗಳ ಮನೆಯಲ್ಲಿ ಅನ್ಯವಾಗುವುದನ್ನು ಕಥೆ ನಿರೂಪಿಸುತ್ತದೆ. ಮಗ ಸ್ವಂತ ಮಗಳು ಅನ್ಯ ಎಂಬ ಪರಂಪರಾಗತ ನಂಬಿಕೆಯೆ ಗಂಡು ಸಂತಾನದ ಪ್ರಾಶಸ್ತ್ಯಕ್ಕೆ ಕಾರಣವಾಗುತ್ತದೆ. ಮಗನನ್ನು ಕಳೆದುಕೊಂಡ ಭಾರತೀಶ ತನ್ನತನವನ್ನು ಕಳೆದುಕೊಂಡಂತಾಗುತ್ತಾನೆ. ಅವನ ಆಸ್ತಿಯನ್ನು ಅವನ ಹೆಣ್ಣುಮಕ್ಕಳ ಮೂಲಕವೇ ಕಿತ್ತುಕೊಳ್ಳಲು ಅಳಿಯಂದಿರು ಪ್ರಯತ್ನಿಸುತ್ತಾರೆ. ಮಹಿಳೆ ಇಲ್ಲಿ ಬಳಕೆಯಾಗುತ್ತಾಳೆ. ಅವಳ ಹಿಂದಿನ ಪುರುಷ ಚಹರೆ ವ್ಯಕ್ತವಾಗದೆ ಅವಳೇ ದೋಷಿಯಾಗಿ ಭಾವಿಸಲ್ಪಡುತ್ತಾಳೆ.

ಶ್ರೀಕಾಂತ ಪಾಟೀಲರ 'ಮೂಡಲದಾಗ ಕೆಂಪು ರಾಶಿ ಮೂಡಿತ್ತು' ಕಥೆ ಆಸ್ತಿಗಾಗಿ ಸಣ್ಣಿಯ ಹೋರಾಟವನ್ನು ವಸ್ತುವಾಗಿ ಉಳ್ಳದ್ದು ಸಣ್ಣಿ ಎಂದೇ ಗುರುತಿಸಲ್ಪಡುವ ಶಾಂತಾಬಾಯಿ ಶಾಂತಪ್ಪನ ಕೈಹಿಡಿದು ಬಂದವಳು. ಬಾಳೇವಂತ ಹೆಣ್ಣೆಂದು ಮನ್ನಣೆ ಪಡೆದವಳು. ಗಂಡು ಮಕ್ಕಳಿಲ್ಲದ ಸಣ್ಣಿಗೆ ಮೊದಲಿನಿಂದಲೂ ಅನ್ಯಾಯವಾಗುತ್ತ ಬಂದರೂ ಸಹಿಸಿಕೊಂಡು ಇದ್ದೊಬ್ಬ ಮಗಳ ಬಾಳನ್ನು ಚಂದವಾಗಿಸಲು ಶ್ರಮಿಸುತ್ತಾಳೆ, ಮನೆಬೇರೆಯಾದರೂ ಇವಳ ಪಾಲಿಗೆ ಬಂದದ್ದು ಖಾಲಿ ಜಾಗ ಅಲ್ಲೇ ಹೇಗೋ ಸುಧಾರಿಸಿಕೊಂಡು ಬಾಳುತ್ತಾಳೆ. ಹೊಲವೆಲ್ಲ ಹಿರಿಭಾವ ಭೀಮಶ್ಯಾನನ ಹೆಸರಲ್ಲೇ ಇರುತ್ತದೆ. ಹೊಲಮನೆ ಕೊಡುವುದಾಗಿ ವಾಗ್ದಾನ ಮಾಡಿ ಮಗಳು ಬಸಮ್ಮನ ಮದುವೆ ಮಾಡುತ್ತಾರೆ. ಆದರೆ ಕೊಡಬೇಕಾಗಿ ಬಂದಾಗ ಕೊಡಬಾರದೆಂಬ ದೂರ್ತತನದಲ್ಲಿ ಹೊಡೆದು ಬಡಿದು ಹೆದರಿಸಿ ದಬ್ಬಾಳಿಕೆ ಮಾಡುತ್ತಾರೆ. ಅಳಿಯ ಪ್ರಕಾಶನನ್ನು ಹೆದರಿಸಿ ತಾವೇ ಗಳೆವು ಹೂಡುತ್ತಾರೆ. ಸಣ್ಣಿ

ದುಡಿದು ಹೊಲದಲ್ಲಿ ತುಂಬ ಬೆಳೆ ಬಂದಾಗ ದನ ಮೇಯಿಸಿ ಇಲ್ಲವೆ ಬೆಳೆ ಚಂಡಿಯಾಡಿ ಇವರಿಗೆ ದಕ್ಕದಂತೆ ಮಾಡುತ್ತಾರೆ, ಬೇಸತ್ತ ಸಣ್ಣಿ ಪಂಚಾಯ್ತಿಗೆ ಮೊರೆ ಹೋಗುತ್ತಾಳೆ.

ಪಂಚಾಯ್ತಿಯಲ್ಲಿ ಸಣ್ಣಿಯ ಭಾವಂದಿರಾದ ಭೀಮಶ್ಯಾ ಶಂಕರರು ಪಂಚರನ್ನೆ ಹೆದರಿಸಿ ಎದ್ದು ಹೋದಾಗ, ಉಪಾಯವಿಲ್ಲದೆ ನ್ಯಾಯಲಯದ ಕಟ್ಟೆ ಏರುತ್ತಾಳೆ. ಬೆದರಿಕೆಯ ಕಾರಣವಾಗಿ ಯಾರೂ ಸಾಕ್ಷಿ ನುಡಿಯದೆ ನ್ಯಾಯಾಲಯದಲ್ಲಿ ದಾವೆ ದುರ್ಭಲವಾದಾಗ, ಅಳಿಯನೂ ಹೆದರಿ ಊರು ಬಿಟ್ಟು ಹೋದಾಗ, ಸಣ್ಣಿ ಹೆದರದೆ ಮಗಳನ್ನು ಕರೆದುಕೊಂಡು ಮರುದಿನ ತಾನೆ ಹೊಲದಲ್ಲಿ ನೇಗಿಲು ಹೂಡುತ್ತಾಳೆ. ಗಂಡುಗಚ್ಚೆ ಹಾಕಿ ಟೊಂಕಕ್ಕೆ ಸೆರಗು ಸುತ್ತಿ ನೇಗಿಲು ಹೊಡೆವಾಗ ದರ್ಪದಿಂದ ಏರಿ ಬಂದ ಪರಮಣ್ಣನನ್ನು ಬಾರಕೋಲಿನಿಂದ ಮೈಮುರಿ ಹೊಡೆಯುತ್ತಾಳೆ. ಬಸಮ್ಮ ಕುಡಗೋಲು ಹಿಡಿದು ನಿಲ್ಲುತ್ತಾಳೆ. ಸಣ್ಣಿ 'ನೇಗಲಾ ಹೊಡ್ಡವರು ಯಾರಂತಿ ಏನೋ ಮನೆಮುರ್ಕಾ, ನಿನ್ನ ಮಾರಿಮ್ಯಾಲ ಮೀಸಿ ಇದ್ರ ನನ್ನ ಎದ್ಯಾಗ ಅವೋ, ನೀವೆಲ್ಲಾ ಎಷ್ಟು ಬೀಜದವರಂತ ಇವತ್ತ ನೋಡೆ ಬಿಡ್ತೀನಿ' ಎಂದು ಹೊರಳಾಡಿಸಿ ಹೊಡೆಯುವಾಗ ಬಸಮ್ಮ "ನನ್ನಪ್ಪನ ಆಸ್ತಿಗೆ ನೀವ್ಯಾರೋ ಕೇಳವರು ಇಂದ ನೀವರೆ ಇರಬೇಕು ಈ ಭೂಮಿತಾಯಿ ಮ್ಯಾಲ ಇಲ್ಲ ನಾವರೇ ಇರಬೇಕು".[೬] ಎಂದು ಓಡಿ ಬಂದಾಗ ಪರಮಣ್ಣ ಹಿಂದೆ ನೋಡದೆ ಓಡಿ ಹೋಗುತ್ತಾನೆ.

ಇಡೀ ವ್ಯವಸ್ಥೆ ಅಂದರೆ ಪಂಚರು, ನ್ಯಾಯಾಲಯವೆಲ್ಲ ಪುರುಷ ಪರವಾಗಿರುವ ಸಂದರ್ಭದಲ್ಲಿ ತನ್ನ ಹಕ್ಕಿಗಾಗಿ ಯಾಚಿಸಿದರೆ ಸಾಲದು ಅದನ್ನು ಪಡೆಯಲು ಹೋರಾಟ, ಮನೋಬಲಗಳು ಅವಶ್ಯವೆಂಬುದನ್ನು ಕಥೆ ಸಣ್ಣಿಯ ಮೂಲಕ ಸಾಂದ್ರವಾಗಿಸುತ್ತದೆ.

ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಆಸ್ತಿ ಸಂಬಂಧಿ ಪ್ರಸ್ತಾಪ ಬರುವುದು ಸಾಮಾನ್ಯವಾಗಿ ವಿಧವೆಯರ ಸಂದರ್ಭದಲ್ಲಿ ವಿಧವೆಯರಿಗೆ ಪಾಲು ಕೊಡಬಾರದೆಂಬ ಧೋರಣೆಯೆ ಸಮಾಜದಲ್ಲಿ ನೆಲೆಗೊಂಡಿರುವುದನ್ನು, ವಿಧವೆಯ ಆಸ್ಥಿಯನ್ನು ಸಂಬಂಧಿಗಳು, ಸಂಬಂಧಿಗಳಲ್ಲದವರು ಕಿತ್ತುಕೊಳ್ಳಲು ಪ್ರಯತ್ನಿಸುವುದನ್ನು ಕಾಣಬಹುದು. ವಿಧವೆಯರೂ ತಮ್ಮ ಪಾಲನ್ನ ಪಡೆಯಲು ಹೋರಾಡುವುದು, ಕಾಶಮ್ಮ, ಸಣ್ಣಿ, ತುಳಜಾ ಈ ಪ್ರಯತ್ನದಲ್ಲಿ ಸಫಲರಾದರೆ ವೃಂದಾಬಾಯಿ ನಾಗಮ್ಮನಂಥವರು ವಿಫಲರಾಗುತ್ತಾರೆ. ಮಹಿಳೆ ಕಾನೂನುಬದ್ಧವಾಗಿ ಸಹಜವಾಗಿ ಆಸ್ತಿಪಾಲನ್ನು ಪಡೆಯಬಹುದಾದ ಅವಕಾಶವಿದ್ದಾಗಲೂ ಹೋರಾಡದೆ ಗತ್ಯಂತರವಿಲ್ಲ ಎಂಬಂಥ ಸ್ಥಿತಿಯೆ ಇಂದಿಗೂ ಕಂಡುಬರುತ್ತದೆ.

ಕುಟುಂಬದಲ್ಲಿ ಮಹಿಳೆ ಕಟ್ಟಿಕೊಂಡ ಬದುಕು ಮಹತ್ವದ್ದಾಗಿರುತ್ತದೆ. ಕುಟುಂಬವನ್ನು ಕಾಯುವ ಶಕ್ತಿ ಯಾವುದೆಂದು ಸ್ವಲ್ಪ ಆಲೋಚಿಸಿ ನೋಡಿದರೆ ಅದು ಹೆಣ್ಣು ಎಂಬುದು ಸ್ಪಷ್ಟವಾಗುತ್ತದೆ.

ಒಂದು ವೇಳೆ ಮಹಿಳೆ ಈ ಕೆಲಸದಲ್ಲಿ ತೊಡಗಿಕೊಳ್ಳಲಿಲ್ಲವೆಂದರೆ, ಕುಟುಂಬ ಗತಿಯ ಕಾರ್ಯವಿಧಾನಕ್ಕೆ ಧಕ್ಕೆಯೊದಗಿತು ಎಂದರೆ ಕುಟುಂಬ ರಚನೆ ವಿಚ್ಛಿದ್ರಗೊಳ್ಳುವ ಅಪಾಯಕ್ಕೆ ತುತ್ತಾಗುತ್ತದೆ, ಸಮಾಜ ಸಮುದಾಯಗಳೊಂದಿಗೆ ಮಹಿಳೆಯ ಸಂಬಂಧ ಅಷ್ಟೊಂದು ಪ್ರಭಾವಶಾಲಿಯಾದದ್ದಾದರೂ ಅಲ್ಲಿ ಅವಳ ಸ್ಥಾನಮಾನಗಳೇನೂ ನಿರೀಕ್ಷಿತ ಮಟ್ಟ ಗೌರವದಿಂದ ಕೂಡಿಲ್ಲ. ಇಷ್ಟಾದರೂ ಕುಟುಂಬ ಕಾಯುವ ಕೆಲಸದಿಂದ ಅವರು ಹಿನ್ನಡೆದಿಲ್ಲ. ತಮ್ಮ ದುಡಿಮೆ, ಸಮಯಗಳಷ್ಟನ್ನು ಕುಟುಂಬದ ಸುಭದ್ರತೆಗಾಗಿಯೇ ವ್ಯಯ ಮಾಡುತ್ತಾರೆ. ಹೈದರಾಬಾದ್ ಕರ್ನಾಟಕದ ಕಥಾ ಸಾಹಿತ್ಯದಲ್ಲಿಯ ಮಹಿಳೆಯರು ಕುಟುಂಬದ ಉತ್ಪಾದನಾ ಚಟುವಟಿಕೆಯಲ್ಲಿ ತೊಡಗಿಕೊಳ್ಳುವ ವಿಧಾನ ಬೆರಗುಗೊಳಿಸುವಂಥದು. ಮಹಿಳೆ ತನ್ನ ಜೀವಿತಾವಧಿಯ ಎಲ್ಲ ಸಮಯವನ್ನು ಬಳಸಿದರೂ ಸಾಕಾಗದೆ ಹೋಗುತ್ತದೆ. ಬದುಕು ಕಟ್ಟುವ ಅವರ ಪ್ರಯತ್ನ ಶ್ರಮ ಅಗಾಧವಾದುದು, ಸಾಮಾಜಿಕ ನಿರೀಕ್ಷೆಯಂತೂ ಮಹಿಳೆ ಹೀಗೇ ಇರಬೇಕೆಂದು ಬಯಸುತ್ತದೆ. ಅವರ ಶ್ರಮ ಮತ್ತು ಮಹತ್ವವನ್ನು ಗುರುತಿಸುವ ಪ್ರಯತ್ನ ಕಥಾ ಸಾಹಿತ್ಯದಲ್ಲಿ ಮಡಿತವಾಗಿದೆ.

ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಬದುಕು ಕಟ್ಟುವವರಾಗಿ ಮಲ್ಲಿಕಾರ್ಜುನ ಹೀರೇಮಠರ 'ಲಕ್ಕವ್ವನ ಮಂದಿ' ಕಥೆಯ ನಾಗವ್ವ, ಶ್ರೀಕಾಂತ ಪಾಟೀಲರ 'ಸನ್ಮಾರ್ಗ' ಕಥೆಯ ಸೋನಕ್ಕ, ರಾಜಶೇಖರ ನೀರವಮಾನ್ವಿಯವರ 'ವೃತ್ತ' ಕಥೆಯ ಪಾರ್ವತಿ, ಗೌಡತಿ, ಎಂ.ಜಿ.ದೇಶಪಾಂಡೆಯವರ 'ವಿಪರ್ಯಾಸ' ಕಥೆಯ ಪ್ರಿಯಾ, 'ಚರಿತ್ರ ಹೀನ' ಕಥೆಯ ರಂಜಿನಿ, ಲಲಿತಾ ದೇಮಶೆಟ್ಟಿಯವರ 'ಆರಕ್ಷಕ' ಕಥೆಯ ಪಾರ್ವತಿ, ಸಂಧ್ಯಾ ಹೊನಗುಂಟಿಕರ ಅವರ 'ಜಿಜೀವಿಷಾ' ಕಥೆಯ ನಾಯಕಿ, 'ಇಳಿ ಹೊತ್ತಿನಲ್ಲಿ ಕದ ತಟ್ಟಿದ ಅತಿಥಿ' ಕಥೆಯ ಡಾ.ಮಂದಾಕಿನಿ. ಈ ಮೊದಲಾದವರನ್ನು ಕಾಣಲಾಗಿದೆ.

ಜಯತೀರ್ಥ ರಾಜ ಪುರೋಹಿತರ 'ಕಥೆಗಾರ್ತಿ' ಕಥೆಯ ಸೀತಾ ಅಮರೇಶ ನುಗಡೋಣಿಯವರ 'ದಾರಿ ಮೂಡಿಸುವ ಹೆಜ್ಜೆಗಳು' ಕಥೆಯ ತಿಮ್ಮಕ್ಕ, ಇವರೆಲ್ಲ ಜೀವನದಲ್ಲಿ ಎದುರಾದ ಸಮಸ್ಯೆಗಳನ್ನು ಅತ್ಯಂತ ಸಮರ್ಥವಾಗಿ ಎದುರಿಸಿ ತಮ್ಮ ಬದುಕನ್ನು ಕಟ್ಟಿಕೊಳ್ಳುವುದರ ಜೊತೆಗೆ ಇತರರ ಬದುಕನ್ನು ಕಟ್ಟಿಕೊಡುವವರಾಗಿದ್ದಾರೆ.

ಕುಟುಂಬದಲ್ಲಿ ತನ್ನ ಮನಸ್ಸಿಗೆ ವಿರುದ್ಧವಾಗಿ ಏನಾದರೂ ನಡೆದರೆ, ಸಂಕಟ ಎದುರಾದರೆ, ಜೀವ ಹಾನಿಯಾದರೆ ಅದನ್ನು ಸಂಯಮದಿಂದ ಎದುರಿಸುವ ಪುರುಷರು ಅಪರೂಪ, ಮಹಿಳೆ ಇಂಥ ಸಂದರ್ಭಗಳನ್ನು ಸಮರ್ಥವಾಗಿ ಎದುರಿಸುತ್ತಾಳೆ ಮಾತ್ರವಲ್ಲ ಇತರರಿಗೂ ಆಸರೆಯಾಗುತ್ತಾಳೆ ಎಂಬುದನ್ನು ಮಲ್ಲಿಕಾರ್ಜುನ ಹಿರೇಮಠರ 'ಲಕ್ಕವ್ವನ ಮಂದಿ' ಕಥೆಯ ನಾಗವ್ವ ಪ್ರತಿನಿಧಿಸುತ್ತಾಳೆ. ಎಪ್ಪತ್ತರ ಮುಪ್ಪಿನಲ್ಲಿಯೂ ಬೀಸುಕಲ್ಲಿಗೆ ಹೊಳೆ ಹಾಕಿ ತಾನೇ ಅರೆ ಹೊಟ್ಟೆಯವಳಾಗಿ ಬದುಕುತ್ತಿದ್ದರೂ ಬಸ್ಸಿನಲ್ಲಿ ಬರುವಾಗ ಮೂರು ಮಕ್ಕಳ ತಾಯಿ ಹನುಮವ್ವನನ್ನು ಅವಳ ಗಂಡ ಅಪರಿಚಿತ ಸ್ಥಳದಲ್ಲಿ

ಬಿಟ್ಟು ಪಲಾಯನಗೈದುದನ್ನು ಕೇಳಿ, ದಿಕ್ಕೆಟ್ಟು ನಿಂತವಳಿಗೆ ಧೈರ್ಯ ಹೇಳಿ ತನ್ನೊಂದಿಗೆ ಕರೆದು ತಂದು, ತನ್ನ ತುತ್ತಿನಲ್ಲಿ ತುತ್ತು ಕೊಟ್ಟುದಲ್ಲದೆ, ಜ್ವರದಿಂದ ಬಳಲುವ ಮಗುವಿಗೆ ಇದ್ದ ಸ್ವಲ್ಪ ದುಡ್ಡನ್ನು ಕೊಟ್ಟು ಚಿಕಿತ್ಸೆ ಮಾಡಿಸುವ ಮೂಲಕ ಮಾನವೀಯತೆ ಮೆರೆಯುತ್ತಾಳೆ.

ಮಗುವಿಗೆ ಡಾಕ್ಟರಿಂದ ಔಷಧಿಯನ್ನು ತರುವಾಗ ಟ್ರಿಪಲ್ ಆ್ಯಂಟಿಜನ್ ಮಾಡಿಸಿದಿರೇನು? ಎಂದು ಕೇಳುವ ಸುಶಿಕ್ಷಿತ ಹಾಸ್ಯಾಸ್ಪದ ವ್ಯಕ್ತಿಯಾಗಿ ಕಾಣುತ್ತಾನೆ. ಬಡತನದ ರೇಖೆಯ ಕೆಳಗಿರುವ ಲಕ್ಷಾಂತರ ಮಂದಿಗೆ ಡಾಕ್ಟರ್‌ರಂತವರು ಹಾಸ್ಯಾಸ್ಪದ ವ್ಯಕ್ತಿಗಳಾಗಿ ಕಂಡರೆ ಆಶ್ಚರ್ಯವಿಲ್ಲ. ಅಂತಹವರಿಗೆ ನಮ್ಮ ದೇಶದ ಬಡತನದ ಒಟ್ಟು ದಾರುಣ ಸ್ಥಿತಿ ಎಂತಹುದು ಎಂದು ಅರಿವು ಇರಲು ಸಾಧ್ಯವಿಲ್ಲ. ಈ ಕಥೆಯಲ್ಲಿ ಕೂಡ ಬಡತನದ ಚಿತ್ರಣದ ಜೊತೆಗೆ ಮುದುಕಿ ನಾಗವ್ವನ ಮಾನವೀಯತೆಯ ಚಿತ್ರಣವು ಸೇರಿರುವುದರಿಂದ ಕಥೆಯು ಕೇವಲ ಯಾವುದೇ ಒಂದು ಯೋಚನೆಯನ್ನು ಅಥವಾ ಪಂಥವನ್ನು ಎತ್ತಿ ಹಿಡಿಯಲು ಬರೆದ ಕಥೆಯಲ್ಲ ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ ಎಂಬ ಮಾಧವ ಕುಲಕರ್ಣಿಯವರ ಅಭಿಪ್ರಾಯವನ್ನು ಒಪ್ಪುತ್ತಲೆ, ಬದುಕನ್ನು ಕಟ್ಟುವಲ್ಲಿ ನಾಗವ್ವನ ಪಾತ್ರದ ಉದಾತ್ತತೆಯನ್ನು ಮರೆಯಲಾಗದು.

ಇಬ್ಬರು ಗಂಡು ಮಕ್ಕಳು ಹರಯದವರಾಗಿ ಸತ್ತಾಗ ಆ ನೋವನ್ನು ಸಹಿಸದ ನಾಗವ್ವನ ಗಂಡ ಕುಡಿದು ಕುಡಿದು ಸಾಯುತ್ತಾನೆ. ತನ್ನೆಲ್ಲ ನೋವನ್ನು ಇತರರ ನೋವು ನಿವಾರಿಸುವಲ್ಲಿ ಮತ್ತು ಬಿಡುವಿಲ್ಲದ ದುಡಿಮೆಯಲ್ಲಿ ಮರೆಯಲು ಯತ್ನಿಸುವ ನಾಗವ್ವ ವಿರಾಗಿಗೂ ಕಡಿಮೆಯಿಲ್ಲದ ಮನೋ ನಿಗ್ರಹಿಯಾಗಿ ಕಾಣುತ್ತಾಳೆ. ಪುರುಷ ಪ್ರಧಾನ ವ್ಯವಸ್ಥೆಯ ಸೃಷ್ಟಿಯಾದ ಅಬಲೆ ಅಸಹಾಯಕಳು ಎಂಬ ಶಬ್ದಗಳು ನಾಗವ್ವಳಂಥ ಗಟ್ಟಿ ವ್ಯಕ್ತಿತ್ವದೆದಿರು ಅರ್ಥ ಕಳೆದುಕೊಳ್ಳುತ್ತವೆ. ಮಹಿಳೆಯ ಸಾಮರ್ಥ್ಯವನ್ನು ಮಲ್ಲಿಕಾರ್ಜುನ ಹಿರೇಮಠರು ಸಶಕ್ತವಾಗಿ ಚಿತ್ರಿಸಿದ್ದಾರೆ.

ಮಹಿಳೆ ಸಮಾಜದಿಂದ ಏನನ್ನು ಪಡೆಯುತ್ತಾಳೋ ಅದನ್ನೇ ಸಮಾಜಕ್ಕೆ ನೀಡುತ್ತಾಳೆ. ಸಾಮಾನ್ಯವಾಗಿ ಇತರರ ಕಷ್ಟಕ್ಕೆ ಮಿಡಿಯುವುದು ಮಹಿಳೆಯ ಸ್ವಭಾವ. ಹೀನಾಯವಾಗಬಹುದಾದ ತನ್ನ ಬದುಕು ವಿವಾಹ ಸಂಸ್ಥೆಯ ಪ್ರವೇಶದಿಂದ ಒಂದು ಭದ್ರ ನೆಲೆಯನ್ನು ಕಂಡು ಆಧರಿಸುವಂತಾದಾಗ, ಅಂಥ ಇಕ್ಕಟ್ಟಿಗೆ ಸಿಕ್ಕ ಮತ್ತೊಂದು ಬದುಕಿಗೆ ನೆಲೆಕಾಣಿಸುವುದನ್ನು 'ಸನ್ಮಾರ್ಗ' ಕಥೆ ಪ್ರತಿನಿಧೀಕರಿಸುತ್ತದೆ.

ಶ್ರೀಕಾಂತ ಪಾಟೀಲರ ಈ ಕಥೆಯು ಬದುಕಿ ಬದುಕಿಸುವ ಸೋನಕ್ಕನ ಜೀವನ ಸಿದ್ಧಾಂತವನ್ನು ಸಾರುತ್ತದೆ. ಸೋನಕ್ಕನ ಜೀವನದಲ್ಲಿ ಸಾಕಷ್ಟು ನೊಂದು ಬೆಂದವಳು. ವೇಶ್ಯಾವೃತ್ತಿಗಿಳಿಯಬೇಕಾಗಿದ್ದ ಅವಳ ಬದುಕಿಗೆ ಮೋನಪ್ಪ ಪ್ರೀತಿಯ ಧಾರೆ ಎರೆದು ಗರತಿಯ ಘನತೆ ತಂದು ಕೊಡುತ್ತಾನೆ. 'ನಿನ್ನ ಪ್ರೀತಿಯ ಮುಂದೆ ಅಚ್ಚ ಕನಸಿನಲ್ಲೂ ಕಂಡರಿಯದ ಬದುಕು ಸೋನಕ್ಕಳದಾಗುತ್ತದೆ.

ಬಂಗಾರವು ಸಣ್ಣದಾಯಿತು' ಎಂದು ಹಲುಬುವ ಸೋನಕ್ಕ ಮೋನಪ್ಪ ಸತ್ತ ಮೇಲೆ ಅವನ ಪ್ರತಿಮೆ ಮಾಡಿಸಿ ಪೂಜಿಸಲು ಮಗನಿಗೆ ಹೇಳುತ್ತಾಳೆ. ಅದಕ್ಕಾಗಿ ತಾಯಿ–ಮಗ ಹಣ ಕೂಡಿಡುತ್ತಾರೆ. ಪ್ರತಿಮೆ ಮಾಡಿಸಲು ಅಕ್ಕಸಾಲಿಗರ ಮನೆಗೆ ಹೊರಟ ಮಗ ಹಣ ಕೇಳಿದಾಗ ಸೋನಕ್ಕ ಹಣವನ್ನು ಒಂದು ಒಳ್ಳೆ ಕೆಲಸಕ್ಕೆ ಕೊಟ್ಟಿರುವುದಾಗಿ ಹೇಳುತ್ತಾಳೆ. ಅದೇ ಊರ ಸಾವಂತ್ರವ್ವ ಸೊಸೆಗೆ ಮದುವೆಯಲ್ಲಿ ಒಂದು ತೊಲೆ ಬಂಗಾರವನ್ನು ತವರವರು ಕೊಡಲಿಲ್ಲವೆಂಬ ಕಾರಣಕ್ಕೆ ಮಗ ಸೊಸೆಯನ್ನು ಒಂದಾಗಿಸದೆ ವ್ಯಭಿಚಾರದ ಪಟ್ಟಗಟ್ಟಿ ವಿಚ್ಛೇದನದ ಸಂಚು ನಡೆಸುತ್ತಾಳೆ. ಅವಳ ಬದುಕನ್ನು ಸರಿಪಡಿಸಲು ಗಂಡ–ಹೆಂಡತಿಗೆ ಊರು ಬಿಟ್ಟು ದೂರ ಹೋಗುವ ಸಲಹೆ ಇತ್ತು. ಹಣ ಸಹಾಯ ಮಾಡುತ್ತಾಳೆ. ಹೀಗೆ ಮುರಿದು ಹೋಗುತ್ತಿದ್ದ ಸಂಬಂಧವನ್ನು ಬೆಸೆದು ಬದುಕನ್ನು ಸುಗಮಗೊಳಿಸುವ ಸೋನಕ್ಕ ಗಂಡನ ಪ್ರತಿಮೆಗಿಂತ ಹೆಣ್ಣೊಬ್ಬಳ ಬದುಕು ಮುಖ್ಯವೆಂದು ಪರಿಭಾವಿಸುವುದನ್ನು ಕಥೆ ಪ್ರತಿನಿಧಿಸುತ್ತದೆ. ಮೋನಪ್ಪನಿಂದಾಗಿ ನಿತ್ಯ ನರಕವಾಗಬಹುದಾಗಿದ್ದ ಬದುಕಿನಿಂದ ವಾರದ ಸೋನಕ್ಕ ಜೀವನದ ಮೌಲ್ಯವನ್ನು ಬಲ್ಲವಳಾಗಿ ಒಂದು ಬದುಕನ್ನು ಕಟ್ಟುತ್ತಾಳೆ.

ರಾಜಶೇಖರ ನೀರಮಾನ್ವಿಯವರ 'ವೃತ್ತಿ' ಕಥೆಯು ಗೌಡರ ಬದುಕು ಕಟ್ಟಿಕೊಟ್ಟ ಗೌಡತಿಯ ವ್ಯಕ್ತಿತ್ವದ ಘನತೆಯನ್ನು ಚಿತ್ರಿಸುತ್ತದೆ.

"ಹೋಗಪ್ಪಾ ಹೋಗು ಗೌಡರ ಅಂಜಿಕೆ ತೋರಸ್ತಿದ್ದಿ ನನಗೆ, ಆತನ್ನ ನನ್ನ ಸೆರಗಿನ್ಯಾಗ ಕಟಿಗೊಂಡೀನಿ"[೭] ತನ್ನ ಹೆಣ್ಣಾಗುವ ಮೊದಲೆ ಜೋಗತಿಯಾಗಬೇಕಿದ್ದ ಲಚಮಿ ಗೌಡನನ್ನು ಕುರಿತು ಅವನ ಅಳಿಯನಿಗೆ ಆಡಿದ ಈ ಮಾತು ಜೋಗತಿಯೊಂದಿಗೆ ಬೆಳೆಸಬೇಕೆಂದಿದ್ದ ಸಂಬಂಧದಿಂದಲೇ ವಿಮುಖವಾಗಿಸಿ, ಗೌಡತಿಯೊಂದಿಗೆ ಅನ್ಯೋನ್ಯ ದಾಂಪತ್ಯಕ್ಕೆ ಎಡೆಮಾಡಿಕೊಡುತ್ತದೆ.

ಹರವಿಗೌಡರ ಮಗಳು ಪಾರ್ವತಿ ತನ್ನ ಬಾಲ್ಯದಲ್ಲಿ ಜಾತ್ರೆಯೊಂದರಲ್ಲಿ ಜನಜಂಗುಳಿಯ ಮಧ್ಯ ತನ್ನವರಿಂದ ಅಗಲಿದ್ದಾಗ, ನೆರವಾಗಿದ್ದ ಗೌಡನನ್ನೇ ಬಯಸಿ ಮದುವೆಯಾಗುತ್ತಾಳೆ. ರಾಜಕಾರ ಹಾವಳಿಯ ಸಂದರ್ಭದಲ್ಲಿ ದೂರ್ತನಾಗಿ ವರ್ತಿಸಿದ್ದ ಹುಸೇನಿ ತನ್ನ ಸಂಸಾರದೊಂದಿಗೆ ಬಂದು ಆಶ್ರಯ ಕೇಳುತ್ತಾನೆ. ಗೌಡರು ಹಿಂದೆ ಮುಂದೆ ನೋಡುತ್ತಿದಾಗ "ನೀ ಈ ಕಡೆ ಮಾಬಮ್ಮಾ ಹಬೀಬನ್ನ ಕರಕೊಂಡು ಅವರಿಗೆ ಹೇಳಿಬಿಡ್ರಿ ಇಲ್ಲೆ ಅಂಕಣದಾಗ ಮಲಕ್ಕೊಳ್ಳಿ ನಾಳೆ ಮುಂಜಾನೆ ನೋಡಿದರಾಯ್ತೆಂದು"[೮] ಕೊಟ್ಟ ನಿರ್ಣಯ ಗೌಡನ ದೃಷ್ಟಿಯಲ್ಲಿ ಗೌಡತಿ ಊರವರ ದೃಷ್ಟಿಯಲ್ಲಿ ಗೌಡ–ಗೌಡ್ತಿ ಇಬ್ಬರು ಬಹು ಎತ್ತರದ ವ್ಯಕ್ತಿಗಳಾಗುವಂತೆ ಮಾಡುತ್ತದೆ.

ಪಿತೃ ಸಂಸ್ಕೃತಿಯಲ್ಲಿ ನಿರ್ಣಯಾತ್ಮಕವಾದ ಅಧಿಕಾರವನ್ನು ಹೆಣ್ಣಿಗೆ ನೀಡಿದ್ದು ವಿರಳ, ಅವಳೇನಿದ್ದರೂ ಪುರುಷ ನಿರ್ಣಯಗಳನ್ನು ಕೇಳಿ ಪಾಲಿಸಬೇಕಾದವಳು. ಆದರೆ ಕೆಲವೊಮ್ಮೆ ಆಕಸ್ಮಿಕವಾಗಿ ದೊರೆತ ಅಂತ ಅವಕಾಶವನ್ನು ಮಹಿಳೆ ಅತ್ಯಂತ ಸಮರ್ಥವಾಗಿ ನಿರ್ವಹಿಸಿದ್ದಾಳೆ.

ಎಂ.ಜಿ.ದೇಶಪಾಂಡೆಯವರ 'ವಿಪಾರ್ಯಸ' ಕಥೆ ಹೆಣ್ಣಿಗಾಗಿ ಹೆಣ್ಣು ಮಿಡಿಯುವ, ಬದುಕನ್ನು ಹಸನಾಗಿಸುವ ಉದಾತ್ತ ವಸ್ತುವಿನದು. ಪ್ರಿಯಾ-ಪೂಜಾ ಜೀವದ ಗೆಳತಿಯರು. ಬಿಟ್ಟಿರಲಾರದ ಅನ್ಯೋನ್ಯತೆ ಅವರದು. ಪ್ರಿಯಾಳ ಮದುವೆ ನಿಶ್ಚಯವಾಗುತ್ತದೆ. ಅಪಘಾತವೊಂದರಲ್ಲಿ ಪೂಜಾ ಕಣ್ಣು ಕಳೆದುಕೊಳ್ಳುತ್ತಾಳೆ. ತನ್ನ ಮದುವೆಗೆ ಬರಲಾಗದ ಗೆಳತಿಯನ್ನು ಭೇಟಿಯಾಗಲು ಪತಿಯೊಂದಿಗೆ ಪ್ರಿಯಾ ಬರುತ್ತಿದ್ದಾಗ ರಸ್ತೆ ಅಪಘಾತದಲ್ಲಿ ಕೊನೆಯುಸಿರೆಳೆಯುತ್ತಾಳೆ. ಸಾಯುವ ಮೊದಲು ಕತ್ತಲಾದ ಗೆಳತಿಯ ಬದುಕಿಗೆ ಬೆಳಕಾಗಲು ತನ್ನ ಕಣ್ಣುಗಳನ್ನು ನೀಡಬೇಕೆಂದು ಮತ್ತು ತನ್ನ ಗಂಡ ಮಧು ಅವಳನ್ನು ಮದುವೆಯಾಗಬೇಕೆಂದು ಕೇಳಿಕೊಂಡು ಪ್ರಾಣಬಿಡುತ್ತಾಳೆ.

ಪ್ರಿಯಾಳ ಗಾಢ ಸ್ನೇಹದ ಪರಿಣಾಮ ಪೂಜಾಳ ಬದುಕು ಎಲ್ಲಂದದಲ್ಲೂ ಸುಧಾರಿಸುತ್ತದೆ. ನೆಲೆ ಕಾಣುತ್ತದೆ. ಹೆಣ್ಣಿಗೆ ಹೆಣ್ಣು ಶತ್ರುವೆಂಬ ಪುರುಷ ಚಿಂತನೆ ಇಲ್ಲಿ ಅರ್ಥ ಕಳೆದುಕೊಳ್ಳುತ್ತದೆ. ಸಾಯುವ ಗಳಿಗೆಯಲ್ಲೂ ಗೆಳತಿಗಾಗಿ ಚಿಂತಿಸುವ ಪ್ರಿಯಾ ಉದಾತ್ತ ವ್ಯಕ್ತಿತ್ವದವಳಾಗಿ ಪ್ರತಿನಿಧೀಕರಣಗೊಂಡಿದ್ದಾಳೆ. ಉದಾತ್ತತೆ ದೌರ್ಬಲ್ಯಗಳು ಗಂಡು-ಹೆಣ್ಣು ಇಬ್ಬರಲ್ಲೂ ಇರುತ್ತವೆ. ಸಂದರ್ಭಕ್ಕೆ ತಕ್ಕಂತೆ ಅವು ಹೊರಹೊಮ್ಮುತ್ತವೆ ಎಂಬುದನ್ನು ಕಥೆಯಲ್ಲಿ ಕಾಣಬಹುದಾಗಿದೆ. ಹೀಗೆ ಪ್ರಿಯಾ ಪೂಜಾಳ ಬದುಕನ್ನು ಕಟ್ಟಿಕೊಡುತ್ತಾಳೆ.

ಎಂ.ಜಿ.ದೇಶಪಾಂಡೆಯವರ 'ಚರಿತ್ರಹೀನ' ಕಥೆ ಪ್ರೀತಿಸಿ ಮದುವೆಯಾದ ಪತಿಯಿಂದಲೇ ಪರಿತ್ಯಜಿಸಲ್ಪಟ್ಟ ಮಾಯಾದೇವಿಯ ಬದುಕು ಮಗಳು ರಂಜಿನಳಿಂದ ಕಟ್ಟಲ್ಪಡುತ್ತದೆ.

ಮಾಯಾದೇವಿ ರಾಜೇಂದ್ರನಾಥ ಪರಸ್ಪರ ಪ್ರೀತಿಸಿ ಮದುವೆಯಾಗುತ್ತಾರೆ. ಒಂದು ಹೆಣ್ಣು ಮಗು ಜನಿಸುವವರೆಗೆ ಜೀವನ ಚನ್ನಾಗಿರುತ್ತದೆ. ಆನಂತರ ಮಾಯಾಳಲ್ಲಿ ಆಸಕ್ತಿ ಕಳೆದುಕೊಂಡು ರಾಜೇಂದ್ರನಾಥ ಹಣ ಮದದಲ್ಲಿ ದಿನಕ್ಕೊಂದು ಹೆಣ್ಣಿನ ಸಂಗದಲ್ಲಿ ಮಾಯಾಳಿಂದ ದೂರವಾಗುತ್ತಾನೆ. ಹೀಗೊಮ್ಮೆ ಆಳು ರಾಮುವಿಗೆ ಅಂದಿನ ರಾತ್ರಿಗಾಗಿ ಕುಡಿಯುವ ಹಾಗೂ ಹೊಸ ಹೆಣ್ಣಿನ ಸಿದ್ಧತೆಗೆ ಹೇಳಿದಾಗ ರಾಜೇಂದ್ರನಾಥನ ಎದುರು ಹೊಸ ಹೆಣ್ಣಾಗಿ ಬಂದವಳು ರಂಜಿನ್. ಅವನು ತನ್ನ ಮಗಳನ್ನು ಅಲ್ಲಿ ಕಂಡು ಗಾಬರಿಯಾಗುತ್ತಾನೆ. ರಂಜಿನ್ ತನ್ನಂಥ ಎಷ್ಟೋ ಹೆಣ್ಣುಗಳು ಬಲಿಯಾಗಿರುವಾಗ ತನ್ನನ್ನು ಅನುಭವಿಸಬಹುದೆಂದು ಹೇಳುತ್ತಾಳೆ. ರಾಜೇಂದ್ರನಾಥನ ಅಮಲು ಇಳಿಯುತ್ತದೆ. ಮಾಯಾದೇವಿಯೊಂದಿಗೆ ಮಗಳನ್ನು ಕರೆತಂದು ತನ್ನ ತಪ್ಪನ್ನು ಸುಧಾರಿಸಿಕೊಳ್ಳುತ್ತಾನೆ.

ಒಂದರ್ಥದಲ್ಲಿ ಗಂಡ-ಹೆಂಡತಿ ಒಂದಾದದ್ದು ಕಥೆಯ ಸುಖಾಂತವಾಗಿ ಕಂಡರೂ, ಇದೇ ತಪ್ಪನ್ನು ಮಾಯಾದೇವಿ ಮಾಡಿದ್ದರೆ ರಾಜೇಂದ್ರನಾಥ ಸ್ವೀಕರಿಸುತ್ತಿದ್ದನೇ ಎಂದು ಯೋಚಿಸಿದರೆ ಉತ್ತರ ನಕಾರಾತ್ಮಕವೆ ಆಗಿರುತ್ತದೆ. ಅಂದರೆ ಕಥೆಗಾರರು ಮಾಯಾದೇವಿಗೆ ನ್ಯಾಯಕೊಡಿಸುವ ಅವಸರದಲ್ಲಿ ಒಬ್ಬ ಚರಿತ್ರೆ ಹೀನನೊಂದಿಗೆ ಬಾಳಲು ಹೇಳುತ್ತಿರುವುದು ಪುರುಷ ಪ್ರಧಾನ ನಿಲುವಾಗಿಯೆ

ಪ್ರತಿನಿಧಿಸಲ್ಪಟ್ಟಿದೆ. ಆದರೆ ಇವರದೆ ಇತರ ಕಥೆಗಳನ್ನು ನೋಡುವಾಗ ಮಹಿಳೆಗಾದ ಅನ್ಯಾಯವನ್ನು ಅವರು ನಿಷ್ಪಕ್ಷಪಾತವಾಗಿ ಚಿತ್ರಿಸಿದ್ದಾರೆ. ಒಟ್ಟಾರೆ ತಪ್ಪು ನಡೆಯುವುದು ಸಹಜ ಕ್ಷಮಿಸಿ ಸುಧಾರಿಸಿಕೊಳ್ಳುವ ಮನಸ್ಸು ಇಬ್ಬರಲ್ಲೂಬೇಕೆಂಬ ದೃಷ್ಟಿಕೋನ ಕಂಡುಬರುತ್ತದೆ. ಸಮಾನತೆಯ ನೆಲೆಯಲ್ಲಿ ಇವರ ಕಥೆಗಳು ರೂಪುಗೊಂಡಿವೆ ಎಂದು ಹೇಳಬಹುದು.

ಸಂಧ್ಯಾ ಹೊನಗುಂಟಿಕರ ಅವರ 'ಜಿಜೀವಿಷಾ' ಕಥೆ ಆಘಾತದಿಂದ ಚೇತರಿಸಿಕೊಂಡ ಮಹಿಳೆ ಪುನಃ ಬದುಕು ಕಟ್ಟಿಕೊಳ್ಳುವುದಾಗಿದೆ. ಜೀವನ ಸುಖದ ಸುಪ್ಪತ್ತಿಗೆಯಲ್ಲಾ ಸುಖವಾಗಿ ಸಾಗುತ್ತದೆ ಎನ್ನುವಾಗಲೆ ಅವಘಡಕ್ಕೆ ಈಡಾಗುತ್ತದೆ. ಅಂಥ ಒಂದು ಅವಘಡಕ್ಕೊಳಗಾದ ಮಹಿಳೆ ಪುನಶ್ಚೇತನ ಪಡೆದು ಬದುಕಿಗೆ ಅಭಿಮುಖವಾಗುತ್ತಾಳೆ. ಆ ಅವಘಡ ಭೂಕಂಪವಾಗಿ ಬರುತ್ತದೆ. ಭೂಕಂಪದಲ್ಲಿ ಗಂಡ ರಾಜೀವ ಪ್ರಜ್ಞಾ ಶೂನ್ಯ ಸ್ಥಿತಿಗೆ ಹೋದರೆ, ಇಬ್ಬರು ಮಕ್ಕಳು ಅಸುನೀಗುತ್ತಾರೆ. ಆಘಾತಗೊಂಡ ನಾಯಕಿ ಕ್ರಿಯಾಶೂನ್ಯಳಾಗಿ, ಬದುಕಿರುವ ಗಂಡ ಮಗನನ್ನು ಅಲಕ್ಷಿಸುತ್ತಾಳೆ. ಆಘಾತದಿಂದ ಹೊರಬರಲಾಗದೆ ಕೊರಗುತ್ತಿದ್ದವಳಿಗೆ ಜೇಡ ತಾನು ನೇಯ್ದ ಬಲೆ ಹಾಳಾದರೂ ಬಿಡದೆ ಪುನಃ ಕಟ್ಟುವ ಛಲ, ಶ್ರಮ ಮತ್ತು ಇರುವೆಗಳ ಸತತ ಶ್ರಮ ಪ್ರಯತ್ನಗಳು ಚೇತರಿಕೆಯ ಕಾರಣವಾಗುತ್ತವೆ. ಇಲ್ಲಿ ಭೂಕಂಪದ ನೋವು ಆಘಾತ ದಂಪತಿಗಳೀರ್ವರಿಗೂ ಸಮಾನವಾಗಿ ತಟ್ಟಿದರೂ ಅದರಿಂದ ಬೇಗ ಚೇತರಿಕೆಗೊಂಡಿದ್ದು ಮಹಿಳೆಯೆ. ತನ್ನ ಗಂಡ ಮಗುವಿನ ಬದುಕಿಗೆ ತಾನೇ ಆಸರೆಯಾಗಬೇಕು ಎನ್ನುವ ತುಡಿತ ಬದುಕನ್ನು ಪುನಃ ಕಟ್ಟಿಕೊಳ್ಳಬೇಕೆಂಬ ಛಲವಾಗಿ ಅವಳಲ್ಲಿ ಕಾಣಿಸಿಕೊಳ್ಳುತ್ತದೆ. ಅಂಥ ಒಂದು ಶಕ್ತಿ ಅವಳಲ್ಲಿ ಅದಮ್ಯವಾಗಿದ್ದು ಸಂಕಷ್ಟದ ಸಂದರ್ಭದಲ್ಲಿ ಅದು ಅದ್ಭುತವಾಗಿ ಅಭಿವ್ಯಕ್ತಗೊಳ್ಳುತ್ತದೆ. ನಿಸರ್ಗ ಹೆಣ್ಣಿಗೆ ಅಂಥ ಶಕ್ತಿಯನ್ನು ನೀಡಿದೆ. ಆದರೆ ಅವಳ ಆಸಕ್ತಿ ಬಳಕೆಯಾಗದಂತೆ ಅವಳ ಸಾಮಾಜೀಕರಣ ತಡೆದಿರುತ್ತದೆ, ಪ್ರಸಂಗಾವಧಾನ ಸುಪ್ತಾವಸ್ಥೆಯಲ್ಲಿಯ ಆ ಸಾಮರ್ಥ್ಯ ಹೊರ ಹೊಮ್ಮುತ್ತದೆ. ಮಹಿಳೆ ಬದುಕು ಕಟ್ಟಿಕೊಳ್ಳಲು ಸಿದ್ಧಳಾಗುತ್ತಾಳೆ.

ಸಂಧ್ಯಾ ಹೊನಗುಂಟಿಕರ ಅವರ 'ಇಳಿ ಹೊತ್ತಿನಲ್ಲಿ ಕದ ತಟ್ಟಿದ ಅತಿಥಿ' ಕಥೆಯ ಡಾ.ಮಂದಾಕಿನಿ ತನ್ನ ಹರೆಯದಲ್ಲಿ ಎಲ್ಲರಂತೆ ಕನಸು ಕಾಣದೆ, ತಂದೆಯ ಪಾರ್ಶ್ವವಾಯುವಿನ ಕಾರಣದಿಂದ ಮನೆಯ ಜವಾಬ್ದಾರಿ ನಿರ್ವಹಿಸಲು ಸೇಲ್ಸ್‌ಗರ್ಲ್ ಆಗಿ ಕೆಲಸಕ್ಕೆ ಸೇರುತ್ತಾಳೆ. ತಂಗಿ ತಮ್ಮ ತಾಯಿಗೆ ಆಧಾರವಾಗುತ್ತಾಳೆ. ತಂಗಿ ತಮ್ಮಂದಿರಿಗೊಂದು ಭದ್ರ ನೆಲೆ ಒದಗಿಸುವುದರಲ್ಲೆ ಅವಳ ಯವ್ವನ ಕಳೆದಿರುತ್ತದೆ. ತನ್ನ ಮದುವೆಯ ಬಗ್ಗೆ ಆಲೋಚಿಸಲೂ ಆಗದೆ, ಈ ನಡುವೆ ಸ್ನಾತಕೋತ್ತರ ಪದವಿ ಪಡೆದು ಉಪನ್ಯಾಸಕಿಯಾಗುತ್ತಾಳೆ. ನಂತರ ಡಾಕ್ಟರೇಟ್ ಪದವಿಯನ್ನು ಪೂರೈಸಿ ಉತ್ತಮ ಶಿಕ್ಷಕಿ ಎಂಬ ಗೌರವಕ್ಕೂ ಪಾತ್ರಳಾಗುತ್ತಾಳೆ.

ಒಮ್ಮೆ ವಿದ್ಯಾರ್ಥಿಗಳೊಂದಿಗೆ ಪ್ರವಾಸಕ್ಕೆ ಹೋಗಿದ್ದಾಗ ತನ್ನ ನಲ್ವತ್ತೇಳನೇ ವಯಸ್ಸಿನಲ್ಲಿ ಪ್ರಧಾನ ಎಂಬ ಉಪನ್ಯಾಸಕರ ಆಕರ್ಷಣೆಗೊಳಗಾಗುತ್ತಾಳೆ. ಪರಸ್ಪರರಲ್ಲಿ ಈ ಭಾವ ಸಮಾನವಾಗಿ ಉದಿಸಿದಾಗಲೂ ಡಾ.ಮಂದಕಿನಿ ಈ ವಯಸ್ಸಿನಲ್ಲಿ ಮದುವೆಯ ಕುರಿತು ಸಾಕಷ್ಟು ಯೋಚಿಸಿದ ನಂತರ ಅದೊಂದು ಅನಿವಾರ್ಯವಲ್ಲವೆಂಬ ನಿರ್ಣಯಕ್ಕೆ ತಲುಪುತ್ತಾಳೆ. ವಯಸ್ಸಲ್ಲದ ವಯಸ್ಸಲ್ಲಿ ತನ್ನಲ್ಲುದಿಸಿದ ಆಕರ್ಷಣೆಗೆ ಕೊರಳೊಡ್ಡದೆ ವಾಸ್ತವ ಮುಖಿಯಾಗುತ್ತಾಳೆ. ಇಳಿಹೊತ್ತಿನ ಮದುವೆ ಸಮಸ್ಯೆಯಾಗಬಹುದೆ ವಿನಃ ಆಸರೆಯಾಗುವುದಿಲ್ಲ ಎಂಬುದನ್ನು ಕಂಡುಕೊಳ್ಳುತ್ತಾಳೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣು-ಗಂಡಿನ ಪಾತ್ರಗಳು ಪೂರ್ವನಿರ್ಧಾರಿತವಾಗಿರುತ್ತವೆ. ಗಂಡುಹೊರಗೆ ದುಡಿದು ಆರ್ಥಿಕ ಹೊಣೆ ಹೊರಬೇಕು. ಹೆಣ್ಣು ಗೃಹ ಕೃತ್ಯಗಳನ್ನು ನಿಭಾಯಿಸಬೇಕು. ಹೆಣ್ಣಿನ ಜೀವನದಲ್ಲಿ ಮದುವೆ ಅತ್ಯಂತ ಅನಿವಾರ್ಯ ಅದಿಲ್ಲದೆ ಅವಳಿಗೆ ಮೋಕ್ಷವೇ ಇಲ್ಲ. ತಾಯ್ತನ ಪಡೆದಾಗಲೇ ಹೆಣ್ಣಿನ ಜೀವನದ ಸಾರ್ಥಕತೆ ಹೆಣ್ಣಿಗೆ ಗಂಡಿನ ಆಸರೆ ಬೇಕೇಬೇಕು. ಮೊದಲಾದ ಯಾವ ನಿಯಮಗಳೂ ಡಾ.ಮಂದಾಕಿನಿಯ ಜೀವನದಲ್ಲಿ ಕಾರ್ಯಗತವಾಗುವುದಿಲ್ಲ. ಇವೆಲ್ಲ ಇಲ್ಲದೆಯೂ ಹೆಣ್ಣೊಬ್ಬಳು ಬದುಕು ಕಟ್ಟಿಕೊಳ್ಳಬಹುದೆಂಬುದನ್ನು ಮಂದಾಕಿನಿಯ ಬದುಕು ಪ್ರತಿನಿಧಿಸುತ್ತದೆ.

ಅಮರೇಶ ನುಗುಡೋಣಿಯವರ 'ದಾರಿ ಮೂಡಿಸುವ ಹೆಜ್ಜೆಗಳು' ಕಥೆ ತಿಮ್ಮಕ್ಕ ಬದುಕು ಕಟ್ಟಿಕೊಳ್ಳುವ ವಸ್ತುವಿನದು. ಬಂಡಾಯದ ಬಹುಪಾಲು ಗುಣಗಳನ್ನು ಒಳಗೊಂಡಿರುವುದು ಅದರ ಅರ್ಥವಂತಿಕೆಯನ್ನು ಹೆಚ್ಚಿಸಿದೆ. ಬದುಕನ್ನು ಕಿಲುಬುಗಟ್ಟಿಸುವ ಸಾಂಪ್ರದಾಯಿಕತೆಯನ್ನು ವೈಯಕ್ತಿಕ ಜರೂರಿನಿಂದ ಧಿಕ್ಕರಿಸುವುದು, ಜೀವನವನ್ನು ಹೊಸದಾಗಿ ಕಟ್ಟುವಂತೆ ಮಾಡುತ್ತದೆ. ಎಮ್ಮೆ ತಿಮ್ಮಕ್ಕನ ಬಾಳನ್ನು ಹೇಳುತ್ತಲೆ ಕಥೆ ನಮ್ಮ ಸಮಾಜದ ಜಾತಿ, ಮತ, ಮಠ ಜಮೀನುದಾರಿಕೆ ಎಲ್ಲವನ್ನು ಚಿತ್ರಿಸುತ್ತ ಅವುಗಳಿಂದ ಬಿಡುಗಡೆ ಪಡೆಯುವ ಶಕ್ತಿಯನ್ನು ಪ್ರದರ್ಶಿಸುತ್ತದೆ. ತಿಮ್ಮಕ್ಕಗೆ ಜಾತಿ ಅರ್ಥಹೀನ ಸಂಸ್ಥೆಯಾಗಿ ಅನುಭವಕ್ಕೆ ಬಂದಿದೆ, ಅವಳಲ್ಲಿ ಉಕ್ಕುವ ಮಾನವೀಯ ಸ್ಪಂದನ ಜೀವನ ಪ್ರೀತಿಯಿಂದ ಬಂದುದು. ಅವಳ ವ್ಯಕ್ತಿತ್ವ ಯಾವುದೇ ಸಿದ್ಧಾಂತದಿಂದ ಬರದೆ ಬದುಕಿನ ನೇರ ಸಂಘರ್ಷದಿಂದ ರೂಪಿತವಾಗಿದೆ. ಕಥೆಯಿಂದಲೇ ತತ್ವ ಅರಳಿ ಜೀವನದ ರೀತಿಯಾಗುವುದು ಸುಂದರವಾಗಿದೆ. ವಸ್ತುವನ್ನು ರಕ್ತಮಾಂಸವನ್ನಾಗಿ ಮಾಡಿರುವುದು ಈ ಕಥೆಯ ವಿಶೇಷ, ತಿಮ್ಮಕ್ಕ ತನ್ನ ದಿಟ್ಟತನದಿಂದಾಗಿ ಜೀವನವನ್ನು ಸ್ವೀಕರಿಸುವ ಮುಕ್ತ ಮನಸ್ಸಿನಿಂದಾಗಿ ಓದುಗರ ಮನಸ್ಸಿನಲ್ಲಿ ನೆಲೆ ನಿಲ್ಲುತ್ತಾಳೆ.

ತನ್ನ ಮೇಲೆ ಎಷ್ಟೇ ದೌರ್ಜನ್ಯ ನಡೆದರೂ, ಬದುಕು ಅತಂತ್ರವಾದರೂ ಯಾರನ್ನು ದೂರದೆ ಎಲ್ಲರೊಂದಿಗೆ ಬೆರೆತು ಬಾಳುತ್ತಾಳೆ. ತಿಮ್ಮಕ್ಕ ತನ್ನ ಮಗಳನ್ನು ನೆಲೆಗಾಣಿಸಲು ನಿರಂತರ

ಪ್ರಯತ್ನ ಶೀಲಳಾಗಿರುತ್ತಾಳೆ. ಅಷ್ಟರಲ್ಲಿ ಹುಸೇನಿ ತಮ್ಮ ಮಗಳ ಬಸಿರಿಗೆ ಕಾರಾಣವೆಂದು ತಿಳಿದಾಗ ಮಗಳ ಕೆಟ್ಟ ಬದುಕನ್ನು ಸರಿಪಡಿಸಲು ಒಂದು ಕೈಯಲ್ಲಿ ತಾಳಿ ಇನ್ನೊಂದು ಕೈಯಲ್ಲಿ ಕುಡುಗೋಲು ಹಿಡಿದು ಹೊರಡುತ್ತಾಳೆ. ಮಧ್ಯ ಗುಡಿ ಎದುರು ನಿಂತು "ಮಾರೆವ್ವ ತಾಯಿ... ನೀನೇ ನನ್ನ ದೈವ ಉಳುಸದು ಅಳುಸದು ನಿನ್ನ ಕೈಯಾಗಾದ. ನಾ ಕೆಟ್ಟೇನಿ ಕರೆವು. ಅಂಗಂತ ನಾ ಚಿಂತಿ ಮಾಡಿಲ್ಲ, ಬದುಕು ನೀ ಕೊಟ್ಟಂಗ ನಾನು ನುಂಗಿಕೊಂಡು ಉಳಿದು ಬದುಕೀನಿ. ನನ್ನಾಂಗ ನನ್ನ ಮಗಳು ಬಾಳಿವಿ ಆಗ ಬಾರದಂತ ಅಂದುಕೊಂಡಿದ್ದೇನವ್ವ ಆದ್ರೆ ಈಗ ಆಕಿ ದಾರಿ ತಪ್ಪ್ಯಾಳೆ. ಎಂದೂ ನಾ ನಿನ್ನ ಏನೂ ಕೇಳಿಲ್ಲ. ಈಗಲೂ ಕೇಳಾಕ ನಿಂತಿಲ್ಲ. ನನ್ನ ಮಗಳನ್ನ ಆ ಹುಸೇನಿ ಹಾಳುಮಾಡ್ಯಾನ. ಈಗ ಅವುನು ನನ್ನ ಮಗಳಿಗೆ ತಾಳಿ ಕಟ್ಟಿ ಮನ್ಯಾಗ ಕರಕಳ್ಳಿ ನನಗೇನೂ ಜಾತಿ ಗೀತಿಯಿಲ್ಲ! ನನ್ನ ಮಗಳನ್ನು ತಾಳಿಕಟ್ಟಿ ಮನ್ಯಾಗ ಕರಕಂಡ್ರ ಸರಿ. ಇಲ್ಲಂದ್ರ ಈ ಕುಡುಗಲ್ಲಿನಿಂದ ಅವುನ್ನ ಕಡಿದು ನಿನಗ ಬಲಿ ಕೊಡ್ತೀನಿ ಇದೇ ನನ್ನ ದಾರಿ"[೯] ಎಂದು ಹೊರಡುವ ತಿಮ್ಮಕ್ಕ ನ್ಯಾಯಕ್ಕಾಗಿ ಗೋಗರೆಯದೆ ನ್ಯಾಯವನ್ನು ಸ್ಥಾಪಿಸುವ ದೃಢತೆಯನ್ನು ಸಾರುತ್ತಾಳೆ. ಮಗಳ ಕೆಟ್ಟಬದುಕನ್ನು ಕಟ್ಟಲು ಸ್ವತಃ ಟೊಂಕಕಟ್ಟುತ್ತಾಳೆ.

ಶ್ರೀಕಾಂತ ಪಾಟೀಲರ 'ಗಟ್ಟಿ ಎಳೆ' ಕಥೆ ಬಾಲ್ಯ ವಿವಾಹವಾದ ಸುಗಂಧಿ ತನ್ನ ಬದುಕನ್ನು ತಾನೇ ಕಟ್ಟಿಕೊಳ್ಳುವಂತದ್ದು. ಹಗಲು ರಾತ್ರಿ ದುಡಿದು ಗಂಡ ವಕೀಲನಾಗಲು ಕಾರಣವಾಗುವ ಆದರೆ ಆ ಗಂಡ ತಾನು ನೆಲೆ ಕಂಡ ನಂತರ ಹೆಂಡತಿ ದಡ್ಡಿ ಎಂದು ವಿಚ್ಛೇದನ ಕೊಡುವುದನ್ನು ಚಿತ್ರಿಸುತ್ತದೆ.

ಸುಗಂಧಿ ಹಿರಿಯರಿಚ್ಛೆಯಂತೆ ಸೋದರಮಾವನನ್ನು ಮದುವೆಯಾಗಿ ತಾನೇ ದುಡಿದು ಅವನಿಗೊಂದು ನೆಲೆ ಕಾಣಿಸುತ್ತಾಳೆ. ಆದರೆ ಕೃತಘ್ನ ಚಂದ್ರಕಾಂತ ಹೆಂಡತಿ ತನಗೆ ಅರ್ಹಳಲ್ಲವೆಂದು ವಿಚ್ಛೇದನ ನೀಡುತ್ತಾನೆ. "ನಾ ಹಾಲ ಎರ್ದಿದ್ದು ಹಾವಿಗಂತ ಈಗ ಗೊತ್ತಾಯ್ತು' ಎಂದು ಹೇಳುವ ಸುಗಂಧಿ ಮರುಗಳಿಗೆ ತನಗಾಗಿ ನೊಂದ ತಾಯಿ 'ಎವ್ವಾ ನೀವ್ಯಾರೂ ಚಿಂತಿ ಮಾಡಬ್ಯಾಡ್ರಿ ನನ್ನ ಹೊಟ್ಯಾಗಿನ ಕೂಸಿಗಿ ಪರದೇಶಿ ಬಾಳ್ಯಾಮಾಡಿ ನರಕದಾಗ ಹಾಕಾಲ. ದಿವಸ ತುಂಬಿ ಜನ್ಮ ಕೊಡ್ತೀನಿ. ಅದರ ಕಾಲಮ್ಯಾಲ ತಾ ನಿಲ್ಲೂ ತನಕಾ ಜ್ವಾಪಾನ ಮಾಡ್ತಿನಿ. ಅಂವಾ ಸುಖದ ಬೆನ್ನ ಹತ್ತಿ ಹೋದ್ರ ಹೋಗಲಿ"[೧೦] ಎಂದು ಹೆಳುವ ಸುಗಂಧಿ ಈಗಾಗಲೇ ತಾನಿಟ್ಟ ಭರವಸೆ ಕುಸಿದಿದ್ದರೂ ಪುನಃ ಅಂಥದೇ ಸಾಹಸಕ್ಕೆ ಕೈಹಾಕುವ ಛಲವಂತಿಕೆಯನ್ನು ತೋರುತ್ತಾಳೆ. ಆದರೆ ಈ ಬಾರಿ ನಿರೀಕ್ಷೆಯನ್ನಿಟ್ಟುಕೊಳ್ಳದೆ ಕೇವಲ ಕರ್ತವ್ಯವೆಂಬ ಸ್ಥಿರಪ್ರಜ್ಞತೆ ಅವಳದಾಗುತ್ತದೆ. ಯಾರೋ ಮಾಡಿದ ತಪ್ಪಿಗೆ ಯಾರಿಗೋ ಶಿಕ್ಷೆ ಸಲ್ಲದೆಂಬ ಭಾವವಿದ್ದರೂ ಹುಟ್ಟುವ ಮಗು ಗಂಡಾದರೆ, ಬೆಳೆದು ದೊಡ್ಡವನಾದ ಮೇಲೆ ಬಹುಶಃ ಅವನೂ ಮಾಡಿದವರನ್ನು ಮರೆತು ಸುಖವನ್ನರಿಸಿ ಹೋಗುವವನೆ

ಎಂಬ ಅಂಶ ಸೂಚ್ಯವಾಗಿ ಕಥೆಯಲ್ಲಿ ಮಂಡಿತವಾಗಿದೆ. ಗಂಡನ ಬದುಕನ್ನು ಕಟ್ಟಿಕೊಟ್ಟು ತನ್ನ ಬದುಕನ್ನೂ ಕಟ್ಟಿಕೊಳ್ಳುವ ನಿಟ್ಟಿನಲ್ಲಿ ಸುಗಂಧಿಯ ಪ್ರಯತ್ನ ಮೆಚ್ಚುವಂತದ್ದು.

ಹೀಗೆ ಇಲ್ಲಿ ಚರ್ಚೆಗೊಂಡ ಮಹಿಳೆಯ ಚಿತ್ರಣ ಜೀವನದ ದುರ್ಭರ ಪರಿಸ್ಥಿತಿಗಳಲ್ಲಿ ತಮ್ಮೊಳಗಿನ ಸಾಮರ್ಥ್ಯವನ್ನು ಬಳಸಿಕೊಂಡು ಅತ್ಯಂತ ಸಮರ್ಥವಾಗಿ ಬದುಕನ್ನು ಕಟ್ಟಿಕೊಳ್ಳುತ್ತಾರೆ. ಇತರರಿಗೆ ಮಾದರಿ ಎಂಬಂತೆ ಬದುಕುತ್ತಾರೆ. ಯಾರ ಆಸರೆ, ಸಹಾಯಕ್ಕಾಗಿ ನಿರೀಕ್ಷಿಸದೆ ತಮ್ಮ ಮೇಲೆ ನಂಬಿಗೆ ಇಟ್ಟುಕೊಂಡು ಸ್ವಾಭಿಮಾನದಿಂದ ಬದುಕುತ್ತಾರೆ. ತಮ್ಮನ್ನು ಆಶ್ರಯಿಸಿ ಬಂದವರ, ತಮ್ಮನ್ನೆ ನಂಬಿದವರ ಬದುಕನ್ನು ಕಟ್ಟಿಕೊಡುತ್ತಾರೆ. ಬದುಕಿ ಬದುಕಿಸುವ ಜೀವಪರ ಕಾಳಜಿಯವರಾಗಿದ್ದಾರೆ.

ಹೀಗೆ ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಮೂಡಿಬಂದ ಅನೇಕ ಮಹಿಳೆಯರು ಜೀವನದಲ್ಲಿ ಹತ್ತು ಹಲವು ಸಮಸ್ಯೆಗಳಲ್ಲಿ ಸಿಲುಕಿದರೂ ಬುದ್ಧಿವಂತಿಕೆ, ಧೈರ್ಯದಿಂದ ಅವನ್ನು ಎದುರಿಸಿ ತಮ್ಮ ಬದುಕನ್ನು ಕಟ್ಟಿಕೊಳ್ಳುತ್ತಾರೆ. ಸ್ವಂತಿಕೆಯ ಬಲದಲ್ಲಿ ತಮ್ಮ ಬದುಕನ್ನು ಕಟ್ಟಿಕೊಂಡದ್ದಲ್ಲದೆ ಇತರರ ಬದುಕು ಕಟ್ಟಿಕೊಡುವಲ್ಲಿ ಶ್ರಮಿಸುತ್ತಾರೆ. ವ್ಯವಸ್ಥೆಯ ಹುನ್ನಾರಗಳು, ಕುತಂತ್ರಗಳು, ರಾಜಕಾರಣ ಯಾವುದೂ ಇವರನ್ನು ವಿಮುಖರಾಗುವಂತೆ ಮಾಡಲು ಶಕ್ತರಾಗುವುದಿಲ್ಲ. ಅಂಥ ಆತ್ಮಬಲದ ಕಾರಣ ಘನವಾದ ವ್ಯಕ್ತಿತ್ವಗಳಾಗಿ ರೂಪಗೊಳ್ಳುತ್ತಾರೆ. ಇತರರ ಬದುಕಿಗೆ ಆಸರೆಯಾದ, ಅನಾಥ ಮಕ್ಕಳ ತಾಯಂದಿರಾದ, ಬೇರೆಯವರ ಕಷ್ಟಕ್ಕೆ ಮಿಡಿದ, ಜೀವ ರಕ್ಷಕರಾದ, ವ್ಯವಸ್ಥೆಯ ವಿರುದ್ಧ ಸೆಣಸಿದ ಈ ಮಹಿಳೆಯರದು ಮಾದರಿ ರೂಪವಾಗಿದೆ.

**ವಿವಾಹ ಸಮಸ್ಯೆಗಳು:**

ವಿವಾಹ ಕೇಂದ್ರಿತ ಸಮಸ್ಯೆಗಳಲ್ಲಿ ಬಾಲ್ಯವಿವಾಹ, ಪ್ರೌಢವಿವಾಹ, ದಾಂಪತ್ಯ, ಅನ್ಯ ಸಂಬಂಧ, ಕುಡಿತ, ಹಿಂಸೆ ಮರ್ಯಾದೆ ಮೀರಿದ ವರ್ತನೆ ಅಸಮವಯಸ್ಸು, ಗಂಡು ಸಂತಾನದ ಅಪೇಕ್ಷೆ, ಮರುವಿವಾಹ, ಅರಕ್ಷಿತ ಸ್ಥಿತಿ, ಹೆಂಡತಿಯನ್ನು ನಿಯಂತ್ರಿಸಬೇಕೆಂಬ ಹಟ, ಪಾಲಕರ ಸ್ವಾರ್ಥಗಳು ಮಹಿಳೆಯ ಬದುಕನ್ನು ಸಂಕಷ್ಟಕ್ಕೆ ದೂಡುತ್ತವೆ. ವಿವಾಹ ಕುಟುಂಬಗಳೆ ಮಹಿಳೆಯ ಅಧೀನ ಸ್ಥಿತಿಗೆ ಕಾರಣವೆಂದು ಪರಿಭಾವಿಸುವ ಮಹಿಳಾವಾದಿಗಳ ನಿಲುವು ಸರಿಯಾದುದೆ ಎಂಬುದನ್ನು ಕಥಾ ಸಾಹಿತ್ಯದ ಮಹಿಳಾ ಬದುಕು ಸಮರ್ಥಿಸುವಂತೆನಿಸುತ್ತದೆ. ಮುಂದೆ ಇವನ್ನು ವಿವರವಾಗಿ ಪರಿಶೀಲಿಸಲಾಗಿದೆ.

**ಬಾಲ್ಯವಿವಾಹ :**

'ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಅಪ್ರಾಪ್ತ ವಯಸ್ಕ ವಿವಾಹಗಳು ಅಪರೂಪವೇನಲ್ಲ. ಹೆಣ್ಣು ಮಗು ಜನಿಸಿದರೆ ಅದೊಂದು ಕುಟುಂಬಕ್ಕೆ ಹೊರೆ ಎನ್ನುವ ನೆಪದಲ್ಲಿ ಪೋಷಕರು ಆ

ಮಗುವನ್ನು ಕೊಲ್ಲುವ ಮಾರಾಟ ಮಾಡುವ ಪದ್ಧತಿ ಅಸ್ತಿತ್ವದಲ್ಲಿದೆ, ಹೀಗಿರುವಾಗ ಚಿಕ್ಕ ವಯಸ್ಸಿನ ಮಕ್ಕಳ ವಿವಾಹ ಒಂದು ಮಹತ್ವದ ಸಂಗತಿಯೇ ಅಲ್ಲ. ಹೆಣ್ಣು ಮಕ್ಕಳು ಪ್ರಾಪ್ತವಯಸ್ಸಿಗೆ ಬರುವ ಮುನ್ನವೇ ಅವರಿಗೆ ವಿವಾಹ ಮಾಡಬೇಕು, ಇಲ್ಲದಿದ್ದರೆ ಆಕೆ ಪ್ರತಿಬಾರಿ ಋತುಮತಿಯಾದಾಗ, ಒಂದು ಭ್ರೂಣವನ್ನು ಕೊಂದ ಪಾಪ ಆಕೆಯ ಪೋಷಕರಿಗೆ ತಟ್ಟುತ್ತದೆ. ಎಂಬ ಯಜ್ಞವಲ್ಕ್ಯ ಮುನಿಯ ಮಾತುಗಳು ಸ್ಮೃತಿಗಳ ಕಾಲದಲ್ಲಿ ವಿವಾಹದ ವಯಸ್ಸನ್ನು ಕುರಿತಂತೆ ಅಸ್ತಿತ್ವದಲ್ಲಿದ್ದ ಧೋರಣೆಗೆ ಸಾಕ್ಷಿಯಾಗಿವೆ."[೧೧] ವಿವಾಹವೆಂಬುದು ಒಂದು ಆಟವೇ ಎಂದು ಭಾವಿಸಿ ವಿವಾಹವಾಗುವ ಹೆಣ್ಣು ಗಂಡುಗಳು ಪ್ರಾಪ್ತ ವಯಸ್ಕರಾದಾಗ ವಾಸ್ತವದ ಅರಿವಾಗಿ ಪಶ್ಚಾತ್ತಾಪ ಪಡಬಹುದು. ಅವರ ಬದುಕು ಕಷ್ಟಕೋಟಲೆಗೆ ಈಡಾಗಬಹುದು. ಇಂತಹ ಕಷ್ಟವನ್ನು ವಿಶೇಷವಾಗಿ ಎದುರಿಸುವವಳು ಮಹಿಳೆ. ಪುರುಷ ತನಗೆ ಬೇಡದ ಹೆಣ್ಣನ್ನು ತಿರಸ್ಕರಿಸಿ ಬೇರೆ ವಿವಾಹವಾಗಬಹುದು. ಅಂತಹ ಸಂದರ್ಭಗಳಲ್ಲಿ ಮಹಿಳೆ ಜೀವನವಿಡೀ ತಾಳಿ ಕಟ್ಟಿದ ಪುರುಷನ ಹೆಸರಿನಲ್ಲಿ ಕಳೆಯಬೇಕು. ಅವಳು ಕುಳಿತರು ತಪ್ಪು, ನಿಂತರೂ ತಪ್ಪು ಎನ್ನುವಂತೆ ಬದುಕು ಕತ್ತಿಯ ಮೇಲಿನ ನಡಿಗೆಯಾಗುತ್ತದೆ. ತನ್ನೆಲ್ಲ ಆಸೆ ಆಂಕಾಕ್ಷೆಗಳನ್ನು ಬಲಿಕೊಟ್ಟು ಸಾಮಾಜಿಕ ನಿರೀಕ್ಷೆಯಂತೆ ಬದುಕುವುದು ಅವಳಿಗೆ ಅನಿವಾರ್ಯವಾಗುತ್ತದೆ.

ಅಮರಾನಂದರು ಮುಂದಾಗಬಹುದಾದ ಸಂಗತಿಯನ್ನು ನಿವಾರಿಸಿ ಮಾನವೀಯವಾಗಿಸುತ್ತಾರೆ. ಮಹಿಳಾ ಸಂವೇದನೆಯಲ್ಲಿ ಕಥೆಗೆ ಜೀವ ತುಂಬಿದ್ದಾರೆ. ಅವಕಾಶ ದೊರೆತರೆ ಹೆಣ್ಣು ತನ್ನ ಅನನ್ಯತೆಯನ್ನು ಸಾಬೀತುಗೊಳಿಸುತ್ತಾಳೆ ಎಂಬುದನ್ನು ನಿರೂಪಿಸುತ್ತಾರೆ.

ಅಮರಾನಂದ ಬೆಟ್ಟದೂರ್‌ರರೆಂದೇ ಖ್ಯಾತರಾದ ಚನ್ನಬಸಪ್ಪನವರ 'ಹೆಣ್ಣು ಮಕ್ಕಳೇ ಬಲ್ಲರು' ಕಥೆ ಬಾಲ್ಯ ವಿವಾಹದ ಸಮಸ್ಯೆಯನ್ನು ಹೇಳುವಂತದ್ದು. ವಿವಾಹ ಮಹಿಳೆಯ ಬದುಕಿನ ಅತ್ಯಂತಿಕವು ಸರ್ವಸ್ವವು ಎಂದು ಭಾವಿಸಿದ ಸಾಮಾಜಿಕ ವ್ಯವಸ್ಥೆಯಲ್ಲಿ ಚನ್ನಮ್ಮನ ವಿವಾಹ ಬಾಲ್ಯದಲ್ಲಿಯೇ ನೆರವೇರುತ್ತದೆ. ಮಹಿಳೆಗೆ ವಿದ್ಯೆ ಅನಿವಾರ್ಯವೆಂದು ಭಾವಿಸಿದ ಪರಿಸರದಲ್ಲಿ ಅನಕ್ಷರಸ್ಥಳಾಗಿರುವ ಹೆಂಡತಿಯಿಂದಾಗಿ ವಿದ್ಯಾವಂತ ಗಂಡು ಮಲ್ಲಿಕಾರ್ಜುನ ತನ್ನ ಬಾಳೆ ಬವಣೆಯಾಗುತ್ತದೆ ಎಂದು ಬೇಸರ ಪಟ್ಟಾಗ ಸಹಪಾಠಿ ಮಹಾದೇವಿ "ಕೈ ಹಿಡಿದ ಹೆಂಡತಿಗೆ ಸುಲಭವಾಗಿ ವಿದ್ಯೆ ಕಲಿಸಿ ಒಬ್ಬ ಹೆಣ್ಣು ಮಗಳನ್ನು ಉದ್ಧಾರ ಮಾಡಿದ ಪುಣ್ಯ ನಿಮ್ಮ ಪಾಲಿಗೆ ಬರುವುದು"[೧೨] ಎಂದು ಹೇಳುತ್ತಾಳೆ.

ಚನ್ನಮ್ಮ ಮಲ್ಲಿಕಾರ್ಜುನನ ನಿರೀಕ್ಷೆಯಂತೆ ವಿದ್ಯಾವಂತಳಾಗುತ್ತಾಳೆ. ಅವನ ವೈದ್ಯವೃತ್ತಿಯಲ್ಲಿ ಸಹಾಯಕಳೂ ಆಗುತ್ತಾಳೆ. ಅಷ್ಟೇ ಅಲ್ಲ ಮಕ್ಕಳಿಲ್ಲದ ಮಹಿಳೆಯು ಸಮಸ್ಯೆಗೆ ಸಮರ್ಥವಾಗಿ ಉತ್ತರಿಸುವ ಮೂಲಕ ಅವಳ ಗಂಡನ ಮರುಮದುವೆ ತಪ್ಪಿಸಿ ಅನಾಥ ಮಗುವೊಂದನ್ನು ದತ್ತಕ್ಕೆ

ಸ್ವೀಕರಿಸುವಂತೆ ಪ್ರೇರಣೆ ನೀಡುತ್ತಾಳೆ. ಸುಧಾರಣಾವಾದಿ ದೃಷ್ಟಿಕೋನದಲ್ಲಿ ಮೂಡಿಬಂದ ಕಥೆ ಇದಾಗಿದ್ದು, ಮಹಿಳಾಪರ ಸಂವೇದನೆಯೊಂದಿಗೆ ಪುರುಷನ ಬಹುಪತ್ನಿತ್ವವನ್ನು ನಿರಾಕರಿಸುವುದಾಗಿದೆ. ಬಹುಪತ್ನಿತ್ವ ಮಹಿಳೆಯರ ಬದುಕನ್ನು ಗೋಳಾಗಿಸುವಂತದ್ದು. ಮಕ್ಕಳಿಲ್ಲವೆಂಬ ಕಾರಣಕ್ಕೆ ಮರುಮದುವೆಯಾಗುವ ಬದಲು ಅನಾಥ ಮಗುವನ್ನು ದತ್ತು ಪಡೆಯುವುದರಿಂದ ಮಕ್ಕಳಿಲ್ಲದ ಕೊರತೆ ನೀಗುವುದಲ್ಲದೆ ಅನಾಥ ಮಗುವೊಂದಕ್ಕೆ ಪಾಲಕರು ಲಭಿಸುವ ಮಾನವೀಯ ಸ್ಪಂದನ ಸ್ವೀಕಾರಾರ್ಹವಾದುದು.

ಪುರುಷ ತನಗೆ ಸಾಮಾಜಿಕವಾಗಿ ದತ್ತ ಸ್ವಾತಂತ್ರ್ಯವನ್ನು ವಿವೇಚನೆಯಿಂದ ಬಳಸಿಕೊಂಡರೆ, ಮಹಿಳೆಯ ಬದುಕು ಸಮಸ್ಯಾತ್ಮಕವಾಗದೆಂಬ ಆಶಯ ಇಲ್ಲಿಯದು. ವಿವಾಹವೇ ಅಂತಿಮವಲ್ಲ. ಅನಂತರವೂ ಮಹಿಳೆ ವಿದ್ಯಾರ್ಜನೆ ಮಾಡುವ ಮೂಲಕ ತನ್ನ ಬದುಕನ್ನು ಉನ್ನತೀಕರಿಸಿಕೊಳ್ಳಬಹುದು. ತನ್ನದೇ ಸ್ಥಾನಮಾನ ಕಲ್ಪಿಸಿಕೊಳ್ಳಬಹುದೆಂಬ ಆಶಯವೂ ಕಥೆಗಾರರದಾಗಿದೆ. ಆದರೆ ಮಹಾದೇವಿಯ ಮೂಲಕ ಹೇಳಿಸುವ ಉದ್ಧರಿಸುವ ಮಾತು ಪುರುಷ ಪ್ರಧಾನ ನಿಲುವಾಗಿ ವ್ಯಕ್ತವಾಗಿದೆ.

ಶಾಸ್ತ್ರಗಳು ಆಯಾಕಾಲದ ಜೀವನ ನಿರ್ವಹಣೆಗೆ ಮನುಷ್ಯ ನಿರ್ಮಿಸಿಕೊಂಡ ಸಾಮಾಜಿಕ ನಿಯಮಗಳು. ಈ ನಿಯಮಗಳು ಸಾರ್ವಕಾಲಿಕವಾಗಬಾರದು, ಬದಲಾಗುತ್ತಿರುವ ಜೀವನ ಕ್ರಮಕ್ಕನುಗುಣವಾಗಿ ಶಾಸ್ತ್ರಗಳೂ ಬದಲಾಗಬೇಕು. ಹಾಗೇ ಬದಲಾಗದಿದ್ದರೆ ಅವು ಬದುಕನ್ನು ಬಾಧಿಸುತ್ತವೆ. ಅದರಲ್ಲೂ ಮಹಿಳಾ ಬದುಕನ್ನು ಹೆಚ್ಚು ಬಾಧಿಸುತ್ತವೆ. ವಿವಾಹದ ನಿಯಮಗಳು ವಿಶೇಷವಾಗಿ ಮಹಿಳಾ ಬದುಕಿಗೆ ಅನ್ವಯಿಸಿ ಸೃಷ್ಠಿಯಾಗಿದ್ದು, ಅವಳ ಬದುಕನ್ನು ಬವಣೆಯಾಗಿಸಿವೆ ಎಂಬುದನ್ನು ಜಯತೀರ್ಥ ರಾಜಪುರೋಹಿತರ 'ರೋಹಿಣಿ' ಕಥೆ ಪ್ರತಿನಿಧಿಸುತ್ತದೆ. ಮೂಲತಃ ಈ ಕಥೆ ಒಂದು ಜನಪದ ಕಥೆಯನ್ನು ಆಧರಿಸಿದ್ದು ಬ್ರಾಹ್ಮಣಿಯೊಬ್ಬಳು ಬುಡಕಟ್ಟು ಯುವಕ ಡಾಕ್ಯಾನನ್ನು ವರಿಸಬೇಕಾದ ಅನಿವಾರ್ಯತೆಯನ್ನು, ಆ ಕಾರಣಕ್ಕಾಗಿಯೆ ಲಂಬಾಣಿಗಳು ಆರ್ಯವರ್ಗಕ್ಕೆ ಸೇರಿದ ಹಿನ್ನೆಲೆಯನ್ನು ವಿವರಿಸುತ್ತದೆ.

ವೇದ ಶಾಸ್ತ್ರಗಳಲ್ಲಿ ಹೇಳಿದ 'ಅಷ್ಟವರ್ಷ ಭವೇತ್ ಕನ್ಯಾ' ಎಂಬುದು ಎಂಟು ವರ್ಷಕ್ಕೆ ಹೆಣ್ಣು ಮಗುವಿನ ವಿವಾಹವಾಗಬೇಕು. ಹಾಗಾಗದಿದ್ದಲ್ಲಿ ಅವಳನ್ನು ಅಡವಿಯಲ್ಲಿ ಬಿಟ್ಟು ಬರುತ್ತಿದ್ದ ಕ್ರೂರ ಅಮಾನವೀಯ ಸಂಪ್ರದಾಯವನ್ನು ಕುರಿತು ಹೇಳುತ್ತದೆ.

ಒಂದು ಗಲ್ಲದಲ್ಲಿ ಹಾಲು, ಇನ್ನೊಂದು ಗಲ್ಲದಲ್ಲಿ ನೀರು, ಎನ್ನುವ ಬಾಲ್ಯದಲ್ಲೇ ಹೆಣ್ಣಿಗೆ ವಿವಾಹ ಕಡ್ಡಾಯವಾಗಿದ್ದ ಸಂದರ್ಭದಲ್ಲಿ, ವಿವಾಹ ಸಾಧ್ಯವಾಗದೆ ಮಗಳು ಅವಿವಾಹಿತೆಯಾಗಿ ಮನೆಯಲ್ಲಿರಲಿ ಎಂದು ಬಯಸಿದ ತಂದೆ ಶ್ರೀಧರ ಪಂಡಿತನ ಆಶಯವನ್ನು ಅವನ ಗರ್ವಭಂಗದ ಅಸ್ತ್ರವಾಗಿ ಬಳಸಿಕೊಳ್ಳುವ ಸಂಪ್ರದಾಯವಾದಿಗಳು, ಇವರನ್ನು ವಿರೋಧಿಸಿ ಮಗಳ ಬದುಕನ್ನು

ರೂಪಿಸಲಾಗದ ಶ್ರೀಧರ ಪಂಡಿತನಿಗೆ, ಮಗಳ ಬದುಕಿಗಿಂತ ತನ್ನ ಗೌರವ ಪ್ರತಿಷ್ಠೆಗಳೇ ಮುಖ್ಯವಾಗುತ್ತವೆ. ನಿಯಮದಂತೆ ಮಗಳನ್ನು ಕಾಡಲ್ಲಿ ಬಿಡಲು ಹೊರಡುತ್ತಾನೆ. ಮಗಳನ್ನು ಕಳೆದುಕೊಳ್ಳುವ ತಾಯಿ ಆಕ್ರಂದನವಾಗಲಿ, ತನಗೆಂಥ ಪೀಡೆ ಸುತ್ತಿಕೊಂಡಿದೆ, ಅದಕ್ಕೆ ಕಾರಣವೇನೆಂದು ತಿಳಿಯದ ಮಗಳ ಮುಗ್ಧತೆಯಾಗಲಿ ಪರಿಗಣನೆಗೊಳ್ಳುವುದಿಲ್ಲ.

"ಜ್ಞಾನಪೂರ್ವಕ ಕರ್ಮ ಮಾಡಬೇಕು ಶ್ರೀಧರ"[೧೩] ಎಂದು ದಿಗಂಬರ ದೀಕ್ಷಿತರು ಹೇಳಿದಾಗ ಒಪ್ಪದ ಶ್ರೀಧರನ ಉದ್ಧಟತನ, ಅಹಂಕಾರಗಳಿಗೆ ಮಗಳು ರೋಹಿಣಿ ಬಲಿಯಾಗಬೇಕಾಗುತ್ತಾಳೆ.

"ಜ್ಞಾನವಿಲ್ಲದ ಕರ್ಮ ಯಾಂತ್ರಿಕವಾದುದು ನಮ್ಮ ಕರ್ಮಕಾಂಡವೂ ಅಷ್ಟೆ, ಎಷ್ಟೋ ಸಾವಿರ ವರ್ಷಗಳ ಹಿಂದೆ ನಿರ್ಧರಿಸಿದ ಕರ್ಮಗಳನ್ನು ನಾವಿಂದು ಪೂರ್ವಾಪರ ವಿವೇಚನೆಯಿಲ್ಲದೆ ಮಾಡುವುದೆ ಸಂಪ್ರದಾಯ ಶಾಸ್ತ್ರ ಎನ್ನುತ್ತೇವೆ. ಕಾಲ ಮರ್ಯಾದೆ, ದೇಶ ಮರ್ಯಾದೆ ಬೇಡವೆ? ಅಯ್ಯೋ ಕುರುಡು ಸಂಪ್ರದಾಯವೆ ಎಂಥ ಬಲಿದಾನವಿದು"[೧೪] ಎಂದು ಶ್ರೀಧರ ಪಂಡಿತ ಪಶ್ಚಾತ್ತಾಪ ಪಡುವಂತೆ ಮಾಡುವಲ್ಲಿ ಕಥೆಗಾರರ ಪುನರ್ ಸೃಷ್ಟಿಯ ಉದ್ದೇಶ ಅಡಗಿದೆ.

ಮೇಲ್ವವರ್ಗದಲ್ಲಿ ಸಂಪ್ರದಾಯ ಆಚರಣೆಗಳ ಬಿಗಿ ಕೆಳವರ್ಗದಲ್ಲಿ ಅಷ್ಟಾಗಿರುವುದಿಲ್ಲ. ವಿಲೋಮ ವಿವಾಹ ಶಾಸ್ತ್ರಬಾಹಿರ, ಆದರೆ ಕಾಡು ಸೇರಿದ ಹೆಣ್ಣಿನ ಬದುಕಿನ ಹೊಣೆ ಹೆತ್ತವರದಾಗಲಿ, ಸಮಾಜದ್ದಾಗಲಿ ಆಗುವುದಿಲ್ಲ. ನಾಗರಿಕವೆನಿಸಿಕೊಂಡು ಸಮಾಜದಲ್ಲಿ ಸಿಗದ ಪರಿಹಾರ ಅನೇಕ ವೇಳೆ ಕಾಡಿನಲ್ಲಿ ಸಿಗುತ್ತದೆಂಬುದನ್ನು ಕಥೆ ಧ್ವನಿಸುತ್ತದೆ. ಇಂಥ ಬದಲಾವಣೆಗೆ ಮಹಿಳೆ ಸ್ವತಃ ಮುಂದಾಗಬೇಕಾಗುತ್ತದೆ.

**ವಿವಾಹ ಸಮಸ್ಯೆ:**

ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಉಚ್ಚ-ನೀಚ ಭಾವ ಬಲವಾಗಿ ಬೇರೂರಿದ್ದು, ಇವೆರಡು ಎಂದೂ ಒಂದಾಗದಂತೆ ಎಚ್ಚರವಹಿಸಲಾಗುತ್ತದೆ. ಈ ಉಚ್ಚ-ನೀಚ ಭಾವಗಳು ಜಾತಿ, ಆರ್ಥಿಕತೆಯನ್ನು ಆಧರಿಸಿ ನಿರ್ಮಾಣಗೊಂಡಿವೆ. ಅನ್ಯ ಜಾತಿ ಧರ್ಮಗಳ ಬೆರೆಯವಿಕೆಯನ್ನು ವರ್ಣ ಸಂಕರವೆಂದು ಕರೆಯಲಾಗಿದೆ. ಜಾತಿಯ ಒಳಬಳಕೆಗಳ ವಿವಾಹವನ್ನು ಇತ್ತೀಚಿನವರೆಗೆ ನಿಷಿದ್ಧವೆಂದೇ ಭಾವಿಸಲಾಗಿತ್ತು. ಈಗ ಅದು ಸಡಿಲಗೊಂಡಿದೆ.

ವೀರಶೈವ ಧಾರ್ಮಿಕ ವ್ಯವಸ್ಥೆಯಲ್ಲಿ ಮಠಗಳಿಗೆ ಜಂಗಮ ಜಾತಿ ಪಂಗಡದಿಂದ ಸ್ವಾಮಿಯನ್ನು ನಿಯಮಿಸಲಾಗುತ್ತದೆ. ಒಮ್ಮೆ ಸ್ವಾಮಿಯಾಗಿ ನಿಯಮಿಸಲ್ಪಟ್ಟ ಅಥವಾ ಅಧಿಕಾರವಹಿಸಿಕೊಂಡ ವ್ಯಕ್ತಿ ಯಾವುದೇ ಕಾರಣಕ್ಕೂ ಗೃಹಸ್ಥನಾಗುವಂತಿಲ್ಲ. ಹೀಗೆ ಸ್ವಾಮಿಯಾಗಿ ನಿಯಮಿಸಲ್ಪಡುವ ವ್ಯಕ್ತಿ ತೀರ ಕಿರಿ ವಯಸ್ಸಿನಲ್ಲಿಯೇ ಸಮಾಜದಿಂದ ಆಯ್ಕೆಯಾಗುತ್ತಾನೆ. ಅರಿಯದ ವಯಸ್ಸಿನಲ್ಲಿ ಸ್ವಾಮಿತ್ವಕ್ಕೆ ಸಮ್ಮತಿಸಿ, ಪ್ರೌಢಾವಸ್ಥೆಯಲ್ಲಿ ಗೃಹಸ್ಥರಾಗಲು ಬಯಸಿದರೆ ಅದಕ್ಕೆ ಸಾಮಾಜಿಕ ಸಮ್ಮತಿ ದೊರೆಯಲಾರದು.

ಅಂಥವರನ್ನು ಬಲವಂತವಾಗಿ ಸ್ವಾಮಿತ್ವದಲ್ಲಿ ಮುಂದುವರಿಯಲು ಒತ್ತಾಯಿಸಲಾಗುತ್ತದೆ. ಒತ್ತಡಕ್ಕೆ ಮಣಿದವರು ತಮ್ಮ ಭಾವನೆಗಳನ್ನು ಬಲಿಗೊಟ್ಟು ಅನಿವಾರ್ಯ ಬದುಕಿಗೆ ಹೊಂದಿಕೊಳ್ಳುತ್ತಾರೆ. ಆತ್ಮವಂಚನೆ ಮಾಡಿಕೊಳ್ಳಲಿಚ್ಛಿಸದವರು ತಮ್ಮ ಭಾವನೆಗಳನ್ನು ಮನ್ನಿಸಿ ಸಮಾಜವನ್ನು ಎದುರಿಸುತ್ತಾರೆ. ಹೀಗೆ ಸ್ವಾಮಿಯೊಬ್ಬನ ಪ್ರೇಮ ಪ್ರಸಂಗ ಅವನ ಪ್ರೀತಿಸಿದ ಮಹಿಳೆಯ ಬದುಕನ್ನು ಘಾಸಿಗೊಳಿಸಿದ್ದನ್ನು ಶಾಂತರಸರ 'ಸಂಬಂಧಗಳು' ಕಥೆ ಚಿತ್ರಿಸುತ್ತದೆ.

ಈ ಕಥೆ ವಿವಾಹ ಕೇಂದ್ರಿತ ಸಮಸ್ಯೆಯುಳ್ಳದ್ದಾಗಿದೆ. ಜೀರ ರಾಮಪ್ಪನ ಮಗಳು ಮಹಾದೇವಿಯ ವಿವಾಹ ಒಂದು ಕುಟುಂಬದ ಸಮಸ್ಯೆಯಾಗದೆ ಸಾಮಾಜಿಕ ಸಮಸ್ಯೆ ಎಂಬಂತಾಗುತ್ತದೆ. ಅದಕ್ಕೆ ಕಾರಣ ಮಠದ ಸ್ವಾಮಿ ಸ್ವಾಮಿತ್ವವನ್ನು ತ್ಯಜಿಸಿ ಮಾದೇವಿಯನ್ನು ಮದುವೆಯಾಗಲು ಬಯಸಿದ್ದು, ಹಿರೇಮಠದ ಸ್ವಾಮಿ ಜೀರ ಮಾದೇವಿಯನ್ನು ಮದುವೆಯಾದರೆ ಜಾತಿ ಬ್ರಷ್ಟವಾಗುತ್ತೆದೆಂಬುದು ಒಂದು ಸಮಸ್ಯೆಯಾದರೆ, ಹೊಸ ಸ್ವಾಮಿ ಬಂದರೆ ಮಠದ ಲೆಕ್ಕಪತ್ರ ಒಪ್ಪಿಸಬೇಕಾಗುತ್ತದೆಂಬುದು ರುದ್ರಪ್ಪನ ಸಮಸ್ಯೆ, ಮುಂದೆ ಬರುವ ಸ್ವಾಮಿ ತನ್ನನ್ನು ಹಚ್ಚಿಕೊಳ್ಳದಿದ್ದರೆ ತಾನು ಸ್ವಾಮಿಯ ಪಾದದ ಬಳಿ ಕುಳಿತು ಹೆಂಗಸರ ಸೌಂದರ್ಯ ಆಸ್ವಾದಿಸಲಾಗುವುದಿಲ್ಲ ಎಂಬುದು ದೇಸಾಯಿಯ ಸಮಸ್ಯೆ ಹೀಗೆ ಸ್ವಾಮಿಯ ವಿವಾಹ ಊರ ಸಮಸ್ಯೆಯಾಗಿ ವಿವಾಹವಾಗದಂತೆ ತಡೆಯುವ ಹಲವು ಹುನ್ನಾರಗಳು ರೂಪಗೊಳ್ಳುತ್ತವೆ. ರಾಮಪ್ಪನನ್ನು ಕರೆದು ಹೇಳಿದ್ದಾಯ್ತು. ಮಾದೇವಿಯ ಸೋದರ ಮಾವ ಶರಣಬಸಣ್ಣಂಗೆ ತಾನೇ ವಿವಾಹವಾಗುವಂತೆ ಪ್ರಚೋದಿಸಿದ್ದಾಯ್ತು. ಸ್ವಾಮಿಗೂ ನಾನಾ ರೀತಿ ತಿಳುವಳಿಕೆ ಹೇಳಿದ್ದಾಯ್ತು. ಆದರೂ ನಿರ್ಧಾರ ಬದಲಾಗದೇ ಇದ್ದಾಗ ಅಣ್ಣಪ್ಪ ಶರಣಬಸಣ್ಣನಿಗೆ ಮಾದೇವಿಯ ಮೇಲೆ ಅತ್ಯಾಚಾರವೆಸಗಲು ಹೇಳುತ್ತಾನೆ. ಬಸವಜಯಂತಿಯ ಮೆರವಣಿಗೆಯ ಗಲಾಟೆಯಲ್ಲಿ ಶರಣಬಸಣ್ಣ ಅತ್ಯಾಚಾರವೆಸಗುತ್ತಾನೆ. ತಮ್ಮ ಪ್ರಯತ್ನದಲ್ಲಿ ಯಶಸ್ವಿಯಾದದ್ದಕ್ಕೆ ಸ್ವಾಮಿಯ ವಿರೋಧಿ ಬಣ ಸಂತಸಪಡುತ್ತಿರುವಾಗಲೇ ಸ್ವಾಮಿ ಮಾದೇವಿಯ ಬಳಿ ಬಂದು ನೀರು ಚುಮುಕಿಸಿದಾಗ ಎಚ್ಚೆತ್ತ ಮಾದೇವಿ ಸ್ವಾಮಿಯ ಕೈಯನ್ನು ಹಿಡಿದುಕೊಳ್ಳುವಲ್ಲಿ, ಸ್ವಾಮಿ ಮತ್ತು ಮಾದೇವಿಯರ ಗಟ್ಟಿ ನಿರ್ಧಾರ ಪ್ರಕಟವಾಗುತ್ತದೆ. ತನಗೆ ಬೇಡವಾದ ಸಂಗತಿಯನ್ನು ನಿಯಂತ್ರಿಸಲು ಪುರುಷಶಾಹಿ ಸ್ವಾಮಿಗೆ ಲಂಪಟ ಜೀವನ ನಡೆಸಿದರೂ ಅಡ್ಡಿಯಿಲ್ಲ, ಒಬ್ಬಳನ್ನು ಇಟ್ಟುಕೊಂಡರೂ ತಪ್ಪಿಲ್ಲ, ಮದುವೆ ಮಾತ್ರ ಆಗ ಬೇಡವೆಂದು ಹೇಳುವ, ಮಾದೇವಿಯ ಮೇಲೆ ಅತ್ಯಾಚಾರವೆಸಗಿ ಅವಳ ಬಾಳನ್ನು ತಮಗೆ ಬೇಕಾದಂತೆ ಬಳಸಿಕೊಳ್ಳುವ ಮಟ್ಟಕ್ಕೆ ಹೋಗುವುದನ್ನು ಶಾಂತರಸರು ಯಾವ ಉದ್ವೇಗ ವಿಲ್ಲದೆ ಸಂಯಮಪೂರ್ಣವಾಗಿ ಚಿತ್ರಿಸಿದ್ದಾರೆ. ಅತ್ಯಾಚಾರವೆಸಗಿ ಅಟ್ಟಹಾಸಗಯ್ಯಬೇಕೆಂದ ಪುರುಷ ವ್ಯವಸ್ಥೆ ಒಂದೆಡೆಯಾದರೆ, ಶರಣತತ್ತ್ವಕ್ಕೆ ಬದ್ಧನಾಗಿ ಸ್ವಾಮಿತ್ವವನ್ನು ತ್ಯಜಿಸಿ ಮಾದೇವಿಗೆ ಬಾಳುಕೊಡುವ ಮಾನವೀಯ ವ್ಯಕ್ತಿಯಾಗಿ ವಿರೂಪಾಕ್ಷಸ್ವಾಮಿ ಮತ್ತೊಂದೆಡೆ ಗಮನ ಸೆಳೆಯುತ್ತಾರೆ.

ಅತ್ಯಾಚಾರದ ನೆಪವನ್ನೆ ಮುಂದಿಟ್ಟುಕೊಂಡು ಜಾರಿಕೊಳ್ಳಬಹುದಾದ ಅವಕಾಶವನ್ನು ಬಳಸಿಕೊಳ್ಳದೆ ವಚನ ಬದ್ಧನಾಗಿ ನಡೆದುಕೊಳ್ಳುವ ಸ್ವಾಮಿ, ತನ್ನಲ್ಲಿ ವೈಚಾರಿಕ ಪ್ರಜ್ಞೆಯನ್ನು ಮೂಡಿಸಿದ ಸ್ವಾಮಿಯೊಂದಿಗೆ ವಿವಾಹವಾಗಲು ನಿರ್ಧರಿಸುವ ಮಾದೇವಿ ಪ್ರಸ್ತುತ ಸಮಾಜಕ್ಕೆ ಅವಶ್ಯ ಮಾದರಿಗಳಾಗಿ ಕಂಡುಬರುತ್ತಾರೆ. ಇಲ್ಲಿಯ ಮಹಿಳಾ ಬದುಕು ಪುರುಷಶಾಹಿ ಕುತಂತ್ರಕ್ಕೆ ಸವಾಲಾಗಿ ನಿಲ್ಲುತ್ತದೆ.

ಶಾಂತರಸರ 'ಮಾಯೆ ಅಂದ್ರ ಮಾಯೆ' ಕಥೆ ವಿವಾಹ ಕೇಂದ್ರಿತ ಸಮಸ್ಯೆ ಮಹಿಳೆಯ ಬದುಕನ್ನು ಪ್ರಭಾವಿಸುವುದಾಗಿದೆ. ರಾಚಮ್ಮ ತಾನು ಮನಸಾರೆ ಪ್ರೀತಿಸಿದ ಗಂಗ್ಯನೊಂದಿಗೆ ವಿವಾಹವಾಗಲು ಅನುಮತಿಸದೆ ಅವಳ ತಂದೆ ಮತ್ತು ಅಣ್ಣ ಮುದುಕ ಎಂಕನಗೌಡನೊಂದಿಗೆ ಮದುವೆ ಮಾಡುತ್ತಾರೆ. ಓರಗೆಯ ಗಂಗ್ಯನನ್ನು ಮರೆಯಲಾಗದೆ, ಮುದುಕ ಎಂಕನಗೌಡನೊಂದಿಗೆ ಬೆರೆಯಲಾಗದೆ ರಾಚಮ್ಮ ಘಾಸಿಗೊಳ್ಳುತ್ತಾಳೆ. ದುಷ್ಟ ಎಂಕನಗೌಡ ಅವಳ ಮೇಲೆ ಅತ್ಯಾಚಾರವೆಸಗುತ್ತಾನೆ. ಮೈ ಹುಣ್ಣಾಗುವಂತೆ ಹೊಡೆಯುತ್ತಾನೆ. ರಾಚಮ್ಮ ಬದುಕಲಾಗದೆ, ಸಾಯಲಾಗದೇ ನರಳುತ್ತಾಳೆ. ಗೌಡ ಹತ್ತಿರ ಬಂದರೆ ಹೊಯ್ಕೊಳ್ಳುವ ಮೂಲಕ ದೂರವಿರಿಸುತ್ತಾಳೆ.

ಒಮ್ಮೆ ಇವಳನ್ನು ಕಾಣಲು ಬಂದ ಗಂಗ್ಯ ತನ್ನೊಂದಿಗೆ ಮುಂಬೈಗೆ ಬರಲು ಕೇಳುತ್ತಾನೆ. ಮದುವೆಯಾದ ಗಂಡನನ್ನು ಬಿಟ್ಟು ಬರುವುದು ಸರಿಯಲ್ಲ. ನೀನು ಮದುವೆಯಾಗಿ ಸುಖವಾಗಿರೆಂದು ಹೇಳುತ್ತಾಳೆ. ಗಂಗ್ಯ ಬಂದ ವಿಷಯ ತಿಳಿದ ಗೌಡ ನಾಲ್ಕಾರು ದಿನ ಅವಳನ್ನು ವಿಚಿತ್ರವಾಗಿ ಪೀಡಿಸುತ್ತಾನೆ. ಹಿಂಸೆ ತಾಳದೆ ಸಾಯಬೇಕೆಂದು ಯೋಚಿಸುತ್ತಾಳಾದರೂ, ಸಾಯುವುದಕ್ಕಿಂತ ಬಂದದ್ದನ್ನು ಎದುರಿಸಿ ಬದುಕುವ ನಿರ್ಧಾರ ಕೈಗೊಂಡು ಒಂದು ದಿನ ಬೆಳಗಿನ ಜಾವದಲ್ಲಿ ಒಡೆದ ಮಡಿಕೆಯಲ್ಲಿ ಗೌಡ ಹರಿದ ತನ್ನ ಕುಪ್ಪಸದ ತುಂಡು ಮತ್ತು ತಾಳಿಯನ್ನಿರಿಸಿ ಮೇಲೆ ತನ್ನ ಒಂದು ಚಪ್ಪಲಿಯನ್ನಿಟ್ಟು ಗಂಗ್ಯನೊಂದಿಗೆ ಹೋಗುತ್ತಾಳೆ.

"ಪಿತೃ ಸಂಸ್ಕೃತಿ ರಾಚಮ್ಮನ ಪ್ರೇಮವನ್ನು ಜಾತಿ ಅಂತಸ್ತಿನ ಕಾರಣಕ್ಕೆ ನಿರಾಕರಿಸುತ್ತದೆ. ಸಾಲ ಕೊಡುವುದು ತಪ್ಪುತ್ತದೆಂಬ ಕಾರಣಕ್ಕೆ ರಾಚಮ್ಮನ ತಂದೆ ಮಗಳನ್ನು ಮುದುಕನಿಗೆ ಕೊಡುತ್ತಾನೆ. ಇಬ್ಬರು ಹೆಂಡಿರು ಸತ್ತು ಸೊಸೆ ಮೊಮ್ಮಕ್ಕಳಿರುವ ಎಂಕನಗೌಡ ಮಗಳ ವಯಸ್ಸಿನ ರಾಚಮ್ಮನನ್ನು ಮದುವೆಯಾಗುತ್ತಾನೆ. ಇಲ್ಲಿಯ ಎಲ್ಲ ಗಂಡಸರು ತಮ್ಮ ಸ್ವಾರ್ಥವನ್ನು ಆಶಿಸಿ ರಾಚಮ್ಮನ ಜೀವನವನ್ನು ಬಲಿಕೊಡುತ್ತಾರೆ. ಗಂಡಸರ ಕುರಿತು ಅವಳಲ್ಲಿ ಒಂದು ಬಗೆಯ ರೋಷ ಉಕ್ಕುತ್ತದೆ. ಆ ಮಾಸ್ತರ ಥೂ ಹೊಲಸು ಆಸೆ, ಆ ಗಂಗ್ಯಾನು ಅಷ್ಟೇ, ಗಂಡನೂ ಅಷ್ಟೆ, ಆ ಮಾಸ್ತರನೂ ಅಷ್ಟೆ ಯಾರೂ ಬ್ಯಾಡ ಎಲ್ಲ ಗಂಡ್ಸರೂ ಅಷ್ಟೆ"[೧೫] "ಈ ಎದಿಮ್ಯಾಲಿನ ಗಾಯದ ಗುರುತು ನೋಡಿದಂಗೆಲ್ಲ ಅವ್ನಿಗೆ ಚಟಿಗೆ ಮುರೆಂಗಾಗ್ತದ ಇವುನ್ ಸಂತಾರ ಎಲ್ಲಿಂದ ಗಂಟ ಬಿತ್ತೋ ನನಗೆ ಸತ್ತಾದ್ರೂ ಹೋಗ್ವಲ್ಲ, ನಾ ರಂಡ್ಯಾದ್ರೂ ಅಡ್ಡಿಲ್ಲ ಅವನ ಕಾಟಾದ್ರೂ ತಪ್ಪದ ಒಂದ್

ಮಗಾ ಆದ್ರೂ ಆಗಿದ್ರೆ ಥೂ ಈ ಮುದಿಲೊಟ್ಟಿಗೆ ಬಸುರಾಗದಿಕ್ಕಿಂತ ಬಂಜೆ ಆಗಿರದೇ ಬೇಸು!"[೧೬] ಮುಂತಾಗಿ ಪಿತೃ ಸಂಸ್ಕೃತಿಯ ವಿರುದ್ಧವಾಗಿ ಆಲೋಚಿಸುವ ರಾಚಮ್ಮ ಅವನ್ನು ನಿರಾಕರಿಸುವುದು ಮಾತ್ರವಲ್ಲ ಉಲ್ಲಂಘಿಸುತ್ತಾಳೆ ಎಂಬುದನ್ನು ಶಾಂತರಸರು ಸಂಯಮಪೂರ್ಣ ಸಹಾನುಭೂತಿಯಿಂದ ಮಂಡಿಸುತ್ತಾರೆ.

ವಿವಾಹ ತನ್ನ ಮನಸ್ಸಿನ ವಿರುದ್ಧ ನಡೆದಾಗಲೂ ಎರಡು ಕುಟುಂಬಗಳ ಮರ್ಯಾದೆಗಾಗಿ ಅಲ್ಲಿಯೆ ಹೊಂದಿಕೊಂಡು ಬದುಕಲು ಸಿದ್ಧಳಾದರೂ, ಅದನ್ನು ಕಡೆಗಣಿಸುವ ತುಚ್ಚೀಕರಿಸುವ ವರ್ತನೆಗೆ ಹೇಸಿ ರಾಚಮ್ಮ ಮೌನವಾಗಿಯೆ ನೀಡುವ ಎದುರೇಟು ಮರ್ಮಾಂತಿಕವಾದುದು. ಒಡೆದ ಮಡಕೆ, ಹರಿದ ಕುಪ್ಪಸ, ತೆಗೆದ ತಾಳಿ, ಮೇಲಿರಿಸಿದ ಚಪ್ಪಲಿ ಒಂದೊಂದು ಪುರುಷಶಾಹಿಗೆ ಕೊಡುವ ಶಾಕ್‌ಗಳಾಗಿ ಕಾಣುತ್ತವೆ. ಕಥೆ ಪ್ರತಿರೋಧದೊಂದಿಗೆ ಪರ್ಯಾಯವನ್ನೂ ಸೂಚಿಸುತ್ತದೆ.

ಎಂ.ಜಿ.ದೇಶಪಾಂಡೆಯವರ ಪರಿಣಾಮ ಕಥೆ ವಿಷಮ ದಾಂಪತ್ಯದ ದುರಂತ ವಸ್ತುವಿನದು. ಶಾಂತದೇವಿ ವಿದ್ಯಾವಂತಳಾದರೂ ಹೇಳಿಕೊಳ್ಳುವ ಚಲುವೆಯಲ್ಲವಾಗಿ ತನಗಿಂತ ಕಡಿಮೆ ವಿದ್ಯೆ ಪಡೆದ, ಶ್ರೀಮಂತನಲ್ಲದ ಒಟ್ಟಾರೆ ತನ್ನ ಸಮನಲ್ಲದ ಗಂಗಾಧರನ ಕೈ ಹಿಡಿಯಬೇಕಾಗುತ್ತದೆ. ಒಲ್ಲದ ಮನಸ್ಸಿನಿಂದಾಗಿ ದಿನವೂ ಮನೆಯಲ್ಲಿ ಅತ್ತಿ ನಾದಿನಿಯವರೊಂದಿಗೆ ಜಗಳ, ಇದಾವುದನ್ನು ಗಂಭೀರವಾಗಿ ಸ್ವೀಕರಿಸದ ಗಂಗಾಧರ, ಹೊಂದಾಣಿಕೆಯೇ ಇಲ್ಲದ ಸಂಸಾರದಿಂದ ಬೇಸತ್ತ ಶಾಂತಾ ಎರಡು ಮಕ್ಕಳೊಂದಿಗೆ ಬಾವಿಗೆ ಬಿದ್ದು ಜೀವ ಕಳೆದುಕೊಳ್ಳುತ್ತಾಳೆ. ಗಾಬರಿಯಲ್ಲಿ ವಯಸ್ಸಾದ ಅತ್ತೆಯೂ ಸಾಯುತ್ತಾಳೆ.

ಹೀಗೆ ಚಲುವೆಯಲ್ಲವೆಂದೋ, ಬಡವಳೆಂದೋ ವರ ಸಿಗಲಿಲ್ಲವೆಂದೊ ಇಷ್ಟವಿಲ್ಲದ ಗಂಡಿನೊಂದಿಗೆ ವಿವಾಹವಾಗಿ ಹೊಂದಾಣಿಕೆ ಇಲ್ಲದೆ ಅಸುನೀಗುವ ಮಹಿಳೆಯರ ಪ್ರತಿನಿಧಿಯಾಗಿ ಶಾಂತಾ ಚಿತ್ರಣಗೊಂಡಿದ್ದಾಳೆ. ಮಹಿಳೆಯ ಬದುಕಿನಲ್ಲಿ ಆಯ್ಕೆಯ ಅವಕಾಶವಿಲ್ಲದಾಗ ನಡೆಯುವ ದುರಂತವನ್ನು ಕಥೆ ಕಟ್ಟಿಕೊಡುತ್ತದೆ.

ಶಿವಕುಮಾರ ನಾಗವಾರರ 'ಹುಳುಚು' ಕಥೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಎಷ್ಟು ಗಟ್ಟಿತನ ಆತ್ಮವಿಶ್ವಾಸಗಳನ್ನು ಮೈಗೂಡಿಸಿಕೊಂಡು ಬೆಳೆದರೂ ಮಹಿಳೆ ವ್ಯವಸ್ಥೆಯ ಕಪಿ ಮುಷ್ಟಿಯಲ್ಲಿ ಆರ್ಥಿಕ ಸ್ವಾತಂತ್ರ್ಯವಿಲ್ಲದೆ ಅಸಹಾಯಕಳಾಗಬೇಕಾದ ಸ್ಥಿತಿಯನ್ನು ಪ್ರತಿನಿಧಿಸುತ್ತದೆ.

ಪಾರ್ವತಿ ಬಾಲ್ಯದ ತನ್ನ ನಡೆನುಡಿಯಲ್ಲಿ ದಿಟ್ಟಳಾಗಿದ್ದು ತಂದೆಯ ಮೆಚ್ಚುಗೆಗೆ ಪಾತ್ರಳಾಗಿದ್ದಳು. ಅಣ್ಣ ಅಲ್ಲಮನ ಪುಕ್ಕಲು ಸ್ವಭಾವಕ್ಕಿಂತ ಪಾರ್ವತಿಯ ದಿಟ್ಟ ಸ್ವಭಾವ ತಂದೆಗೆ ಹಿಡಿಸಿತ್ತು. ಎಷ್ಟೋಸಲ "ಪಾರಬತಿ, ನೀನ್ಯಾಕೆ ಗಣ್ಸಾಗಿಲ್ಲ ಮಗ । ಖರ ಹೆಂಗ್ಸಾದೂರ ಏನಾಯ್ತು ನೀನೇ ನನ್ನ ಗಣ್ಸು ಮಗ"[೧೭] ಎಂದು ಹೆಮ್ಮೆಪಟ್ಟಿದ್ದನು. ಇಲ್ಲಿ ದಿಟ್ಟತನ ಪುರುಷ ಸ್ವಭಾವವೆಂದೆ ಪರಿ

ಭಾವಿಸಲಾಗಿದೆ. ಹೆಣ್ಣಿನಲ್ಲಿ ಆ ಗುಣವನ್ನು ನಿರೀಕ್ಷಿಸುವುದೇ ಇಲ್ಲ. ಆಕಸ್ಮಾತ್ ಇದ್ದರೆ ಅದನ್ನು ನಿಯಂತ್ರಿಸಲಾಗುತ್ತದೆ. ಪಾರ್ವತಿಯ ದಿಟ್ಟತನ ಗಂಡುಬೀರಿ ಬಿರುದಿಗೆ ಪಾತ್ರವಾಗುತ್ತದೆ.

ತಂದೆಯ ಸಲಿಗೆಯಲ್ಲಿ ಯಾವ ಅಂಕೆಯೂ ಇಲ್ಲದೆ ಬೆಳೆದ ಪಾರ್ವತಿಗೆ ಗಂಡನ ಮನೆಗೆ ಹೋದಾಗ ನಿರ್ಬಂಧದ ಬದುಕು ಉಸಿರುಗಟ್ಟಿಸುತ್ತದೆ. ಮದುವೆ ಮಾಡಿದ ಅಪ್ಪನ ಮೇಲೆ ಸಿಟ್ಟು ಬರುತ್ತದೆ. ಇಂಥ ಸ್ಥಿತಿ ಒದಗುವುದು ಮೊದಲೇ ತಿಳಿದಿದ್ದರೆ ಮದುವೆಯೆ ಆಗುತ್ತಿರಲಿಲ್ಲವೆಂದು ಯೋಚಿಸುತ್ತಾಳೆ.

ಗಂಡನ ಆಯ್ಯಾಸಿ ಬದುಕು, ಅದಕ್ಕೆ ಅಣ್ಣನ ಕುಮ್ಮಕ್ಕು ತಿಳಿದು ವಿರೋಧಿಸುತ್ತಾಳಾದರೂ "ನಿಜಾಮಶಾಹಿ ಗಂಡಸರ ಸಾಮ್ರಾಜ್ಯದಲ್ಲಿ ಹೆಂಗಸರ ದನಿಗೆ ಬೆಲೆಯೆಲ್ಲಿ ಸಿಗಬೇಕು"[೧೮] ಎಂಬಲ್ಲಿ ಗಂಡನನ್ನು ತಿದ್ದಲಾಗದ ಹತಾಶೆ ಕಾಣಿಸಿಕೊಳ್ಳುತ್ತದೆ.

ಗಂಡ ನಾಗಯ್ಯ ಉಪ್ಪಾರ ರೇವಮ್ಮನೊಂದಿಗೆ ವಿವಾಹಬಾಹಿರ ಸಂಬಂಧವಿಟ್ಟುಕೊಂಡಾಗ ವಿರೋಧಿಸಿದ ಪಾರ್ವತಿಯನ್ನು ಮೈಮುರಿಯೆ ಹೊಡೆದದ್ದಲ್ಲದೆ ಅವಳ ಆಭರಣಗಳನ್ನು ರೆವಮ್ಮಳಿಗೊಯ್ದು ಕೊಡುತ್ತಾನೆ. ಮಾವ ಭಾವರ ಬೆಂಬಲದಿಂದ ನಾಗಯ್ಯ ಪಾರ್ವತಿಯ ಬದುಕನ್ನು ದಾಸಿಗಿಂತ ಕೀಳಾಗಿಸುತ್ತಾನೆ. ಅಳಿದುಳಿದ ಒಡವೆಗಳನ್ನು ಕಿತ್ತುಕೊಳ್ಳಲು ನೋಡಿದಾಗ ಇಲ್ಲೆನ್ನುತ್ತಾಳೆ. ಯಾರಿಗೆ ಕೊಟ್ಟಿರುವೆ ಹೇಳು ಎಂದು ಪೀಡಿಸಿದಾಗ "ನೀನು ಇಟ್ಟುಕೊಂಡವಳಿಗೆ ಕೊಟ್ಟ ಹಾಗೇ ನಾನು ನನ್ನ ಮಿಂಡಗಾರನಿಗೆ ಕೊಟ್ಟಿರುವೆನೆನ್ನಲು ನಾಗಯ್ಯ ಅಲ್ಲಮನಿಗೆ ತಿಳಿಸುತ್ತಾನೆ. ಅಲ್ಲಮ ತಾನು ಸಂಭಾವಿತನೆಂಬಂತೆ ನನ್ನ ಮುಂಡಾಸು ಕೆಳಗೆ ಹಾಕಿದಿ ಪಾರ್ವತಿ"[೧೯] ಎಂದು ಹೋದವನು ಪಾರ್ವತಿಯ ಜೀವಿತದ ಕೊನೆಯವರೆಗೆ ಹೊರಳಿ ನೋಡುವುದಿಲ್ಲ. ಸ್ವತಃ ತಾನು ತಪ್ಪು ಮಾಡಿದಾಗ ಕೆಳಗೆ ಬೀಳದ ಮುಂಡಾಸು ಮನೆಯ ಹೆಂಗಸು ತಪ್ಪಿದಾಗ ಮಾತ್ರ ಬೀಳುತ್ತದೆಂದು ವಿಧಿಸುವುದು ವ್ಯವಸ್ಥೆಯ ಪಕ್ಷಪಾತ ನೀತಿಯನ್ನು ಸಾರುತ್ತದೆ.

ತನ್ನ ಗಂಡನ ಹೊರ ಚಟಗಳಿಗೆ ತನ್ನೆಲ್ಲ ಬಂಗಾರ ಕರಗತೊಡಗಿದಾಗ, ಅನುವು ಆಪತ್ತಿಗಿರಲೆಂದು ಇರಿಸಿಕೊಂಡ ಹತ್ತು ತೊಲೆ ಬಂಗಾವರವನ್ನು ಪಾರ್ವತಿ ಜಗುಲಿಯ ಕೆಳಗೆ ಹೂತ್ತಿಟ್ಟಿರುತ್ತಾಳೆ. ತನ್ನ ಕೊನೆಗಾಲದಲ್ಲಿ ಸೇವೆ ಮಾಡಿದವರಿಗೆ ಕೊಡಬೇಕೆಂದುಕೊಳ್ಳುವಾಗಲೆ ನೆಲ ಹಿಡಿದವಳಿಂದ ಮಾತು ಸ್ಪಷ್ಟವಾಗದೆ ಅಥವಾ ಕೇಳಿಸಿಕೊಂಡವರು ತಿಳಿದರೂ ತಿಳಿಯದಂತೆ ನಟಿಸುತ್ತಾರೆ. ತನಗೆ ಸಹಾಯ ಮಾಡಿದ ಹೂವಣ್ಣ ತನ್ನನ್ನು ಆಧರಿಸಿದ ಅತ್ತಿಗೆಮ್ಮರಿಗೆ ತನ್ನ ಬಂಗಾರ ಕೊಡಲಾಗದೆ ಕೊರಗುತ್ತಾಳೆ.

ಹೆಣ್ಣಿನ ಕೌಟುಂಬಿಕ ಜೀವನ ಅದರಲ್ಲೂ ಸ್ವೇಚ್ಛಾವೃತ್ತಿಯ ಗಂಡಿನ ಹೆಂಡತಿ ಎಲ್ಲರ ಅಸಡ್ಡೆಗೆ ಪಾತ್ರಳಾಗಬೇಕಾದ ಸ್ಥಿತಿ ಏರ್ಪಡುತ್ತದೆ. ಸಂತಾನವಿಲ್ಲದ ಅವಳ ಆಸ್ತಿಗೆ ನಿರಂಜನ

ಶಾಂಭವಿ, ಶಾರದ ಎಲ್ಲ ಹೊಂಚುವವರೇ ಆಗುತ್ತಾರೆ. ಎಲ್ಲೋ ಹೂವಣ್ಣ ಹಾಗೂ ಗೌರಮ್ಮನಂಥವರು ನಿರಾಸೆಯ ಕೂಪವಾದ ಬದುಕಿನಲ್ಲೂ ಶುದ್ಧ ಅಂತಕರಣದವರಾಗಿ ಪಾರ್ವತಿಯ ಬದುಕಿನ ಆಸರೆಯಾಗಿ ಕಾಣಿಸಿಕೊಳ್ಳುತ್ತಾರೆ. ಸುಖ ನೆಮ್ಮದಿಗಾಗಿ ಹಪಹಪಿಸುವುದೇ ಹೆಣ್ಣಿನ ಬದುಕಿನ ಹೋರಾಟವಾಗುತ್ತದೆ.

ಎಂ.ಜಿ.ದೇಶಪಾಂಡೆಯವರ 'ಬಾಳಿನೊಳಗಿನ ರಹಸ್ಯ' ಕಥೆಯಲ್ಲಿ ಅರಕ್ಷಿತ ಕುಟುಂಬದ ಕೃತ್ಯ ಚಿತ್ರಿಸಿದ್ದಾರೆ. ಇಲ್ಲಿ ನೆಲೆ ಕಾಣದ ಸಂಗೀತಾಳ ಬದುಕಿನ ಅಸ್ಥಿರತೆಗೆ ವಿವಾಹ ಸಂಸ್ಥೆಯೇ ಕಾರಣವಾಗುವುದನ್ನು ಕುಟುಂಬ ಸಂಸ್ಥೆಯೂ ಮಹಿಳೆಯ ಪಾಲಿಗೆ ಅರಕ್ಷಿತವೇ ಆಗುವುದನ್ನು ಕಥೆ ಪ್ರತಿನಿಧಿಸುತ್ತದೆ. ಸಂಗೀತಾಳ ಸೋದರ ಮಾವ ವಿವಾಹ ಪೂರ್ವದಲ್ಲಿ ಅವಳ ಮೇಲೆ ಅತ್ಯಾಚಾರವೆಸಗಲು ಯತ್ನಿಸಿ ಅಕ್ಕನಿಂದ ಛೀಮಾರಿ ಹಾಕಿಸಿಕೊಂಡ ಮೇಲೆ ಸಂಗೀತ ಗಂಡಸರ ಬಗ್ಗೆಯೆ ಒಂದು ಬಗೆಯ ತಿರಸ್ಕಾರ ಭಾವ ತಾಳುತ್ತಾಳೆ. ತಾಯಿಯ ಅಪೇಕ್ಷೆಯಂತೆ ಉಮೇಶನನ್ನು ವಿವಾಹವಾದರೆ ಅವನು ಪುರುಷತ್ವವಿಲ್ಲದವನಾಗಿರುತ್ತಾನೆ. ಉಮೇಶನ ತಂದೆ ಅವಳ ಮೇಲೆ ಬಲತ್ಕಾರವೆಸಗಲು ಪ್ರಯತ್ನಿಸುತ್ತಾನೆ. ಸಂಗೀತಾ ಇದರಿಂದ ಪಾರಾಗಲು ಗುರಿಯಿಲ್ಲದೆ ಓಡಿಯೆ ಓಡುತ್ತಾಳೆ.

ವಿವಾಹ ಕುಟುಂಬ ವ್ಯವಸ್ಥೆಗಳು ಮಹಿಳೆಯ ಸುರಕ್ಷಿತ ತಾಣವೆಂದು ಘೋಷಿಸುತ್ತಲೇ, ಅವುಗಳೇ ಸ್ತ್ರೀ ರಕ್ಷಣಾ ವಿರೋಧಿ ಚಟುವಟಿಕೆಯ ತಾಣವಾಗುವ ಮೂಲಕ ಮಹಿಳೆಯ ಬದುಕನ್ನು ಅಸ್ಥಿರಗೊಳಿಸುವ ಅರಕ್ಷಿತವಾಗಿಸಿ ಬೀದಿಪಾಲು ಮಾಡುವ ವಿಪರ್ಯಾಸವನ್ನು ಕಥೆ ಶೋಧಿಸುತ್ತದೆ.

ಶಿವಕುಮಾರ ನಾಗವಾರರ 'ಬಾಬಡಿ' ಕಥೆ ಬಹುಪತ್ನಿತ್ವವು ಮಹಿಳಾ ಬದುಕಿನ ಮೇಲೆ ಉಂಟುಮಾಡುವ ಪರಿಣಾಮವನ್ನು ಕಟ್ಟಿಕೊಡುತ್ತದೆ. ಗಂಡು ಸಂತಾನವಿಲ್ಲವೆಂದು ಸನ್ಮುಕಯ್ಯ ಬಾಬಾಮ್ಮನೊಂದಿಗೆ ಎರಡನೆ ವಿವಾಹವಾಗುತ್ತಾನೆ. ವಿವಾಹ ಸಂದರ್ಭದಲ್ಲಿಯೆ ಬಾಬಾಮ್ಮನ ತಂದೆಯೊಂದಿಗಾದ ಮನಸ್ತಾಪದಿಂದ ಸನ್ಮುಕಯ್ಯ ಬಾಬಾಮ್ಮನೊಂದಿಗೆ ದಾಂಪತ್ಯ ಸಂಬಂಧವನ್ನೇ ಬೆಳೆಸುವುದಿಲ್ಲ. ಬಾಬಾಮ್ಮ ಗಂಡನನ್ನೊಲಿಸಿಕೊಳ್ಳಲು ಏನೆಲ್ಲ ಪ್ರಯತ್ನಮಾಡಿ ವಿಫಲಳಾಗುತ್ತಾಳೆ. ಸನ್ಮುಕಯ್ಯ ತಾನಿಟ್ಟುಕೊಂಡ ಬಸಲಿಂಗಮ್ಮನಿಗಾಗಿ ಬಾಬಾಮ್ಮನನ್ನು ತವರಿಗಟ್ಟುತ್ತಾನೆ.

ಸನ್ಮುಕಯ್ಯನನ್ನೊಲಿಸಿಕೊಳ್ಳಲು ಸವತಿಯರಿಬ್ಬರೂ ಶತ್ರುಗಳಂತೆ ಕಾದುತ್ತಾರೆ. ಮಂತ್ರ ತಂತ್ರದ ಮೊರೆ ಹೋಗುತ್ತಾರೆ. ಒಬ್ಬರ ನಾಶವನ್ನೊಬ್ಬರು ಬಯಸುತ್ತ ಜೀವನವನ್ನೇ ರಣರಂಗವಾಗಿಸುತ್ತಾರೆ. ನಿಂಬೆವ್ವನ ತಾಯಿ ನೀಲವ್ವ ಇವರೀರ್ವರಲ್ಲಿ ತರಬಯಸಿದ ಹೊಂದಾಣಿಕೆ ಸಾಧ್ಯವಾಗದೆ ಹೋಗುತ್ತದೆ. ಮಾವ ಅಳಿಯನ ಮೇಲಾಟದಲ್ಲಿ ಬಾಬಮ್ಮನ ಬದುಕು ವ್ಯರ್ಥಹೋಗುತ್ತದೆ.

ಪುರುಷಾಭಿಮಾನಕ್ಕೆ ಧಕ್ಕೆಯಾದದ್ದಕ್ಕೆ ಮಹಿಳೆಯ ಇಡೀ ಬದುಕನ್ನು ಬಲಿಯಾಗಿಸುವ ಪರಿಯನ್ನು ಕಥೆ ಪ್ರತಿನಿಧಿಸುತ್ತದೆ. ಸಾಯುವ ಕೊನೆಗಳಿಗೆಯಲ್ಲಿ ಮಾತನಾಡಿಸಲು ಬಂದ ಸನ್ಮುಕಯ್ಯ

ಬಾಬಾಮ್ಮನ ಯೋಗಕ್ಷೇಮ ವಿಚಾರಿಸಿದಾಗ, ಅವನ ಕಣ್ಣಲ್ಲಿ ಪ್ರೀತಿಯನ್ನರಸುವ ಬಾಬಮ್ಮ ಒಂದೂ ಮಾತನಾಡದೆ, ಸಂತೃಪ್ತಳಂತೆ ಕಣ್ಣಮುಚ್ಚಿ ಅವನು ತನ್ನನ್ನು ಮಾತಾಡಿಸಿದ್ದೆ ಮಹಾಭಾಗ್ಯ ಎಂಬಂತೆ ತೋರಿಸಿಕೊಳ್ಳುವುದು ಅವಳ ಪ್ರೀತಿಯ ಹಸಿವನ್ನು ಕಾಣಿಸುತ್ತದೆ. ಸನ್ನುಕಯ್ಯನ ಲೋಲುಪತೆಗೆ ಬಾಬಾಮ್ಮನ ಬದುಕು ಬಲಿಯಾಗುತ್ತದೆ. ಹೊಳೆಯ ಪಕ್ಕದಲ್ಲಿದ್ದು ನೀರಡಿಸಿ ಬಳಲಿದ ಸ್ಥಿತಿ ಬಾಬಾಮ್ಮಳದಾಗುತ್ತದೆ. ವಿವಾಹವಾಗಿಯೂ ವೈವಾಹಿಕ ಜೀವನದ ಅನುಭವದಿಂದ ವಂಚಿತಳಾಗುತ್ತಾಳೆ. ಮಕ್ಕಳಿಲ್ಲದ ಬಾಬಾಮ್ಮ ಮರುಗಬಾರದು. ಅವಳ ನೋವು ತನ್ನ ಮಗಳ ಬದುಕನ್ನು ತಟ್ಟಬಾರದು ಎಂದು ಯೋಚಿಸಿದ ನಿಂಬೆವ್ವ ಹೆತ್ತ ಗಂಡು ಮಗುವನ್ನು ಬಾಬಮ್ಮಳಿಗೆ ಕೊಟ್ಟು ಅವರಿಬ್ಬರಲ್ಲಿ ಪ್ರೀತಿ ಮೂಡಿಸಲು ಯತ್ನಿಸುತ್ತಾಳೆ. ಆದರೆ ಗಂಡು ಮಗುವಿಗಾಗಿಯೇ ತನ್ನನ್ನು ಮದುವೆಯಾಗಿರುವುದರಿಂದ ತಾನೆ ಹೆತ್ತು ಕೊಡಬೇಕೆಂಬ ಹಟದಲ್ಲಿ ಇದನ್ನು ನೀಲವ್ವ ತಿರಸ್ಕರಿಸುತ್ತಾಳೆ.

ಇಂದಿಗೂ ಹಳ್ಳಿಗಳಲ್ಲಿ ಸವತಿಯರಲ್ಲಿ ಒಬ್ಬಳಿಗೆ ಮಕ್ಕಳಿಲ್ಲದಿದ್ದರೆ ಇನ್ನೊಬ್ಬಳು ತನ್ನೊಂದು ಮಗುವನ್ನು ಕೊಡುವುದರ ಮೂಲಕ ಅವಳ ಕೊರೆತೆಯನ್ನು ನೀಗಿಸಲು, ಅಥವಾ ಸವತಿ ಪಾಲು ಅವಳೊಂದಿಗೇ ಹೋಗದೆ ಆ ಮಗುವಿನ ನೆವದಲ್ಲಿ ಅಲ್ಲಿಯೆ ಉಳಿಯುವಂತೆ ಮಾಡುವ ಆಲೋಚನೆಯೂ ಆಗುತ್ತದೆ.

ಪುತ್ರ ಪ್ರಾಪ್ತಿಗಾಗಿ ಮರುವಿವಾಹ ಬಿ.ಟಿ.ಲಲಿತಾ ನಾಯಕರ 'ಮರುಮದುವೆ' ಕಥೆಯಲ್ಲಿ ಬಿಂಬಿತವಾಗಿದೆ. ಗಂಡು ಸಂತಾನಕ್ಕಾಗಿ ರಾಮಣ್ಣ ಮದುವೆಯಾಗಲು ನಿರ್ಧರಿಸಿದಾಗಿನ ಗೌರಿಯ ಅನಾಥ ಪ್ರಜ್ಞೆಯನ್ನು ಸ್ಥಾಯಿಯಾಗುಳ್ಳದ್ದು.

ಮದುವೆಯಾದ ಮೂರು ವರ್ಷಕ್ಕೆ ಹೆಣ್ಣು ಮಗುವೊಂದನ್ನು ಹೆತ್ತ ಗೌರಿ ಪುನಃ ಗರ್ಭಿಣಿಯಾಗದೆ ಗಂಡು ಸಂತಾನದ ಆಸೆ ಈಡೇರದ ಗೌರಿಯ ಅತ್ತಿ ಮಾವ ಮಗನಿಗೆ ಮರುಮದುವೆಯಾಗಲು ಸೂಚಿಸುತ್ತಾರೆ. ಇದಕ್ಕಾಗಿಯೆ ಕಾಯುತ್ತಿದಂತೆ ರಾಮಣ್ಣ ಬೆಳವಳ್ಳಿಯ ಚನ್ನವ್ವನೊಂದಿಗೆ ವಿವಾಹ ನಿಶ್ಚಯಿಸಿಕೊಂಡು ಬರುತ್ತಾನೆ. ಗೌರಿ ಮುಂದೆ ತಾನು ಎದುರಿಸಬೇಕಾದ ಸ್ಥಿತಿಗೆ ಚಿಂತಿತಳಾಗಿ ದುಃಖಿಸುವುದನ್ನು ಕಂಡು ಅತ್ತೆ-ಮಾವಂದಿರು ಅವಳಿಗೆ "ಗಂಡ ಶುಭಕಾರ್ಯಕ್ಕೆ ಕೈ ಹಚ್ಚಿದಾಗ ಹೆಂಡ್ತಿಯಾದವಳು ಹಿಂಗ್ ಕಣ್ಣೀರು ಹಾಕೋದಾ? ಸಿವ ನಿನಗೊಬ್ಬ ಮಗನ್ನ ಕೊಟ್ಟಿದ್ರೆ ಅವನ್ಯಾಕೆ ಮತ್ತೊಂದು ಹೆಣ್ಣಿಗೆ ತಾಳಿ ಕಟ್ತಿದ್ದ? ದೊಡ್ಡ ಮನಸ್ಸು ಮಾಡು ನೀನ್ ಬ್ಯಾರೆ ಅಲ್ಲ, ನಿನಗೆ ತಂಗಿಯಾಗಿ ಬರೋಳು ಬ್ಯಾರೆ ಅಲ್ಲ. ಯಾರ ಹೊಟ್ಟೆಯಾಗ್ ಮಗ ಹುಟ್ಟಿದ್ರು ಅವನೇನು ಅವ್ವನ ಹೆಸರು ಹೇಳ್ಕೊಂಡ್ ತಿರುಗಾಡೋದಿಲ್ಲ. ಹೌದಿಲ್ಲೋ? ಏಟೋತ್ತಾಗ್ಲಿ ಅಪ್ಪ ಅಜ್ಜನ ಹೆಸರ ಮ್ಯಾಲೆ ದೀಪ ಹಚ್ಚಬೇಕು. ಇದೆಲ್ಲಾ ನಿನಗ್ ತಿಳಿದ ವಿಚಾರವೆ ಐತಿ. ನಾವು ಹೆಚ್ಚು ಹೇಳಕಲ್ಲ ನೀನೆ ಮುಂದ್ ನಿಂತು ನಿನ್ನ ಗಂಡನಿಗೆ ಲಗ್ನಮಾಡ್ಸಿ ಮಂತಾನ ಮುಂದುವರೀಲಿ ಅಂತದೇವರಿಗೆ ಬೇಡ್ಕೊಬೇಕು"[೨೦] ಎಂದು ಬುದ್ಧಿ ಹೇಳುತ್ತಾರೆ.

ಹೆಣ್ಣು ತನ್ನ ಸಮಾಧಿಯನ್ನು ತಾನು ತೋಡಿಕೊಳ್ಳಬೇಕೆಂಬಂತೆ ಪಿತೃಸಂಸ್ಕೃತಿಯ ನಿಯಮಗಳಿವೆ. ಒಂಭತ್ತು ತಿಂಗಳು ಹೊತ್ತು ಹೆರುವ ಹೆಣ್ಣಿನ ಹೆಸರು ಯಾವುದೇ ಸಂದರ್ಭದಲ್ಲಿ ಮಗುವಿನೊಂದಿಗೆ ಸೇರುವುದಿಲ್ಲ. ಅವಳೊಂದು ಹೆರುವ ಯಂತ್ರ, ಹೆತ್ತ ನಂತರ ಅವಳ ಕೆಲಸ ಮುಗಿಯಿತು. ತನಗೆ ಮಕ್ಕಳಾಗದಿದ್ದರೆ ತಾನೇ ನಿಂತು ಗಂಡನಿಗೆ ಎರಡನೆ ಮದುವೆ ಮಾಡುವ ಔದಾರ್ಯ ದೊಡ್ಡಗುಣ ಹೆಣ್ಣಿನಲ್ಲಿರಬೇಕು. ತನ್ನ ಸ್ಥಾನಮಾನ ಏನಾದರಾಗಲಿ, ಸದಾ ಗಂಡನ ಶ್ರೇಯಸ್ಸನ್ನು ಬಯಸಬೇಕು ಎಂಬಂತೆಯೆ ಹೆಣ್ಣಿನ ಸಮಾಜೀಕರಣವಾಗಿರುತ್ತದೆ. ಪಿತೃ ಸಂಸ್ಕೃತಿಯಲ್ಲಿ ಮನೆತನ ವಂಶ ಮುಂದುವರಿಕೆ ಹೆಣ್ಣಿನಿಂದಾಗದು. ಅದಕ್ಕೆ ಗಂಡು ಸಂತಾನ ಬೇಕೇ ಬೇಕು. ಗಂಡು ಹೆರದವಳು ವ್ಯವಸ್ಥೆಯ ದೃಷ್ಟಿಯಲ್ಲಿ ಬಂಜೆಯೆ.

ಹೆಣ್ಣು ಅನುಭವಿಸಬೇಕಾದ ದಯನೀಯ ಸ್ಥಿತಿಯನ್ನು ನೆನೆದು ಗೌರಿ ತಾನು ಹೆಣ್ಣಾಗುವುದಕ್ಕಿಂತ ಹಸುವೋ ಕರುವೋ ಆಗಬಾರದಿತ್ತೆ ಎಂದುಕೊಳ್ಳುತ್ತಾಳೆ. "ಮರುಕ್ಷಣ ಆಗಲೂ ತನ್ನನ್ನು ಗೊಡ್ಡುದನ ಎಂದು ಗೋಳಾಡಿಸುತ್ತಿದ್ದರೇನೊ. ಯಾವ ಜನ್ಮದಾಗ್ ಹುಟ್ಟಿದ್ರೂ ಹೆಣ್ಣು ಜಾತಿಗೆ ಸುಖವಿಲ್ಲ"[೨೧] ಎಂದು ಭಾವಿಸುತ್ತಾಳೆ.

ರಾಮಣ್ಣ ಮರುಮದುವೆಯ ಸಂಭ್ರಮದಲ್ಲಿ ಬೀಗುತ್ತಿರುವಾಗಲೆ, ಅದು ಸೋರಿ ಹೋಗುವಂತೆ ಲಲಿತಾ ನಾಯಕರು, ಚನ್ನವ್ವ ಓಡಿ ಹೋಗುವಂತೆ ಮಾಡಿ ಮದುವೆ ನಿಲ್ಲಿಸುವಲ್ಲಿ ಕಥೆಯ ಅಂತ್ಯಕ್ಕೆ ಹೊಸ ತಿರುವು ಕೊಡುತ್ತಾರೆ. ಗೌರಿಗೆ ಬೀಳಬೇಕಾದ ಪೆಟ್ಟು ರಾಮಣ್ಣನಿಗೆ ಬೀಳುತ್ತದೆ. ಲಲಿತಾ ನಾಯಕರ ಮಹಿಳಾ ಸಂವೇದನೆ ಇಲ್ಲಿ ಕೆಲಸಮಾಡಿದೆ.

ರಾಜಶೇಖರ ಹತಗುಂದಿಯವರ ರತ್ನಾ ಎಂಬ ಹುಡುಗಿಯ ಸಾವು ಕಥೆ ಕುಟುಂಬವೆ ಶೋಷಣಾ ನೆಲೆಯಾಗುವ ವಸ್ತುವನ್ನು ಒಳಗೊಂಡಿದ್ದು. ರತ್ನಾ ಪದವೀಧರೆ. ತನ್ನ ಸುಸಂಸ್ಕೃತ ನಡೆ ನುಡಿಯಿಂದ ಮುತ್ತುರಾಜನ ಪ್ರೇಮಕ್ಕೆ ಕಾರಣಳಾದವಳು. ಹಿರಿಯರನ್ನು ಒಪ್ಪಿಸಿ ಸಮ್ಮತಿಸುವ ಭರವಸೆ ನೀಡುತ್ತಾಳೆ. ಆದರೆ ಅವಳು ಮನೆಬಿಟ್ಟು ಹೋದರೆ ತಮ್ಮ ಸಂಸಾರಕ್ಕೆ ದುಡಿಯುವವರಿಲ್ಲದಂತಾಗುತ್ತದೆ ಎಂದು ಯೋಚಿಸುವ ಕೋಟಿಲಿಂಗನ ಗೌಡ ಯಾವತ್ತೂ ದುಡಿದವನಲ್ಲ. "ಗೌರಮ್ಮ ಗೌಡ್ತಿ ದುಡಿದು ತಂದೆರ ಅರ್ಧಾ ಹಿಸ್ಸಾಕ್ಕಾಗಿ ಕಚ್ಚಾಡಿದಾಂವ ಹೆಂಡ್ತಿ ಮ್ಯಾಲ ಸಂಖ್ಯಾಮಾಡದಾಂವ. ಮುಂದ ಮಗಳ ಗಳಕ್ಯಾಗ ತಿಂದು ಮಜಾ ಮಾಡಬೇಕೆಂದು ಸಾವಿರ ಸಾವಿರ ಕನಸು ಕಟ್ಟಿದಾಂವ. ಅವ್ನ ಕನಸಿಗೆಲ್ಲಾ ಬೆಂಕಿ ಹಚ್ಚಿ ರತ್ನಾ ಒಂದಿನಾ ಗಟ್ಯಾಗಿ ಯಪ್ಪಾ ಬೆಳಕೂರಿನ ಮುತ್ತುರಾಜ, ಬಾಳ ಒಳ್ಳೆಯವರು ಆಧಾರ. ಮದವಿ ಆದ ಮ್ಯಾಲೂ ನನ್ನ ಪಗಾರ ಮುಟ್ಟಾದ್ಲಿಂತ ಪ್ರಮಾಣ ಮಾಡ್ಯಾರ. ಬಸೂಗ ಓದ್ಸಿ, ಶಿವೂಗ ಒಳ್ಳೆ ಕಡೆ ಗಂಡು ಹುಡುಕಿ ಮದುವಿನೂ ಮಾಡಿಸ್ತೀನಿ. ಪ್ರತಿ ತಿಂಗಳ ನಿಮಗ ಇಂತಿಷ್ಟು ಅಂತ ಕೊಡ್ತೀನಿ ಎಂದು ನೂರಾಸೆ ಹೊತ್ತು ಹೇಳಿದ್ದೇ ಅಪರಾಧ"[೨೨] ಎಂಬಂತೆ ಅವಕಾಶ ನೀಡಿದ್ದೇ ಅವಳಿಗೆ ಮಾಡಿದ

ಮಹದುಪಕಾರವೆಂಬಂತೆ ಅವಳ ಮೇಲೆ ನಿಯಂತ್ರಣ ಹೇರುತ್ತಾನೆ. ಅವಳು ಮದುವೆಯಾಗಲೇ ಬೇಕೆಂದರೆ "ಖತಾಲಪ್ಪಗೌಡರ ಹೆಣ್ತಿಗಿ ಟಿ.ಬಿ. ಆದ ಅಂತ. ಅವರು ಇನ್ನೊಂದು ಮದವಿ ಆಗಬೇಕಂತ ಅದ್ಕೊಂಡಾರ. ನೀನೇ ಯಾಕ ಒಪ್ಕೋಬಾರದು. ಸಾಕಷ್ಟು ಆಸ್ತಿಪಾಸ್ತಿ ಅದ. ಅವರಿಗೇನು ಬಾಳ ವಯಸ್ಸಾಗೇದ? ಭಾಳಂದ್ರ ನಲವತ್ತೈದು ಇದ್ದಿರಬೇಕು. ನೀ ಹೂ ಅಂದ್ರ ಬಸ್ಯಾನ ಓದಾದನೂ ಆಗ್ತಾದ. ಶಿವಿ ಮದಿನೂ ಆಗ್ತದ. ಒಟ್ಟಿನ ಮ್ಯಾಲ ನಮ್ಮ ಬಾಳ್ವೆ ಚಲೋ ಆಗ್ತದ"[೨೩] ಎಂದಿದ್ದ.

ಹೀಗೆ ಮದುವೆ ಹೆಣ್ಣಿನ ಬದುಕಿನಲ್ಲಿ ಅನಿವಾರ್ಯವಾದರೂ ಅದು ಅವಳ ಮನಸ್ಸಿನಂತೆ ನೆರವೇರುವುದಿಲ್ಲ. ಅದಕ್ಕೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ನೂರಾರು ನಿರ್ಬಂಧಗಳಿವೆ. ಹೆಣ್ಣಿಗೆ ಸೌಂದರ್ಯ ವಯಸ್ಸು ಸದ್ಗುಣಗಳೆಲ್ಲ ಇರಲೇ ಬೇಕೆಂದು ಬಯಸುವ ವ್ಯವಸ್ಥೆ ಪುರುಷನಿಗೆ ಆದಾವುದೂ ಬೇಕಿಲ್ಲವೆಂದು ಭಾವಿಸುವುದೆ ವ್ಯವಸ್ಥೆಯ ವ್ಯಂಗ್ಯವಾಗಿದೆ. ಮಗಳ ಬದುಕು ಹಾಳಾದರೂ ಚಿಂತೆಯಿಲ್ಲ. ತನ್ನ ಬದುಕು ಸುಧಾರಿಸಿದರೆ ಸಾಕೆಂದು ನಿರೀಕ್ಷಿಸುವ ತಂದೆತಾಯಿಗಳೂ ಇರುವಾಗ ಗಂಡನ ಮನೆಯ ಮಹಿಳೆಯ ನೋವಿನ ತಾಣವಾಗಬೇಕಿಲ್ಲವೆಂಬುದನ್ನು ಕಥೆ ಮನೋಜ್ಞವಾಗಿ ನಿರೂಪಿಸುತ್ತದೆ.

ತಂದೆಯ ಈ ಬಗೆಯ ವರ್ತನೆಗೆ ಖತಾಲಪ್ಪ ಗೌಡನ ನೌಕರಿಯಿಂದಕಿತ್ತು ಹಾಕುವ ಬೆದರಿಕೆಯೂ ಸೇರಿ ದಾರಿಕಾಣದೆ ರತ್ನಾ ಸಾವನ್ನು ಆಶ್ರಯಿಸುತ್ತಾಳೆ. ಅವಳ ಸಾವಿನ ನಿರ್ಧಾರ ದುಡುಕಾಗಿ ಕಂಡರೂ ತನ್ನ ಬದುಕೇ ಒಂದು ಬಳಕೆಯ ಸಾಧನವಾಗುವುದನ್ನು ಸಹಿಸದ ರತ್ನಾಳ ಸಂಪ್ರದಾಯಶೀಲ ಮನಸ್ಸು ಸಾವಿಗೆ ಶರಣಾಗುತ್ತದೆಂಬುದನ್ನು ಕಥೆ ಚಿತ್ರಿಸುತ್ತದೆ. ರತ್ನಾ ಇಂಥರ ಅನೇಕ ಹೆಂಗಸರ ಪ್ರತಿನಿಧಿಯಾಗಿ ಇಲ್ಲಿ ಮೂಡಿಬಂದಿದ್ದಾಳೆ.

**ಜಾತಿ ಸಮಸ್ಯೆ :**

ಜಾತ್ಯಾತೀತತೆಯ ಕುರಿತು ಎಷ್ಟೇ ಮಾತನಾಡಿದಾಗಲೂ ವಿವಾಹ ಸಂಸ್ಥೆಗೆ ಬಂದಾಗ ಇಂದಿಗೂ ಹಿಂದೇಟು ಹಾಕುವುದು ಕಂಡುಬರುತ್ತದೆ. ಅಮರೇಶ ನುಗಡೋಣಿಯವರ ಕಥೆ 'ಮನ್ನಿಸಿ ಮೂಕಾದ ಮೇಲೆ' ಯಲ್ಲಿ ಬೇಡರ ನಾಗರಾಜ ವೀರಸೈವರ ಮಾದೇವಿ ಪರಸ್ಪರ ಪ್ರೀತಿಸಿದಾಗ ಜಾತಿಯ ಕಾರಣಕ್ಕಾಗಿಯೆ ಮಹಾದೇವಿಯ ಬಸಿರನ್ನು ತೆಗೆಸಿ ಮೂಲೆಗುಂಪು ಮಾಡಲಾಗುತ್ತದೆ. ಮಲ್ಲಿಕಾರ್ಜುನ ಅದನ್ನು ನೆವವಾಗಿಟ್ಟುಕೊಂಡು ತನ್ನನ್ನು ಸಾಕಿ ಬೆಳಿಸಿದ ದೊಡ್ಡಮ್ಮ ತಂದೆಯರಿಂದಲೂ ದೂರಾಗುತ್ತಾನೆ.

ಮುಂದೊಮ್ಮೆ ದೊಡ್ಡಮ್ಮ ಆರೋಗ್ಯ ತಪ್ಪಿ ನೆಲ ಹಿಡಿದು ತನ್ನೆಲ್ಲ ನೆನಸುತ್ತಿರುವಳೆಂದು ತಿಳಿದು ವಿಚಾರಿಸಲು ಬಂದಾಗ ಮಾದೇವಿ "ನಾನು ಎಡವೀನಿ ಖರೇ ನೀನು ಓದಿದಾತ. ಕಾಲ

ಬದಲಾಗ್ಯಾದ ಅಂಬೋದು ನಿನ್ಗ ತಿಳಿಬೇಕು. ನೀನು ಮನಸ್ಸು ಮುರುಕಂಡು ಹೋಗ ಬದಲು ನಿಂತು ವಿಚಾರ ಮಾಡಬೇಕಾಗಿತ್ತು. ನಾನು ನಾಗರಾಜನ ಜೊತೆ ಮದಿವಿಗೆ ತಯಾರಿದ್ದೆ"೨೪ ಎಂದು ಹೇಳಿದಾಗ ಮಲ್ಲಿಕಾರ್ಜುನ ಆದೆಣ್ಣನೊಂದಿಗೆ ಚರ್ಚಿಸಿ ಅವರ ಮದುವೆ ಮಾಡಿಸುತ್ತಾನೆ.

ತಪ್ಪುಗಳು ಸಂಭವಿಸುತ್ತವೆ. ಅದಕ್ಕೆ ಹೆಣ್ಣು-ಗಂಡುಗಳಿಬ್ಬರೂ ಕಾರಣ ಇಂಥ ಸಂದರ್ಭಗಳಲ್ಲಿ ಹೆಚ್ಚಾಗಿ ಶಿಕ್ಷೆಯಾಗುವುದು ಹೆಣ್ಣಿಗೆ ಬದುಕು ಕೆಡುವುದು ಅವಳದೆ. ಸ್ವತಃ ಶಿಕ್ಷೆಯನ್ನು ಅನುಭವಿಸಿದ ಮಾದೇವಿಯಿಂದಲೆ ವಿವೇಚನೆಯ ಮಾತುಗಳನ್ನು ಹೇಳಿಸಿ, ವಿದ್ಯಾವಂತರಾದ ಮಲ್ಲಿಕಾರ್ಜುನ ಆದೆಪ್ಪ ಅವರು ಸ್ಪಂದಿಸುವಂತೆ ಮಾಡುತ್ತಾರೆ. ಕಥಾಕಾರರು ತಮ್ಮ ಬಂಧವನ್ನು ನೀಗಿಸಿಕೊಳ್ಳಲು ತಾವೇ ಪ್ರಯತ್ನಿಸಬೇಕೆಂಬ ಸೂಚನೆ ಸೂಚ್ಯವಾಗಿರುವಂತಿದೆ. ಆದ ತಪ್ಪುಗಳನ್ನು ಹಾಗೆ ಉಳಿಸದೆ ಇನ್ನೂ ಹೆಚ್ಚು ಸಂಕೀರ್ಣವಾಗಲು ಬಿಡದೆ ಮನ್ನಿಸಿ ಪರಿಹಾರ ಕಂಡುಕೊಳ್ಳುವಲ್ಲಿ ಕಥೆಯ ಸಫಲತೆ ಅಡಗಿದೆ. ಹೆತ್ತ ತಾಯಿಯನ್ನು ಕಳೆದುಕೊಂಡ ಮಲ್ಲಿಕಾರ್ಜುನ, ದೊಡ್ಡಮ್ಮ ನೀಲಮ್ಮನ ಮಗನೆಂದೇ ಬೆಳೆಯುವಲ್ಲಿ, ನೀಲಮ್ಮನ ವಾತ್ಸಲ್ಯ ಶ್ರಮಗಳನ್ನು ಗೌರವಿಸಿದ ಕಥೆಗಾರರ ಸ್ತ್ರೀಪರ ಕಾಳಜಿ ಅನನ್ಯವಾಗಿ ಮೂಡಿ ಬಂದಿದೆ.

ಲಲಿತಾ ದೆಮಶೆಟ್ಟಿಯವರ 'ಸೋಲು' ಕಥೆ ಹಾವಪ್ಪನ ಕುತಂತ್ರಕ್ಕೆ ಗಂಗಿಯ ಬದುಕು ಬಲಿಯಾಗುವದನ್ನು ಚಿತ್ರಿಸುತ್ತದೆ. ಹೊಲೆಯರ ಗಂಗಿ ಬಸ್ವಿ ಎಲ್ಲವ್ವನ ಮಗಳಾದರೂ ಎಲ್ಲರಂತೆ ಮದುವೆಯಾಗಬೇಕೆಂದು ಆಸೆ ಇಟ್ಟುಕೊಂಡವಳು. ಹಾಗಾಗಿ ಹೊಟ್ಟೆ ಪಾಡಿಗೆ ಕಸಗುಡಿಸುವ ಕೆಲಸವನ್ನಾಶ್ರಯಿಸುತ್ತಾಳೆ. ಊರ ಜಮೀನ್ದಾರ, ಸಾವುಕಾರರ ಆಮಿಷಗಳಿಗೆ ಬಲಿಯಾಗದೆ, ಯಾರಾದರೂ ತನ್ನ ಮದುವೆಯಾಗಬಹುದೆಂದು ಕಾಯುತ್ತಾಳೆ. "ಬಸ್ವಿ ಮಗ್ಳು ಬಸ್ವಿ ಅಲ್ವ? ಬಸ್ವಿ ಮಗಳು ನಿಮ್ಮ ಜನ್ದಾಗ್ ಯಾವೋನ್ಲೆ ಮದುವೆಯಾಗ್ತಾನೆ? ನೀನೇನ್ಮಹಾ ಗಂಡುಳ್ಳ ಗರತಿ ಕಂತ್ಲೆ ಮಾತಾಡ್ತಿಯೇ, ನನ್ನಾತ್ಕೆಳಿ ಸುಮ್ಕೆ ಬಂದ್ಬುಡು, ನನ್ನಾಸೀಗ್ಗೆ ನಿಂಗೆ ಚಿನ್ನದ ಸರಾ ಕೊಡ್ತಿವ್ನಿ, ಎಂದು ಜಮೀನ್ದಾರ ಕರೆದಾಗ ಅವನ ಮುಖಕ್ಕೆ ಉಗುಳುತ್ತಾಳೆ ಗಂಗಿ ನಮ್ಗುನೋವೆ ಲೆಗ್ಣಾ ಮಾಡ್ಕೆಂಡ್ ಬಾಳೇವು ಮಾಡಾಕೆ ಭೋ ಆಶೇವು"೨೫ ಎನ್ನುವ ಗಂಗಿ ಯಾರಾದರೂ ತನ್ನ ಮದುವೆಯಾಗಬಹುದೆಂದು ಕಾಯುತ್ತಾಳೆ. ಅಷ್ಟರಲ್ಲಿ ಮೇಲೇರಿ ಬಂದ ಸಾವುಕಾರ ಹಾವಪ್ಪನನ್ನು ತನ್ನ ಸಾಮರ್ಥ್ಯವೆಲ್ಲ ಬಳಸಿ ಒದ್ದು ಓಡಿಸುತ್ತಾಳೆ. ಹಾವಪ್ಪ ಗಂಗಿಯ ಬಯಕೆನ್ನರಿತು ವಿವಾಹವಾಗಲು ಮುಂದೆ ಬಂದಾಗ ಅದನ್ನು ಸತ್ಯವೆಂದೇ ನಂಬಿ ಗಂಗಿ ಸಮ್ಮತಿಸುತ್ತಾಳೆ. ಆರಂಭದಲ್ಲಿ ಅವಳನ್ನು ಚೆನ್ನಾಗಿಯೇ ನೋಡಿಕೊಂಡ ಹಾವಪ್ಪ ಉಡಿಸಿ-ತೊಡಿಸಿ ಸುಖವಾಗಿರಿಸುತ್ತಾನೆ. ಅವಳ ಕೇರಿಯ ಜನರಿಂದ ಸಂಪರ್ಕ ತಪ್ಪಿಸುತ್ತಾನೆ. ಅವ್ವನೊಂದಿಗೂ ಮಾತ್ನಾಡಲು ಅವಕಾಶವೀಯುವುದಿಲ್ಲ. ಗಂಗಿ ಎಲ್ಲವನ್ನು ಸಹಿಸಿಕೊಳ್ಳುತ್ತಾಳೆ. ಹಾವಪ್ಪ ಇಷ್ಟಕ್ಕೆ ಸುಮ್ಮನಿರದೆ ತಮ್ಮದು ಅಂತರ್ ಜಾತಿ ವಿವಾಹವೆಂದು ಸರಕಾರದಿಂದ ಪ್ರೋತ್ಸಾಹ ಧನ ಹಾಗೂ ಮನೆಯನ್ನು ಪಡೆಯುತ್ತಾನೆ. ಗಂಗಿ ತನ್ನನ್ನು ಸಂಪೂರ್ಣ

ನಂಬಿದ್ದಾಳೆಂದು ಭರವಸೆ ಬಂದಾಗ ಒಂದು ದಿನ ಬೊಂಬಾಯಿ ತೋರುಸುವುದಾಗಿ ಕರೆದೊಯ್ದು ಅಲ್ಲಿ ಅವಳನ್ನು ಸೂಳೆಗೇರಿಯಲ್ಲಿ ಮಾರಿ ಬರುತ್ತಾನೆ. ಮದುವೆಯ ಉತ್ಕಟೇಚ್ಛೆಯಲ್ಲಿ ಏನಾಗಬಾರದೆಂದಿದ್ದಳೋ ಗಂಗಿ ಅದೇ ಆಗಬೇಕಾಗಿ ಬಂದುದು ಗಂಗಿಯ ಸೋಲಾಗುತ್ತದೆ. ಗರತಿಯಾಗಿ ಮರ್ಯಾದೆಯಾಗಿ ಬದುಕಲಿಚ್ಛಿಸಿದರೂ ಹಾವಪ್ಪನ ಕುತಂತ್ರ ಗಂಗಿಯನ್ನು ವೇಶ್ಯಯಾಗಿಸುವಲ್ಲಿ ಸಫಲವಾಗುತ್ತದೆ.

ಪುರುಷ ಸ್ವಾರ್ಥಕ್ಕೆ ಲೋಲುಪತೆಗೆ ಗಂಗಿಯ ಬದುಕು ಘೋರ ದುರಂತಕ್ಕೀಡಾಗುತ್ತದೆ. ನೇರವಾಗಿ ಸಾಧಿಸಲಾಗದುದನ್ನು ಮೋಸದಿಂದ ಸಾಧಿಸುವ ಹಾವಪ್ಪನಂಥವರಿಗೆ ಹೆಣ್ಣು ಕೇವಲ ಭೋಗದವಸ್ತು. ಜಾಗತೀಕರಣದ ಸಂದರ್ಭದಲ್ಲಿ ಮಾರಾಟ ಹೊಸ ಪಿಡುಗಾಗಿ ಹೆಣ್ಣುಗಳ ಬದುಕನ್ನು ಆಕ್ರಮಿಸುತ್ತಿದೆ.

ಬಸವಿಯ ಮಗಳು ಬಸವಿಯೆ ಆಗಬೇಕೆಂದು ವಿಧಿಸುವ ಸಾಮಾಜಿಕ ನಿಯಮ ದಲಿತ ಮಹಿಳೆಯ ಬದುಕಿನ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದಲ್ಲದೆ ಅವಳಿಗಿಷ್ಟವಿಲ್ಲದ ಹೀನ ಬದುಕನ್ನು ಅವಳ ಮೇಲೆ ಹೇರುತ್ತದೆ. ವೈಯಕ್ತಿಕ ಆಕಾಂಕ್ಷೆಗಿಂತ ಸಾಮಾಜಿಕ ಒತ್ತಡಗಳು ಮಹಿಳೆಯ ಬದುಕನ್ನು ನಿಯಂತ್ರಿಸುವುದನ್ನು ಕಥೆ ಪ್ರತಿನಿಧಿಸುತ್ತದೆ. ಇತ್ತೀಚೆಗೆ ಕೇಳಿಬರುತ್ತಿರುವ ಹೆಣ್ಣುಗಳ ಸಾಗಣೆ ಸಮಾಜದಲ್ಲಿ ಎಂದಿನಿಂದಲೋ ಇರುವುದನ್ನು ಕಥೆ ದಾಖಲಿಸುತ್ತದೆ.

ಎಂ.ಜಿ.ದೇಶಪಾಂಡೆಯವರ 'ಜಾತಿ ಅರಿಯದ ಪ್ರೀತಿ' ಕಥೆ ಅಂತರ್ ಜಾತಿಯ ವಿವಾಹವನ್ನು ವಸ್ತುವಾಗಿಸಿಕೊಂಡಿದೆ. ರಮಾ ಜಾನ್‌ಸನ್‌ನನ್ನು ಪ್ರೀತಿಸಿ ತಂದೆಗೆ ಹೇಳಲಾಗದೆ ತನ್ನ ಡೈರಿಯಲ್ಲಿ ಬರೆದಿರುತ್ತಾಳೆ. ಏನನ್ನೋ ಹುಡುಕಲು ಹೋಗಿ ಅದನ್ನು ಗಮನಿಸಿದ ಗುರುರಾಯರು ಈ ಸಂಬಂಧವನ್ನು ನಿರಾಕರಿಸುತ್ತಾರೆ. ರಮಾ ಬೇರೆ ವಿವಾಹವಾಗಲೊಪ್ಪದೆ ನೀರಸವಾಗಿ ದಿನಕಳೆಯ ತೊಡಗಿದಾಗ ಮಗಳ ಸ್ಥಿತಿಯನ್ನು ನೋಡಲಾಗದೆ ರಾಯರು ಸ್ವತಃ ಜಾನಸನ್‌ನನ್ನು ಹುಡುಕಿ ಕರೆತರುತ್ತಾರೆ.

ಮನೆತನದ ಮರ್ಯಾದೆಯೆ ಅತಿಮುಖ್ಯವೆಂದು ಭಾವಿಸಿ ರಮಾಳ ಅಂತರ್‌ಜಾತಿಯ ವಿವಾಹವನ್ನು ನಿರಾಕರಿಸಿದ್ದ ರಾಯರು ಅವಳ ಪ್ರಬಲ ಇಚ್ಛಾಶಕ್ತಿ ಹಾಗೂ ಪ್ರೀತಿಗೆ ಮಣಿಯುತ್ತಾರೆ. ಅಂತರ್‌ಜಾತಿಯ ಪ್ರೇಮಿಗಳಲ್ಲಿ ತಾಳ್ಮೆ ಹಾಗೂ ಮನೆಯವರನ್ನು ಒಲಿಸುವ ಜಾಣ್ಮೆಗಳಿದ್ದಾಗ ಅವರ ಪ್ರೇಮ ಯಶಸ್ವಿಯಾಗುತ್ತದೆ. ಮನೆಯವರೊಂದಿಗಿನ ಸಂಬಂಧ ಆತ್ಮೀಯವಾಗಿದ್ದಾಗ ಅವರನ್ನು ಒಪ್ಪಿಸುವುದು ಸುಲಭ ಎಂಬುದನ್ನು ಕಥೆ ಪ್ರತಿಪಾದಿಸುತ್ತದೆ. ರಮಾಳ ಬದುಕು ಅವಳ ತಾಳ್ಮೆ ಬುದ್ಧಿವಂತಿಕೆಯಿಂದ ಅವಳಿಷ್ಟದಂತೆ ರೂಪಗೊಳ್ಳುತ್ತದೆ.

ಗೀತಾ ಅವರ 'ಜ್ವಲಂತ' ಕಥಾ ಸಂಕಲನದಲ್ಲಿಯ 'ಬೆಳಕಿನೆಡೆಗೆ' ಕಥೆಯಲ್ಲಿ ಸಾಹುಕಾರನ ಮಗ ಈರಣ್ಣ ಮನೆಗೆಲಸದ ಭವಾನಿಯ ಮೇಲೆ ಅತ್ಯಾಚಾರ ಮಾಡುತ್ತಾನೆ. ಮದುವೆಯಾಗಿ

ಒಬ್ಬನ ಮಡದಿಯಾಗಿ ಬದುಕಬೇಕಾಗಿದ್ದ ಭವಾನಿ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಈರಣ್ಣನ ಇಟ್ಟುಕೊಂಡವಳಾಗಿ ಬದುಕು ಸವೆಸಬೇಕಾಗುತ್ತದೆ. ಅವಳ ಮಗಳು ಗೌರಿ ದೊಡ್ಡವಳಾದ ಮೇಲೆ ಅವಳಿಗೆ ಗಂಡು ಹುಡುಕುವಂತೆ ಸಾಹುಕಾರನಿಗೆ ಹೇಳುತ್ತಾಳೆ. ಆತನ ಕುಲದವರಾಗಲಿ, ಆಕೆಯ ಕುಲದವರಾಗಲಿ ಗೌರಿಯನ್ನು ಮದುವೆಯಾಗಲು ತಯಾರಿಲ್ಲವೆಂದು ಆತ ಹೇಳಿದಾಗ ಭವಾನಿಗೆ ಸಿಟ್ಟು ಉಕ್ಕುತ್ತದೆ. "ಆಕಿ ನಿಮ್ ಮಗಳಂಬಾದು ಸುಳ್ಳೇನು? ನೀವು ನನ್ನ ಕೊಳ್ಳಾಗ ತಾಳಿ ಕಟ್ಟಿಲ್ಲಂದ್ರೇನಾಯ್ತು? ಮಕ್ಕಳಿಗಿ ತಂದಿ ಜಾತಿನೇ ಬರ್ತದಂತ ಹೇಳ್ತಾರ. ಅಂದ ಮೇಲೆ ನಿಮ್ಮ ಜಾತಿಯವ ಯಾವನಾದ್ರೂ ನನ್ ಮಗಳಿಗೆ ಲಗ್ನ ಆಗ್ಬೇಕು"[೨೬] ಎನ್ನುವ ಭವಾನಿಯ ಮಾತುಗಳು ತರ್ಕಸಮ್ಮತವಾದವು ನ್ಯಾಯಬದ್ಧವಾದವು. ಆದರೆ ಮೇಲು ಜಾತಿಯ ಗಂಡಸರಿಗೆ ಮದುವೆಯಾಗಿ ವಂಶ ಮುಂದುವರಿಸಲು ತಮ್ಮ ಜಾತಿಯ ಹೆಣ್ಣೆ ಆಗಬೇಕು. ಇಟ್ಟುಕೊಳ್ಳಲಿಕ್ಕೆ ಯಾವ ಜಾತಿಯ ಹೆಣ್ಣಾದರೂ ಆಗುತ್ತದೆ. ಹಾಗಾಗಿ ಸಾಹುಕಾರನ ತಂಗಿಯ ಮಗ ಗೌರಿಯನ್ನು ಇಟ್ಟುಕೊಳ್ಳಲು ಮುಂದೆ ಬಂದಿದ್ದಾನೆ ಎಂದು ಸಾಹುಕಾರ ತಿಳಿಸುತ್ತಾನೆ. ತನ್ನ ಬದುಕಿನಿಂದ ಪಾಠ ಕಲಿತಿದ್ದ ಭವಾನಿ ಆತನ ಈ ಪ್ರಸ್ತಾಪದಿಂದ ಸಿಡಿದು ನಿಂತು ಅವನಿಗೆ ಸವಾಲೆಸೆಯುತ್ತಾಳೆ. "ಎಂತಾ ಅಪ್ಪನೋ ನೀನು? ಈ ರಂಡಿಯಾಗಿ ನಾ ಉಂಡ ದುಕ್ಕ ಸಂಕಟ ಚಿಂತಿ ಅಪಮಾನಗೋಳೇ ಸಾಕು. ನನ್ನ ಮಗಳಿಗಿನೂ ನಾ ನನ್ಹಂಗ ಮಾಡಂಗಿಲ್ಲಂತ ತಿಳಿ ನಿನ್ನೆದಿ ಮ್ಯಾಲ ಬರ್ದು ಇಟಗೊ. ನನ್ ಮಗಳು ಆದರ ಒಂದು ಗಂಡಿನ ತಾಳಿಕಟ್ಟಿದ ಹೆಂತಿ ಆಗ್ತಾಳ ಖರೆ. ಇಲ್ಲಂದ್ರ ತನ್ನ ಹೊಟ್ಟೆ ತಾ ತುಂಬಿಸಿಕೊಂಡು ಯಾವ ಗಂಡಸಿನ ಅನ್ನಕ್ಕೆ ಆಸಿ ಬೀಳಲಾರ್ದೆ ಸೋತಂತ್ರ ಆಗಿ ಬಾಳ್ತಾಳ ತಿಳಿತೇನು?"[೨೭] ಎನ್ನುವ ಅವಳ ಮಾತುಗಳು ಅವಳ ಬದುಕನ್ನು ಪ್ರತಿನಿಧಿಸುತ್ತದೆ.

ತನಗಾದ ಅನ್ಯಾಯವನ್ನು ಬಾಯ್ಮುಚಿ ಸಹಿಸಿದ್ದ ಭವಾನಿಗೆ ತನ್ನ ಮಗಳಿಗೂ ಮುಂದುವರಿಯುತ್ತದೆಂದು ತಿಳಿದಾಗ ಆಸ್ಫೋಟಿಸುವುದು ಅನಿವಾರ್ಯವಾಗುತ್ತದೆ. ಮದುವೆಯಾದ ಹೆಂಡತಿಯಲ್ಲಿ ಜನಿಸಿದ್ದ ಮಗಳನ್ನು ಮದುವೆ ಮಾಡಿಕೊಡುವ ಈರಣ್ಣ ಸಾಹುಕಾರ ಭವಾನಿಯ ಮಗಳನ್ನು ಯಾವುದೇ ಕಾಳಜಿ ಇಲ್ಲದೆ ಸೋದರಳಿಯನಿಗೆ ಇಟ್ಟುಕೊಂಡವಳಾಗಿ ಮಾಡಲು ಹೊರಡುವುದು ಗಂಡಸಿನ ಸ್ವಾರ್ಥದ ಪರಮಾವಧಿಯಾಗಿ ಕಾಣುತ್ತದೆ. ಸ್ವಂತ ಮಗಳೇ ಆಗಿದ್ದರೂ ತಾಯಿಯ ಕಾರಣದಿಂದ ಜಾತಿಪ್ರಜ್ಞೆ ಭೂತವಾಗಿ ಕಾಡುತ್ತದೆ. ತನ್ನ ಲಾಲಸೆಗಾಗಿ ಒಬ್ಬ ಹೆಂಗಸಿನ ಬದುಕು ನಲುಗಿ ಹೋದುದರ ಯಾವ ಭಾವವೂ ಅವನಲ್ಲಿ ಕಾಣುವುದಿಲ್ಲ. ಹೆಣ್ಣುಗಳಿರುವುದೇ ತನ್ನಂತಹವರನ್ನು ತೃಪ್ತಿಪಡಿಸಲು ಎಂಬ ಧೋರಣೆ ಅವನದು ತನ್ನ ಜಾತಿಯ ಬಡವನ ಮಡದಿಯಾಗಿ ಬದುಕುವುದಕ್ಕಿಂತ, ಮೇಲು ಜಾತಿಯ ಶ್ರೀಮಂತನ ಇಟ್ಟುಕೊಂಡವಳಾಗಿ ಬಾಳುವುದು ಗೌರವವೆಂದೇ ಅವರನ್ನು ನಂಬಿಸುತ್ತ ಬರಲಾಗಿದೆ.

ಹೀಗೆ ಜಾತಿ ಕಟ್ಟುಪಾಡಿನ ಹೈದರಾಬಾದ್ ಕರ್ನಾಟಕದ ಸಾಮಾಜಿಕ ವ್ಯವಸ್ಥೆಯಲ್ಲಿ ಅಂತರ್‌ಜಾತಿಯ ವಿವಾಹಗಳು ಸುಲಭಸಾಧ್ಯವಲ್ಲ ಎಂಬುದನ್ನು ಕಥಾ ಸಾಹಿತ್ಯ ಚಿತ್ರಿಸಿದೆ. ಮುಸ್ಲೀಂ ಯುವತಿ ಗೋಹರ್‌ಜಾನ್ ಹಿಂದೂ ಯುವಕನನ್ನು ಪ್ರೀತಿಸಿದಾಗ ಮೂಲಭೂತವಾದಿಗಳು 'ಕೊಲೆ'ಯಂಥ ಜೀವವಿರೋಧಿ ಕಾರ್ಯಕ್ಕೈಗೊಂಡು ಗೋಹರಳ ಬದುಕನ್ನು ನರಕವಾಗಿಸುತ್ತಾರೆ. ಮೇಲ್‌ಜಾತಿ ಕೆಳಜಾತಿ ವಿವಾಹಗಳು ಸಹ ಸುಲಭಸಾಧ್ಯವಲ್ಲ. ದಲಿತ ಮಹಿಳೆ ಗಂಗಿ ಬಸವಿಯಾಗಲೊಲ್ಲದೇ ಮದುವೆಯಾಗಿಯೂ ಮೋಸಕ್ಕೊಳಗಾಗುತ್ತಾಳೆ. ರಮಾ ಹಾಗೂ ಮಹಾದೇವಿಯರು ತಮ್ಮ ಗಟ್ಟಿನಿರ್ಧಾರದಿಂದ ಮನೆಯವರನ್ನು ಒಪ್ಪಿಸುವಲ್ಲಿ ಸಮರ್ಥರಾಗುತ್ತಾರೆ.

ವಿವಾಹ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯವಹಾರವೆಂಬಂತಾಗಿ ಮಹಿಳೆಯ ಬದುಕಿನ ಹತ್ತು ಹಲವು ಸಮಸ್ಯೆಗಳಿಗೆ ಕಾರಣವಾಗಿದೆ. ಪ್ರೇಮವಿವಾಹಗಳೂ ಈ ಸಮಸ್ಯೆಗಳಿಗೆ ಸ್ವಲ್ಪಮಟ್ಟಿನ ಪರಿಹಾರವಾಗಬಹುದು ಎಂದು ಚಿಂತನೆ ನಡೆದಿರುವ ಸಂದರ್ಭದಲ್ಲಿ ಪ್ರೇಮವೂ ವ್ಯವಹಾರವಾಗಲು ಹೊರಟಾಗ ಎಚ್ಚತ್ತ ಸ್ತ್ರೀಪ್ರಜ್ಞೆ ಅದರಿಂದ ಪಾರಾಗುವುದನ್ನು ಕಥೆ ಸ್ತ್ರೀಪರ ನಿಲುವಿನಲ್ಲಿ ನಿರೂಪಿಸುತ್ತದೆ.

**ವಿಧವಾ ವಿವಾಹ :**

ಹೈದರಾಬಾದ್ ಕರ್ನಾಟಕದ ಸಾಮಾಜಿಕ ವ್ಯವಸ್ಥೆಯಲ್ಲಿ ಕೆಳಜಾತಿಯಗಳಲ್ಲಿ ವಿಧವೆಯಾದ ಮಹಿಳೆಗೆ 'ಕೂಡಿಕೆ ಅಥವಾ ಉಡುಕಿ' ಎಂಬ ಹೆಸರಲ್ಲಿ ಪುನರ್‌ವಿವಾಹದ ಅವಕಾಶವಿತ್ತು ಇಂದಿಗೂ ಇದೆ. ಆದರೆ ಮೇಲ್ಜಾತಿಗಳಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಸತಿಪದ್ಧತಿ ಜಾರಿಯಲ್ಲಿದ್ದು ಗಂಡನೊಂದಿಗೆ ಮಹಿಳೆ ಜೀವಂತ ಚಿತೆ ಏರಬೇಕಾಗಿತ್ತು. ಸಾಯಲೊಪ್ಪದವರನ್ನು ತಲೆಬೋಳಿಸಿ ವಿಕೃತಗೊಳಿಸಿ ನಿಷ್ಠುರದ ಬದುಕಿಗೆ ಕಟ್ಟಿಹಾಕಲಾಗುತ್ತಿತ್ತು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಬ್ರಿಟೀಷ ಆಡಳಿತಗಾರರಿಂದ ಪ್ರಶ್ನಿಸಲ್ಪಟ್ಟ ಸಂಗತಿ ಸುಧಾರಣಾ ಪ್ರಕ್ರಿಯೆಯಾಗಿ ವಿಧವಾ ವಿವಾಹದ ಕುರಿತು ಆಲೋಚಿಸುವಂತಾಯಿತು. ಪುರುಷ ಬೆಂಬಲವಿದ್ದಾಗಲೂ ಆರಂಭದಲ್ಲಿ ಸ್ವತಃ ಮಹಿಳೆಯರು ಈ ಅವಕಾಶ ಬಳಸಿಕೊಳ್ಳಲು ಹಿಂಜರಿದರು.

ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ವಿಧವಾ ವಿವಾಹವೇ ಸಮಸ್ಯೆಯಾದ ಸಾಕಷ್ಟು ನಿದರ್ಶನಗಳು ದೊರೆಯುತ್ತವೆ. ಜಯತೀರ್ಥ ರಾಜುಪುರೋಹಿತರ ಸಯಿದಾ ಸುಮತಿಯಾದಳು ಕಥೆಯ ಸುಮತಿ, ಮುಂದೇನು ಕಥೆಯ ಆನಂದಿದೇವಿ, ಬಾಲಚಂದ್ರ ಜಯಶೆಟ್ಟಿಯವರ ತುಂಗಾ ಕಥೆಯ ತುಂಗಾ, ಉಡುಕಿ, ಕಥೆಯ ಶಿವಮ್ಮ ಸಂಧ್ಯಾ ಹೊನಗುಂಟಿಕರ ಅವರ ತನಗೆಟುಕಾದಿದ್ದರೇನು ಕಥೆಯ ಸುಧಾ, ಗೀತ, ಲಲಿತಾ ದೇಮಶೆಟ್ಟಿಯವರ ಮಮತೆಯ ಕೊಲೆ ಕಥೆಯ ಬಕ್ರಿ, ಯಶೋದಮ್ಮ ಮೊದಲಾದ ಮಹಿಳೆಯರು ವಿಧವಾ ವಿವಾಹಕ್ಕಾಗಿ ಹಂಬಲಿಸಿದ, ವಿಧವಾ ವಿವಾಹವೂ ಸಮಸ್ಯೆಯಾದ ಹಾಗೂ ವಿವಾಹವಾಗಲು ಪ್ರಯತ್ನಿಸುವ ಸಂಗತಿಗಳು ಕಥಾ ಸಾಹಿತ್ಯದಲ್ಲಿ ಅನಾವರಣಗೊಂಡಿವೆ.

ವಿವಾಹಿತ ಮಹಿಳೆ ಸರ್ವಾಲಂಕಾರಭೂಷಿತೆಯಾಗಿರಬೇಕು. ಒಂದು ಕ್ಷಣವೂ ಮುತ್ತೈದೆಯ ಅಲಂಕಾರದಲ್ಲಿ ಕೊರತೆಯುಂಟಾಗಬಾರದು ಅದೇ ವಿಧವೆಯಾದವಳು ಗಂಡ ಸತ್ತೊಡನೆ ಅಲಂಕಾರವನ್ನು ವರ್ಜಿಸಬೇಕು. ಅವಳಿಗಿಷ್ಟವಿಲ್ಲದಿದ್ದರೂ ಒತ್ತಾಯ ಹೇರಲಾಗುತ್ತದೆ. ಗಂಡು ಒಮ್ಮೆ ಸತ್ತರೆ ಹೆಣ್ಣು ಜೀವನದ ಪ್ರತಿಕ್ಷಣ ಸಾಯುವಂತೆ ಮಾಡಲಾಗುತ್ತದೆ. ಅಲಂಕರಿಸಿಕೊಂಡ ಹೆಣ್ಣು ಆಕರ್ಷಣೆಯ ಕೇಂದ್ರವಾಗುತ್ತಾಳೆ. ಪರಪುರುಷರ ಕೆಟ್ಟ ದೃಷ್ಟಿಗೆ ಕಾರಣವಾಗುತ್ತಾಳೆ ಎಂದು ಅವಳ ಹಿತಚಿಂತಕರಂತೆ ಹೇಳಿದರೂ ವಿಧವೆಯನ್ನು ಅವಮಾನಿಸುವ ಹಾಗೂ ಸುಲಭವಾಗಿ ಗುರುತಿಸಿ ಬಳಸಿಕೊಳ್ಳುವ ಹುನ್ನಾರ ಕಂಡುಬರುತ್ತದೆ ಇಂಥ ತಂತ್ರಕ್ಕೊಳಪಡಲಿಚ್ಚಿಸದೇ ಮಹಿಳೆ ಸಾವಿಗೆ ಶರಣಾದರೂ ಸಾಯದೇ ಬದುಕಿ ವಿಧವಾ ವಿವಾಹವಾದುದನ್ನು ಬಾಲಚಂದ್ರ ಜಯಶೆಟ್ಟಿ ಕಥೆಯಾಗಿಸಿದ್ದಾರೆ.

ಬಾಲಚಂದ್ರ ಶೆಟ್ಟಿಯವರ 'ತುಂಗಾ' ಕಥೆ ಬ್ರಾಹ್ಮಣ ಸಮಾಜದ ವೈಧವ್ಯದ ಆಚರಣೆ ಕ್ರೌರ್ಯಕ್ಕೆ ಕೊರಳೊಡ್ಡದೆ. ಸಾವನ್ನು ಆಶ್ರಯಿಸಲು ಹೊರಟ ತುಂಗಾ ವಿಧವಾ ವಿವಾಹವಾಗಿ ಹೊಸ ಬದುಕಿಗೆ ಪ್ರವೇಶ ಪಡೆಯುವ ವಸ್ತುವುಳ್ಳದ್ದು.

ಬಾಲಚಂದ್ರ ಜಯಶೆಟ್ಟಿಯವರು ವಿಧವಾ ಜೀವನದ ಅಸಹನೀಯತೆಯನ್ನು ಹೊರಗಿನಿಂದಲೇ ಗುರುತಿಸಿ ಸಮಾನ ಮನಸ್ಕ ಸಂಗಾತಿ ದೊರೆತರೆ ವಿವಾಹ ವೈಧವ್ಯಕ್ಕೊಂದು ಪರಿಹಾರವೆಂಬುದನ್ನು ಪರಿಭಾವಿಸುತ್ತಾರೆ.

ಬ್ರಾಹ್ಮಣ ಸಾಮಾಜಿಕ ವ್ಯವಸ್ಥೆಯಲ್ಲಿ ಹುಟ್ಟಿ ತಿಳುವಳಿಕೆ ಮೂಡುವ ಮೊದಲೆ ವಿವಾಹ, ವೈಧವ್ಯಗಳೆರಡನ್ನು ಎದುರುಗೊಳ್ಳುವ ತುಂಗಾ ವಿಕಾರ ಸ್ವರೂಪದಲ್ಲಿ ಬದುಕಲಿಚ್ಛಿಸದೆ, ಸಾವಿಗೆ ಸಿದ್ಧಳಾದಾಗ ಅವಳನ್ನುಳಿಸಿ ವೀರಶೈರವ ಮಠವೊಂದರಲ್ಲಿ ಆಶ್ರಯ ಒದಗಿಸುತ್ತಾನೆ. ಡಾ.ಬಂಸತ. ಮಠಕ್ಕೆ ಬರುತ್ತಿದ್ದ ಶ್ರೀಕಾಂತ ತುಂಗಾಳ ಪೂರ್ವಾಪರಗಳನ್ನರಿಯದೆ ಅವಳ ನಡತೆಯನ್ನು ಮೆಚ್ಚಿ ಮದುವೆಯಾಗಲಿಚ್ಚಿಸುತ್ತಾನೆ. ಸ್ವಾಮಿಗಳೂ ತುಂಗಾಳಿಗೆ ವಿವಾಹವಾಗಲು ಹೇಳುತ್ತಾರೆ. ತನ್ನ ಬಗೆಗಿನ ಕನಿಕರ ಇದಕ್ಕೆ ಕಾರಣವಾಗಿರಬಹುದೆಂದು ತುಂಗಾ "ನನಗೆ ಒಬ್ಬರ ಕನಿಕರದ ಪ್ರೀತಿ ಬ್ಯಾಡ ಮುತ್ಯಾವ್ರೆ .ನಾ ಉಪಕಾರ ಮಾಡೇನಿ ಅನ್ನೋ ಭಾವನೆ ಅವರಲ್ಲಿ ಎಂದಾದ್ರೂ ಮೂಡಿದ್ರ ನನಗೆ ದೊಡ್ಡ ಆಘಾತ ಆಗ್ತದ"[೨೮] ಎನ್ನುತ್ತಾಳೆ. ಅದಕ್ಕೆ ಶ್ರೀಕಾಂತ ನಾನು ಬದುಕಬೇಕು ಬದುಕಿಗೆ ಮಿಡಿಯಬೇಕು ಅನ್ನೋದೆ ನನ್ನ ಹಂಬಲ ಇದಕ್ಕೆ ತುಂಗಾ ಹೆಗಲುಕೊಟ್ಟು ನನ್ನ ಜೋಡಿ ಸಹಕರಿಸಬೇಕು ಎಂದು ಕೇಳುತ್ತಾನೆ. ಹೆಣ್ಣು-ಗಂಡು ಪರಸ್ಪರ ಸಹಕಾರಿಗಳಾದಾಗ ಜೀವನ ಸಮರಸವಾಗುತ್ತದೆ. ಹಾಗಲ್ಲದೆ ಪ್ರಧಾನತೆ ಅಧೀನತೆಗಳ ಅಂತರದಲ್ಲಿ ಸಾಗಿದರೆ ಅಧೀನರು ಕಷ್ಟಕ್ಕೀಡಾಗುತ್ತಾರೆ. ಮಾತ್ರವಲ್ಲ ಅದರ ಪ್ರಭಾವ ಪ್ರಧಾನರನ್ನು ತಟ್ಟಿಯೆ ತಟ್ಟುತ್ತದೆ.

'ಯವ್ವಾ! ಮನುಷ್ಯಾಗ ಸಹಜವಾದಂಥ ಪ್ರವೃತ್ತಿಯನ್ನು ಬಲವಂತವಾಗಿ ಹತ್ತಿಕ್ಕಲಾಕ ಪ್ರಯತ್ನ ಮಾಡಬ್ಯಾಡ. ಅದು ಸುಸಂಸ್ಕೃತವಾದ ಮರ್ಯಾದೆಯೊಳಗ ವ್ಯಕ್ತಿ ಆಗ್ತಿತ್ತು. ಅಂದ್ರ ಅದನ್ನು ಚಿವುಟ ಬ್ಯಾಡ ಯಾಕಂದ್ರ ಒಳಗ ಅದರ ಬೇರುಗಳು ಆಳಕ್ಕೆ ಇಳೀತಾ ಹೋಗ್ತಾವ. ಆದರ ಒಂದು ಮಾತು ಅದು ಸ್ವೈರಕ್ಕ ತಿರುಗದಾಂಗ ಕಾಳಜಿ ವಹಿಸಬೇಕಾಗಿದ್ದು ನಿನ್ನಂಥವ್ರ ಕರ್ತವ್ಯ ಆದ"[೨೯] ಎಂದು ಹೇಳುವ ಚಿಟ್ಟಯ್ಯನ ಮಾತಿನಲ್ಲಿ ಪಿತೃ ಸಂಸ್ಕೃತಿಯ· ನಿರೀಕ್ಷೆಯ ಅಂಶವೇ ಇದ್ದರೂ ಅಂತರ್‌ಜಾತಿಯ ಹಾಗೂ ವಿಧಾವ ವಿವಾಹ ಮಾಡಿಸುವಲ್ಲಿ ಪ್ರಗತಿಪರ ನಿಲುವನ್ನು ಗುರುತಿಸಬಹುದಾಗಿದೆ. ವಿಧವೆಗೆ ವಿವಾಹವೇ ಪರಿಹಾರವಲ್ಲವಾದರೂ ಹೆಣ್ಣು–ಗಂಡಿನ ಪರಸ್ಪರ ಸಂಬಂಧದ ಬೆಳವಣಿಗೆಗೆ ಸಭ್ಯ ಸಮಾಜ ಭಾವಿಸಿದ ಪರಿಹಾರ ಅದಾಗಿದೆ. ವಿಧವಾ ವಿವಾಹ, ಅಂತರ್‌ಜಾತಿ ವಿವಾಹಗಳು ಇಂದಿಗೂ ಸಾಮಾಜಿಕ ಮನ್ನಣೆಯನ್ನು ಪಡೆಯುವಲ್ಲಿ ಶ್ರಮಿಸಬೇಕಿರುವ ಸಂದರ್ಭದಲ್ಲಿ ಇದನ್ನು ಸಾಧಿಸುವುದು ಒಂದು ದೊಡ್ಡ ಸಾಧನೆ ಎಂದು ಭಾವಿಸಿ ಕಥೆಯಾಗಿಸಲಾಗಿದೆ. ವಿವಾಹವೇ ಒಂದು ಸಮಸ್ಯೆಯಾಗಿ ಆಲೋಚಿಸುವ ಮನಸ್ಥಿತಿ ಸಾಮಾಜಿಕ ನೆಲೆಯಲ್ಲಿ ಕಾಣಸಿಗದು.

ಆಧುನಿಕ ಚಿಂತನೆಯ ಪರಿಣಾಮ ಸುಶಿಕ್ಷಿತಳಾದ ಮೇಲ್ವರ್ಗದ ಮಹಿಳೆ ವಿಧವೆತನದಿಂದ ಹೊರಬರಲು ವಿವಾಹವಾಗುವ ಅಪೇಕ್ಷೆಯನ್ನು ವ್ಯಕ್ತಪಡಿಸಿದಾಗಲೂ ಸಾಂಪ್ರದಾಯಿಕ ಮನಸ್ಸುಗಳು ಸರಳವಾಗಿ ಒಪ್ಪಲಾರವು. ಕಾಲ ಪ್ರತಿಯೊಂದಕ್ಕೂ ಉತ್ತರವಾಗುತ್ತದೆ ಎಂಬಂತೆ ಈ ಹೊತ್ತು ವಿಧವಾವಿವಾಹ ಮೊದಲಿನಷ್ಟು ಕಷ್ಟದ್ದಾಗಿ ಉಳಿದಿಲ್ಲ.

ಸಂಧ್ಯಾ ಹೊನಗುಂಟಿಕರರ 'ತನಗೆಟುಕದಿದ್ದರೇನು' ಕಥೆ ವೈಧವ್ಯದಿಂದ ನೀರಸವಾಗಿದ್ದ ಬದುಕನ್ನು ವಿಧವಾ ವಿವಾಹದ ಮೂಲಕ ಪುನಃ ಕಟ್ಟಿಕೊಳ್ಳುವುದಾಗಿದೆ. ಸುಧಾ ಮದುವೆಯಾದ ಒಂದೆರಡು ತಿಂಗಳಿಗೇ ಆ್ಯಕ್ಸಿಡೆಂಟ್‌ನಲ್ಲಿ ಗಂಡನನ್ನು ಕಳೆದುಕೊಂಡು ಅಣ್ಣನ ಮನೆಗೆ ಬರುತ್ತಾಳೆ. ತಂದೆ ತಾಯಿಗಳಿಲ್ಲದ ಅಣ್ಣ ತಂಗಿ, ಸೋದರ ಮಾವನ ಆಶ್ರಯದಲ್ಲಿ ಬೆಳೆದವರು. ಅಣ್ಣನ ಮದುವೆಯ ನಂತರ ಬೇರೆ ಮನೆ ಮಾಡಿದಾಗ ಅತ್ತಿಗೆ ನಾದಿನಿಯರು ಕೆಲ ದಿನ ಚೆನ್ನಾಗಿಯೆ ಇರುತ್ತಾರೆ. ಒಂದೆರಡು ಮಕ್ಕಳಾಗಿ ಸ್ಥಿತಿವಂತರಾದಾಗ ಸುಧಾಳ ಅತ್ತಿಗೆ ಮಡಿವಂತಳಾಗಿ, ಸುಧಾಳ ವೈಧವ್ಯವನ್ನು ಹೀನಾಯವಾಗಿ ಕಾಣತೊಡಗುತ್ತಾಳೆ. "ಎಲ್ಲಾ ಬಿಟ್ಟು ನೀ ಯಾಕ ಹೂವಾ ತಂದಿಟ್ಟಿ? ನೀ ತಂದದ್ದು ದೇವರ ತಲಿಗಿಟ್ಟು ಪೂಜೆ ಮಾಡ್ಸಿ ಯಾವ ಪಾಪ ನಮಗ ಕಟ್ಟಬೇಕಂತ ಮಾಡಿದ್ಯವ್ವ'. ಆಕೀಗಿ ಬುದ್ಧಿ ಇಲ್ಲಂದ್ರ ನಿಮ್ಗೂ ಇಲ್ಲೇನ್ರಿ? ಅಕಿ ಮುಟ್ಟಿದ್ದು ಪೂಜಾಕ ಹೆಂಗ ಬರ್ತಾವ. ನನ್ನ ಕರ್ಮ ಇಂತಾಕಿ ಸರಿ ಎಷ್ಟು ದಿನ ಅದನೋ"[೩೦] ಎನ್ನುವ, ನೌಕರಿಗಾಗಿ, ಮದುವೆಗಾಗಿ ಮೋಹನ ಕೇಳಿದಾಗ ಸುಧಾಳನ್ನು ಎಳೆ ತಂದು ಆಕಿ ದರಿದ್ರದಹೆಣ್ಣು ಒಳಗಿಂದೊಳಗೆ ಇಂತ ಹಿಕಮತ್ ಮಾಡ್ಯಾಳ. ನಾಚಿಗಿ, ಮಾನ, ಎಲ್ಲಾ ಬಿಟ್ಟಾಳ. ಕಾಲ ಬಿಟ್ಟು ಕತ್ತಿ ಹಂಗ

ಕುಣಿಲಕತ್ತಾಳ. ನೌಕ್ರಿ ಮಾಡ್ತಾಳಂತ, ಲಗ್ನ ಆಗ್ತಾಳಂತ ಏನೇನು ಮಾಡಿ ಬೆಂಡಾಗತಾಳ."[೩೧] ಎಂದು ಒದರಾಡಿ ಅವಳನ್ನು ಹೀಯಾಳಿಸುತ್ತಾಳೆ. ಪ್ರತಿಯೊಂದರಲ್ಲೂ ತಪ್ಪು ಹುಡುಕುವುದು ಸಿಡುಕುವುದು ಆರಂಭವಾಗುತ್ತದೆ. ಈ ಮಧ್ಯ ಅತ್ತಿಗೆಯ ತಮ್ಮ ದತ್ತುವಿಗೆ ವರ್ಗವಾಗಿ ಇವರ ಮನೆಗೆ ಬಂದಾಗ ಅವನ ಸಣ್ಣ ಪುಟ್ಟ ಕೆಲಸಗಳು ಸುಧಾಳ ಪಾಲಿಗೆ ಬಂದು, ಅವನ ನೋಟದಲ್ಲಿ ತನ್ನ ಬಾಳಿಗೊಂದು ನೆಲೆ ಕಾಣಲು ಯತ್ನಿಸುತ್ತಾಳೆ. ಆದರೆ ದತ್ತು ಬೇರೆ ಹುಡುಗಿಯೊಂದಿಗೆ ವಿವಾಹವಾದಾಗ ತನ್ನ ಭಾವನೆ ತಪ್ಪೆಂದು ಗ್ರಹಿಸುತ್ತಾಳೆ. ಎದುರು ಮನೆಯ ಮೋಹನ ಇವಳತ್ತ ಆಸಕ್ತನಾಗಿ, ಅವಳ ಶಿಕ್ಷಣ ಮುಂದುವರಿಸುವ ಗಂಡನ ನೌಕರಿಯನ್ನು ಅವಳಿಗೆ ಕೊಡಿಸುವ ಪ್ರಸ್ತಾಪ ಮಾಡುತ್ತಾನೆ. ಅವನು ಒಪ್ಪದಿದ್ದಾಗ ತಾನು ಸುಧಾಳನ್ನು ಮದುವೆಯಾಗುವುದಾಗಿ ಕೇಳುತ್ತಾನೆ. ಸುಧಾಳಿಗೂ ಮೋಹನನನ್ನು ಮದುವೆಯಾಗುವ ಮನಸ್ಸಿರುತ್ತದೆ. ಅಣ್ಣ ಅತ್ತಿಗೆಯ ನಿರಾಕರಣೆಯಿಂದ ವಿಧಿಯಿಲ್ಲದೆ ಸುಮ್ಮನಾಗುತ್ತಾಳೆ. ಆದರೆ ಗುಣ ಭಾವಜಿಯ ಸಹಕಾರದಿಂದ ಗಂಡನ ನೌಕರಿ ಪಡೆದು ಅತ್ತಿಗೆಯ ಕಾಟದಿಂದ ಮುಕ್ತಳಾಗುತ್ತಾಳೆ.

ವಿಧವೆಯರಾಗಿ ತವರು ಸೇರುವ ಅನೇಕ ಮಹಿಳೆಯರ ಸ್ಥಿತಿ ಬಿಟ್ಟಿ ಆಳಿನಂತಾಗುತ್ತದೆ. ದಿನವಿಡೀ ಕೆಲಸ ಮಾಡಿದರೂ ಪರಿಗಣನೆಗೊಳ್ಳದೆ ಅವಳೊಂದು ಹೊರೆ ಎಂಬಂತೆ ಕಾಣಲಾಗುವುದರಿಂದ ಅವಳ ಬದುಕು ನಿತ್ಯ ಗೋಳಿನದಾಗುತ್ತದೆಂಬುದನ್ನು ಸುಧಾಳ ಪಾತ್ರ ಪ್ರತಿನಿಧಿಸುತ್ತದೆ.

ತನ್ನದೇ ಸ್ಥಿತಿ ಅಣ್ಣನ ಮಗಳು ಗೀತಾಳಿಗೆ ಒದಗಿದಾಗ ಸುಧಾ ಅವಳನ್ನು ಅತ್ಯಂತ ಸಹಾನುಭೂತಿಯಿಂದ ಕಾಣುತ್ತಾಳೆ. ಬಿಂದಿ ಬಳೆ ಕ್ಲಿಪ್ಪುಗೆಜ್ಜೆ ತಂದು ಕೊಟ್ಟಾಗ, ತನ್ನ ಸಂದರ್ಭದಲ್ಲಿ ವಿರೋಧಿಸಿದ್ದ ಅತ್ತಿಗೆ ಈಗ ಕಂಡೂ ಕಾಣದಂತಿರುತ್ತಾಳೆ. ಸುಧಾಳ ಒತ್ತಾಸೆಯಲ್ಲಿ ಗೀತಾಳ ಓದು ಮುಂದುವರಿಯುತ್ತದೆ. ಅವಳು ವಿಮಾ ಉದ್ಯೋಗಿಯನ್ನು ಪ್ರೀತಿಸುತ್ತಾಳೆಂದು ತಿಳಿದಾಗ ಸುಧಾಳನ್ನು ಕರೆಸಿದ ಅವಳಣ್ಣ ನಿರ್ಣಯವನ್ನು ಅವಳಿಗೇ ಬಿಡುತ್ತಾನೆ. ಸುಧಾ ಗೀತಾಳನ್ನು ತನ್ನೊಂದಿಗೆ ಕರೆದುಕೊಂಡು ಹೋಗಿ ರಿಜಿಸ್ಟರ್ ಮದುವೆ ಮಾಡಿಸುತ್ತಾಳೆ.

ಆರ್ಥಿಕ ಸಬಲತೆ ಇಲ್ಲಾದಾಗ ತನ್ನ ಬದುಕಿನ ಅವಕಾಶಗಳಿಂದ ವಂಚಿತಳಾದ ಸುಧಾ ಕೆಲಸಕ್ಕೆ ಸೇರುವ ಮೂಲಕ ತನ್ನ ಬದುಕಿನ ನೆಲೆಯನ್ನು ಕಂಡುಕೊಂಡುದಲ್ಲದೆ, ಅಣ್ಣನ ಮಗಳ ಬದುಕಿನ ನಿರ್ಣಾಯಕ ಹಂತದಲ್ಲಿ ನಿರ್ಧಾರ ಸ್ಥಾನದಲ್ಲಿ ನಿಲ್ಲುವ ಸಾಮರ್ಥ್ಯ ಪಡೆಯುತ್ತಾಳೆ.

ತನ್ನ ಬದುಕಿನ ನಿರ್ಧಾರ ತಾನೇ ಕೈಗೊಳ್ಳುವಂತಾದಾಗ ಹೆಣ್ಣಿನ ಬದುಕು ಸುಗಮವಾಗುತ್ತದೆ. ಎಂಬುದನ್ನು ಕಥೆ ಮನಗಾಣಿಸುತ್ತದೆ. ಹಾಗಲ್ಲದೆ ಹೆಣ್ಣಿನ ವಿವೇಚನಾ ಸಾಮರ್ಥ್ಯ ಬೆಳೆಯುವ ಪೂರ್ವದಲ್ಲೆ ಅವಳ ಕುರಿತ ನಿರ್ಧಾರಗಳನ್ನು ಇತರರು ತೆಗೆದುಕೊಳ್ಳುವುದರಿಂದ ದುರಂತವೇ ಹೆಚ್ಚಾಗುವ ಸಂಭವನೀಯತೆಯನ್ನು ಕಥೆ ಧ್ವನಿಸುತ್ತದೆ.

ಲಲಿತಾ ದೇಮಶೆಟ್ಟಿಯವರ 'ಮಮತೆಯ ಕೊಲೆ' ಕಥೆ ತಾಯಿಯೆ ಕೊಲೆಪಾತಕಿಯಾಗುವ ವಸ್ತುವಿನದು. ಮನೆಗಳಲ್ಲಿ ಮುಸುರೆ ಕೆಲಸ ಮಾಡುವ ಚಂದ್ರಿಯ ಗಂಡ ಚಂದು ಕುಡಿದು ಸತ್ತಾಗ ಚಂದ್ರಿಗೆ ಇಪ್ಪತ್ತೆರಡರ ಹರೆಯ ಒಂಟಿ ಬದುಕು ಅಸಾಧ್ಯವೆನಿಸಿ ಕೂಡಾವಳಿಗೆ ಸಿದ್ಧಳಾದಾಗ, ಅವಳ ಹನ್ನೊಂದು ತಿಂಗಳ ಚಂದದ ಮಗು ಬೆಳ್ಳಿಯನ್ನು ಹಮಾಲ ಹನುಮ ಬಿಟ್ಟು ಬಂದರೆ ಮಾತ್ರ ಕೂಡಾವಳಿಯಾಗುವುದಾಗಿ ಹೇಳುತ್ತಾನೆ. ಎಲ್ಲಿ ಬಿಡುವುದೆಂದು ತಿಳಿಯದ ಚಂದ್ರಿಗೆ ಯಾರಿಗಾದರೂ ಸಾಕಲು ಅಥವಾ ಮಾರಲು ಕೊಡುವಂತೆ ಹೇಳುತ್ತಾನೆ. ಮಗುವನ್ನು ಕೊಂಡವರು ಹಣಕ್ಕಾಗಿ ಭಿಕ್ಷೆ ಬೇಡಿಸಲು ಮಗುವಿನ ಕೈಕಾಲು ಮುರಿದು ಅಂಗವಿಕಲಾಳಾಗಿ ಮಾಡುತ್ತಾರೆ. ಇಲ್ಲವೇ ವೈಶ್ಯೆಯಾಗಿ ಮಾಡುತ್ತಾರೆಂದು ಹೆದರಿದ ಚಂದ್ರಿ ಮಗುವನ್ನು ಸಾಕಿಕೊಳ್ಳುವಂತೆ ಮಕ್ಕಳಿಲ್ಲದ ತನ್ನ ಮನೆಯೊಡತಿಗೆ ಕೇಳುತ್ತಾಳೆ. ಅವಳೂ ಸಿದ್ಧವಾಗದೆ ಇದ್ದಾಗ, ಒಂಟಿ ಬಾಳು ಬಾಳಲಾಗದೆ, ವೇಶ್ಯೆಯಾಗಲು ಮನಸ್ಸೊಪ್ಪದೆ ತಾನೆ ಬೆಳ್ಳಿಯನ್ನು ಕೊಲ್ಲುತ್ತಾಳೆ.

"ಅವ್ವಾರ.. ನಮ್ಮಂಥಾ ಕೆಲ್ಸದೋರಿಗೆ ಬಡೂರಿಗೆ ಈ ಮೈಸುಖಾ ಒಂದ್ಬಿಟ್ರೆ, ಬ್ಯಾರೆ ಯಾವ ಸುಖಾ ಐತಿ? ಮನಿಐತ್ಯಾ ಮಠಾಐತ್ಯಾ ಊರಾಗ ಮನಿಯಿಲ್ಲಾ ಅಡವ್ಯಾಗ್ ಒಲಾಯಿಲ್ಲಾ. ಉಡ್ಬೇಕಂದ್ರೆ ಮೈಮುಚ್ಚಾಕ ದಟ್ಟಿಲ್ಲಾ ಚಂಜೀಗ್ತಿಂದ್ರ ಮುಂಜಾನೆಗಿಲ್ಲ. ಮುಂಜಾನ್ತಿಂದ್ರ ಚಂಜೀಗಿಲ್ಲ ಆದ್ರ ಬದಕಾ ಅಂಬ್ಲಾಐತೆ ಈಗ ನೀವಾ ಏಳ್ರೀ ನಾವ್ ಯ್ಯಾಂಗ್ ಬದುಕ್ಬೇಕು? ಖರೇವಂದ್ರೂವೆ ನಾವ್ ಬದ್ಕಿದ್ದೂ ಮೈ ಸುಖಕ್ಕಂತನ. ನಮ್ಗೆ ಸಿಕ್ಕಾದು ಆಸ್ಗೆ ಸುಖಾ ಒಂದ. ಈಗ ಬೆಳ್ಳಿ ಅವ್ಳಂತ. ಅದ್ಕೂ ಕಲ್ಲು. ಈಗ್ ನೀವ ಏಳ್ರಿ ನಮ್ ಬಾಳೇವು ಒಂದು ಬಾಳೇವಾ?"[೨೨] ಎನ್ನುವ ಚಂದ್ರಿಯ ಮಾತಿನಲ್ಲಿ ಮಗುವಿನ ಕೊಲೆಯ ಹಿಂದಿನ ಒತ್ತಡ ಎಂಥದಾಗಿತ್ತು ಎಂಬುದು ತಿಳಿಯುತ್ತದೆ. ಹನುಮ ಮಗುವನ್ನು ಒಪ್ಪಿಕೊಂಡಿದ್ದರೆ ಚಂದ್ರಿ ಕೊಲೆಗಾರ್ತಿಯಾಗಬೇಕಾಗಿರಲಿಲ್ಲ. ಕಿರಿ ವಯಸ್ಸು ಯವ್ವನದ ಕಾಮನೆಯ ಸೆಳೆತ, ಬೇರೆ ಕನಸುಗಳಿಲ್ಲದ ನಿತ್ಯಾವರ್ತನದ ದುಡಿಮೆ, ಜೀವನಕ್ಕೆ ಸಿಗುವ ಅಲ್ಪ ಸುಖಕ್ಕೂ ಅಡ್ಡವೆಂದು ಭಾವಿಸಿ ಮಗುವನ್ನು ನಿಷ್ಕರುಣೆಯಿಂದ ಕೊಲ್ಲುವಂತೆ ಮಾಡುತ್ತದೆ. ತಾಯ್ತನ ತ್ಯಾಗಗಳು ಹೆಣ್ಣಿನ ಸಹಜ ಗುಣಗಳೆಂದು ಪಿತೃ ಸಂಸ್ಕೃತಿ ಹುಟ್ಟು ಹಾಕಿದ ಮೌಲ್ಯಗಳು ಬದುಕಿನ ವಾಸ್ತವದೆದುರು ನೆಲೆತಪ್ಪುತ್ತವೆ. ಮೂಲಭೂತ ಬದುಕೇ ಭದ್ರತೆ ಕಾಣದ ಸಂದರ್ಭದಲ್ಲಿ ಮೌಲ್ಯ ಚಿಂತನೆ ಹಸಿದವರಿಗೆ ತತ್ವಜ್ಞಾನ ಹೇಳಿದಂತೆ ವ್ಯರ್ಥ ಎಂಬುದನ್ನು ಕಥೆ ವಿವರಿಸುತ್ತದೆ.

ವಿಧವಾ ವಿವಾಹ, ಪುನರ್ ವಿವಾಹ ಅಥವಾ ವಿವಾಹ ಮಹಿಳೆಗೆ ಅನಿವಾರ್ಯವೇ ಎಂಬ ಚಿಂತನಾ ಕ್ರಮಗಳು ಆರಂಭವಾಗಿದ್ದರೂ, ಶಿಕ್ಷಣ ವಂಚಿತ ಪ್ರಗತಿಯಿಂದ ದೂರ, ಸಂಪ್ರದಾಯಶೀಲ ಪ್ರವೃತ್ತಿಯ ಹೈದರಾಬಾದ್ ಕರ್ನಾಟಕ ಸಾಮಾಜಿಕ ವ್ಯವಸ್ಥೆಯಲ್ಲಿ ವಿಧವಾ ವಿವಾಹ ಅಥವಾ ಪುನರ್ ವಿವಾಹಕ್ಕಾಗಿ ಪ್ರಯತ್ನಿಸುವುದೇ ಸುಧಾರಣಾವಾದಿ ಧೋರಣೆಯಾಗಿ ಕಥಾ ಸಾಹಿತ್ಯದಲ್ಲಿ

ಮೂಡಿಬಂದಿದೆ. ಸಾಹಿತ್ಯ ಆಗಬೇಕು ಎಂದು ನಿರೀಕ್ಷಿಸುವ ಸಂಗತಿಗಳು ಇನ್ನೂ ಸಮಾಜದಲ್ಲಿ ಆಗುತ್ತಿಲ್ಲ ಎಂಬುದನ್ನೆ ಸ್ಪಷ್ಟಪಡಿಸುತ್ತದೆ. ವಿಧವಾ ವಿವಾಹ ಇಂದಿಗೂ ಸಹಜವಾಗಿ ನಡೆಯುತ್ತಿಲ್ಲ. ನಡೆಯುವಂತಾಗಬೇಕೆಂಬ ಆಶಯ ಕಥಾ ಸಾಹಿತ್ಯದಲ್ಲಿ ವ್ಯಕ್ತವಾಗಿದೆ.

ಬಾಲಚಂದ್ರ ಜಯಶೆಟ್ಟಿಯವರ 'ಉಡುಕಿ' ಕಥೆ ಒಬ್ಬ ಮಗನಿದ್ದು ಉಡುಕಿ ವಿವಾಹ ಮಾಡಿಕೊಂಡ ಶಿವಮ್ಮನ ಇಕ್ಕಟ್ಟಿನ ಸ್ಥಿತಿಯನ್ನು ಮನಗಾಣಿಸುತ್ತದೆ.

ಖಂಡಪ್ಪ ಶಿವಮ್ಮ ಪರಸ್ಪರ ಆಕರ್ಷಿತರಾದಾಗ ಶಿವಮ್ಮನ ತಾಯಿ 'ಉಡುಕಿ' ವಿವಾಹವನ್ನು ತನ್ನ ಗಂಡು ಮಕ್ಕಳನ್ನು ವಿಚಾರಿಸದೆ ಮಾಡುತ್ತಾಳೆ. ಉಡಿಕಿಯ ನಂತರ ಖಂಡಪ್ಪನ ಮನೆಗೆ ಶಿವಮ್ಮ ತನ್ನ ಮೊದಲ ಮಗುವನ್ನು ತರಬಾರದೆಂದು ಖಂಡಪ್ಪ ಪಂಚರ ಎದುರು ಹೇಳುತ್ತಾನೆ. "ನಾ ಹೆಣ್ಣಿನ ಜೊತೆಗೆ ಉಡಕಿ ಮಾಡಿಕೊಂಡೇನಿ. ಪೈಲಾ ಗಂಡಗ ಹಡದ ಅಕೀ ಪೌರನ ಜೊತೆಗಲ್ಲ"[೩೩] ಎಂದು ವಾದಿಸುತ್ತಾನೆ. ಶಿವಮ್ಮನ ತಾಯಿ ಕೂಸವ್ವ "ಈ ಹಸುಗೂಸಿನ ಕಡೀಂದ ನಿನಗೇನೂ ಕೊಂಕ ಆಗದಂಗ ನಾ ನೋಡೋತೀನಿ ಈ ಕೂಸಿಗೆ ತಾಯಿಯಿಂದ ಅಗಲಿಸಿ ಪರದೇಶಿ ಮಾಡಬ್ಯಾಡ"[೩೪] ಎಂದು ಹೇಳಿದರೂ ಕೇಳದ ಖಂಡಪ್ಪನಿಗೆ ಪಂಚರು ಜರಾ ಮನುಷ್ಯತ್ವದ ನಿಗಾದಿಂದ ಮಾತಾಡು ಎಂದು ತಿಳುವಳಿಕೆ ಹೇಳುತ್ತಾರೆ. ಆದರೂ ಖಂಡಪ್ಪ ತನ್ನ ಹಟದಿಂದ ವಿಚಲಿತನಾಗುವುದಿಲ್ಲ. ಪಂಚರು ಶಿವಮ್ಮನ ಸಂಪತ್ತಿನ ಆಮಿಷ ಒಡ್ಡುತ್ತಾರೆ. ಆಗಲೂ ಖಂಡಪ್ಪ "ನನಗ ಯಾರ ಐಶ್ವರ್ಯನೂಬೇಕಾಗಿಲ್ಲ. ನುಚ್ಚು ಮಜ್ಜಿಗಿ ಕುಡ್ದು ಬದುಕತೇನಿ ಪೌರಗ ಸಾಕೋ ದಲಾಲಿ ನನಗೆ ಬ್ಯಾಡ"[೩೫] ಎಂದು ತಿರಸ್ಕರಿಸುತ್ತಾನೆ. ಕೊನೆಗೆ ಶಿವಮ್ಮ ಯವ್ವ "ನನ್ನ ಗಂಡ ಹೇಳೋದೇ ಸರಿ ಒಮ್ಮೆ ಕಟ್ಕೊಂಡ ಮ್ಯಾಲ ಮುಗದ್ಹೋಯ್ತು. ಈಗ ಗಂಡನೇ ಸರುವಸ್ವ ಈ ಕೂಸಿಗೆ ನಿನ್ನ ಹೊಟ್ಯಾಗ ಹಾಕ್ಕೋ"[೩೬] ಎಂದು ಒಬ್ಬಳೇ ಖಂಡಪ್ಪನ ಮನಗೆ ಹೋಗುತ್ತಾಳೆ.

ಇಲ್ಲಿ ವಿಧವಾ ವಿವಾಹವೇನೋ ನಡೆಯುತ್ತದೆ. ಆನಂತರವೇ ಸಮಸ್ಯೆ ಉದ್ಭವಿಸುವುದು ಮಗುವಿನ ಕಾರಣಕ್ಕೆ, ತಾನು ಕೂಡಿಕೆ ಮಾಡಿಕೊಂಡಿರುವುದು ಕೇವಲ ಶಿವಮ್ಮನೊಂದಿಗೆ ಎಂದು ವಾದಿಸುವ ಖಂಡಪ್ಪ ಯಾವುದೇ ಕಾರಣಕ್ಕೂ ಅವಳ ಮೊದಲ ಮಗುವನ್ನು ಸ್ವೀಕರಿಸಲು ಸಿದ್ಧನಾಗುವುದಿಲ್ಲ. ಶಿವಮ್ಮ ಕೂಡಿಗೆ ಮಾಡಿಕೊಂಡದ್ದೆ ತಪ್ಪು ಎಂಬಂತೆ 'ಉಡುಕಿ ಮಾಡಿಕೊಂಡು ಶಿವಮ್ಮ ಹಸುಗೂಸಾದ ರಾಜೋಟಿಯ ಜೀವನವನ್ನು ಅಂತಂತ್ರಗೊಳಿಸದೇ ಹೋಗಿದ್ದರೆ ಇಂಥ ಸಮಸ್ಯೆ ಉದ್ಭವಿಸುತ್ತಲೇ ಇರಲಿಲ್ಲ ಎನ್ನುವ ನಿರೂಪಕರ ಮಾತು, ಮಗುವಿನ ಪರವಾರಗಿ ಚಿಂತಿಸುವುದಾಗಿದೆಯೇ ಹೊರತು ಕಿರಿವಯಸ್ಸಿನಲ್ಲಿ ವಿಧವೆಯಾದ ಶಿವಮ್ಮನನ್ನು ಕುರಿತು ಆಲೋಚಿಸುವುದಾಗಿರುವುದಿಲ್ಲ. ಅಲ್ಲದೆ ಕೂಸವ್ವ ಮನೆಯಲ್ಲಿ ಮಕ್ಕಳಿಗೆ ಹೇಳಿ ಕೇಳಿ ಒಂದು ತೀರ್ಮಾನಕ್ಕೆ ಬಂದು ಕೆಲಸ ಮಾಡಿದ್ದಾರೆ. ಈ ದಿನ ಈ ರೀತಿಯಾಗಿ ಪಂಚಾಯತಿ ಸೇರಿಸುವ ಸಂದರ್ಭ ಒದಗುತ್ತಿರಲಿಲ್ಲ ಎಂಬ ಮಾತು ಗಂಡಸರನ್ನು ಕೇಳದೆ ಹೆಂಗಸರು ನಿರ್ಣಯ ಕೈಗೊಂಡರೆ

ಆಗುವುದೆ ಹೀಗೆ ಎಂಬಂತೆ ಆಕ್ಷೇಪಣೆಯ ಇಂಗಿತದಿಂದ ಕೂಡಿದೆ. ಕಡ್ಲಿಮಟ್ಟಿ ಕಾಶಿಬಾಯಿಯ ಕಥೆಯಂತೆ ಶಿವಮ್ಮ ಕೂಡ ಗಂಡನಿದ್ದರೆ ಮತ್ತೆ ಮಕ್ಕಳನ್ನು ಪಡೆಯಬಹುದು. ಮಗನಿಗಾಗಿ ಗಂಡನಿಲ್ಲದಿರುವುದು ಸರಿಯಲ್ಲವೆಂಬ ನಿರ್ಣಯಕ್ಕೆ ಬರಲು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಕ್ಕಳಿರುವ ವಿಧವೆ ಮದುವೆಯಾಗಬಾರದು. ಒಂದು ವೇಳೆ ಆದರೆ ಮೊದಲ ಮಗುವನ್ನು ದೂರೀಕರಿಸಬೇಕೆಂಬುದು ವಿಧಿ ಕಾರಣ. ಒಂದನ್ನು ಪಡೆಯಲು ಇನ್ನೊಂದನ್ನು ಕಳೆದುಕೊಳ್ಳಬೇಕು. ಸಮಾಜದಲ್ಲಿ ಇಂದಿಗೂ ವಿಧವಾ ವಿವಾಹಕ್ಕೆ ಮನ್ನಣೆ ಅಷ್ಟಾಗಿ ಇಲ್ಲದಿರುವುದೇ ಕಾಣುತ್ತದೆ. ಶಿವಮ್ಮ ವಿಧವಾ ವಿವಾಹವಾಗಿ ನರಳಿದ ಮಹಿಳೆಯರ ಪ್ರತಿನಿಧಿಯಾಗಿ ಇಲ್ಲಿ ಚಿತ್ರಣಗೊಂಡಿದ್ದಾಳೆ. ವಿಧವೆಯೇ ವಿವಾಹಕ್ಕೆ ಯೋಗ್ಯಳಲ್ಲವೆಂದು ಯೋಚಿಸುವಾಗ ಮಕ್ಕಳಿರುವ ವಿಧವೆಯ ವಿವಾಹ ಅಪರೂಪವೆಂಬುದನ್ನು ಕಥೆ ಚಿತ್ರಿಸುತ್ತದೆ.

**ವಿವಾಹ ಬಾಹಿರ ಸಂಬಂಧ :**

ವಿವಾಹ ಕೇಂದ್ರಿತ ಸಮಸ್ಯೆಗಳಲ್ಲಿ ವಿವಾಹ ಬಾಹಿರ ಸಂಬಂಧವೂ ಸಾಕಷ್ಟು ಚರ್ಚೆಗೊಳಗಾಗಿದೆ. ಇದಕ್ಕೆ ಕಾರಣಗಳು ಹಲವು. ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಂತೂ ಪುರುಷನಿಗೆ ಆಳುವವನಿಗೆ ಅರವತ್ತು ಮಂದಿ ಎಂದು ಹೇಳಿ ಲೈಂಗಿಕ ಮುಕ್ತತೆಯನ್ನು ಘೋಷಿಸಿದೆ. ಮೇಲ್ ಜಾತಿಯ ಮಹಿಳೆಗೆ ಯಾವುದೇ ಕಾರಣಕ್ಕೂ ವಿವಾಹಬಾಹಿರ ಸಂಬಂಧದ ಸಮ್ಮತಿ ಇಲ್ಲ. ಕೆಳಜಾತಿಗಳಲ್ಲಿ ಗಂಡನಿದ್ದ ಗಂಡನಿಲ್ಲದ ಸಂದರ್ಭಗಳಲ್ಲಿಯೂ ಇಂಥ ಸಂಬಂಧಗಳು ಸಹಜವೆಂಬಂತೆ ಕಂಡುಬರುತ್ತದೆ. ಗಂಡನಿದ್ದರೂ ತನ್ನ ಆರ್ಥಿಕ ಸ್ಥಿತಿಯಿಂದಾಗಿಯೊ, ಅಧಿಕಾರ ವರ್ಗದಲ್ಲಿ ತಾನು ಜೀತದಿಂದಿರುವ ಕಾರಣವಾಗಿಯೊ ಇಂಥ ಸಂಬಂಧಗಳನ್ನು ವಿರೋಧಿಸದಿರುವುದು ಕಾಣುತ್ತದೆ. ಗಂಡು ಹೆಣ್ಣಿನ ನಡುವಿನ ವಯಸ್ಸಿನ ಅಂತರ, ಜಮೀನ್ದಾರ ಗೌಡರೊಂದಿಗಿನ ಸಂಬಂಧದ ಪ್ರತಿಷ್ಠೆ, ದುಡಿಯದ ಕೆಳವರ್ಗದ ಗಂಡಸರು ಇವು ಕೂಡ ವಿವಾಹ ಬಾಹಿರ ಸಂಬಂಧಕ್ಕೆ ಕಾರಣವಾಗುವುದನ್ನು ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯ ಪ್ರತಿಪಾದಿಸಿದೆ.

ಅಮರೇಶ ನುಗಡೋಣಿಯವರ 'ಒತ್ತೆ' ಕಥೆಯ ದೇವಕಿ, ಸಂಧ್ಯಾಹೊನಗುಂಟಿಕರ ಅವರ 'ಕಡಲ ಒಡಲು ಬಗೆದಷ್ಟು' ಕಥೆಯ ಅವ್ವ, ಬಿ.ಟಿ.ಲಲಿತಾನಾಯಕರ ತಾಯಿ 'ಸಾಕಿಬಾಯಿ' ಕಥೆಯ ಸಾಕಿಬಾಯಿ, ಶಾಂತರಸರ 'ಕಿಡಿ' ಕಥೆಯ ದೇವಕಿ, ಶ್ರೀಕಾಂತ ಪಾಟೀಲರ 'ಧರ್ಮ-ಬೇಲಿ-ಬದುಕು' ಕಥೆಯ ಮಲ್ಲಮ್ಮ, ಮೊದಲಾದ ಮಹಿಳೆಯರು ವಿವಾಹ ಸಂಸ್ಥೆಯ ಪರಿಪ್ರೇಕ್ಷವನ್ನು ದಾಟಿ ವಿವಾಹ ಸಂಸ್ಥೆಯಲ್ಲಿದ್ದುಕೊಂಡೇ, ವಿವಾಹ ಬಾಹಿರ ಸಂಬಂಧಗಳಿಂದ ತಮಗಾದ ಅನ್ಯಾಯವನ್ನು ಪ್ರತಿರೋಧಿಸುತ್ತಾರೆ.

ಗ್ರಾಮೀಣ ಪ್ರದೇಶಗಳಲ್ಲಿ ಹೆಣ್ಣಿಗೆ ತಿಳುವಳಿಕೆ ಮೂಡುವ ಮೊದಲೇ ವಿವಾಹವಾಗುತ್ತದೆ. ಕೆಳವರ್ಗಗಳಲ್ಲಿ ಇಂದಿಗೂ ಹಾಗೇ ಆಗುತ್ತದೆ. ವಿವಾಹವೆಂದರೇನೆಂದು ತಿಳಿಯುವ ಮೊದಲೇ

ಗಂಡ ಬಿಟ್ಟರೆ ಅಥವಾ ಗಂಡ ಸತ್ತರೆ ಮಹಿಳೆ ದಾಂಪತ್ಯ ವಂಚಿತಳಾಗುತ್ತಾಳೆ. ಕೆಳವರ್ಗಗಳಲ್ಲಿ ಮಹಿಳೆಗೆ ಪುನರ್‌ವಿವಾಹದ ಅವಕಾಶವಿದೆ. ಆದರೆ ಎಲ್ಲಾ ಮಹಿಳೆಯರಿಗೂ ಆಗುತ್ತದೆಂದೇನೂ ಇಲ್ಲ. ಇಂತಹ ಸಂದರ್ಭಗಳಲ್ಲಿ ತನಗಿಷ್ಟವಾದ ಪುರುಷನೊಂದಿಗೆ ಸಂಬಂಧವಿರಿಸಿಕೊಳ್ಳಲಾಗುತ್ತದೆ ಎಂಬುದನ್ನು ಅಮರೇಶ ನುಗಡೋಣಿಯವರ 'ಒತ್ತೆ' ಕಥೆ ನಿರೂಪಿಸುತ್ತದೆ.

ವಿಷಮ ದಾಂಪತ್ಯದ ದಾರುಣ ಚಿತ್ರಣವನ್ನು ಅದು ನೀಡುತ್ತದೆ. ಗಂಡನ ಗೂರಲು ಕಾಯಿಲೆಗೆ ಬೇಸತ್ತೊ ಅಥವಾ ಸ್ವಭಾವತಃ ಹೊಂದಿಕೊಳ್ಳಲಾಗದ ಗುಣದಿಂದಲೊ ರಾಚಪ್ಪನ ಸಂಸಾರ ಗೋಳಿನದಾಗುತ್ತದೆ. ಅಂಥ ಸಂದರ್ಭದಲ್ಲಿ ಅವನು ಆಶ್ರಯಿಸಿದ್ದು ದೇವಕಿಯನ್ನು, ದೇವಕಿ ವಿವಾಹಿತೆ, ಆದರೆ ವಿವಾಹವಾದ ಕೆಲವೇ ದಿನಗಳಲ್ಲಿ ಗಂಡ ಹುಚ್ಚನಾಗಿ ಹೋದುದರಿಂದ ಅವಳು ಗಂಡನೊಂದಿಗೆ ಬಾಳುವ ಪ್ರಮೇಯವೆ ಇಲ್ಲವಾಯ್ತು. ರಾಚಪ್ಪನನ್ನೆ ಗಂಡನೆಂಬಷ್ಟು ಪ್ರೀತಿಯಿಂದ ದೇವಕಿ ನಡೆದುಕೊಳ್ಳುತ್ತಾಳೆ. ತಾನೂ ನೆಮ್ಮದಿ ಕಂಡು ಅವನ ಬದುಕಿಗೂ ನೆಮ್ಮದಿ ತರುತ್ತಾಳೆ. ಯಾವತ್ತೂ ಅವನ ಸಂಸಾರ ಕೆಡಿಸಲು ಯತ್ನಿಸುವುದಿಲ್ಲ. ಆರ್ಥಿಕವಾಗಿ ಅವಲಂಬಿಸುವುದಿಲ್ಲ. ಸ್ವತಃ ರಾಚಪ್ಪ ಹೇಳಿದಾಗಲೂ "ಮೈಯಲ್ಲಿ ಸತುವು ಇರುವವರೆಗೆ ದುಡಿದು ತಿನ್ನುತ್ತೇನೆ"[೩೭] ಎನ್ನುತ್ತಾಳೆ. ರಾಚಪ್ಪನ ಹಿರಿಯ ಮಗ ಹನುಮ್ಯಾ ಏನಾದರೂ ಕಾಳುಕಡಿ ತಂದರೆ "ಮಗ ಬ್ಯಾಡಪ್ಪ, ಆಗಾಗ ನೀವು ಬಂದು ಹೋದ್ರೆ ಸಾಕು. ನಾಕು ಮಂದಿ ಮಕ್ಕಳು ಬಾಳವಿ ದೊಡ್ಡದು ನಿಮಗ ಇರಲಿ, ನಾನೇನು ಒಂಟಿ ಮೂಳ ಮೆತ್ತಗಾದ ಕಾಲಕ್ಕ ನೋಡವಂತಗಿ"[೩೮] ಎನ್ನುತ್ತಿದ್ದಳು.

ಇಲ್ಲಿಯ ವಿವಾಹ ಬಾಹಿರ ಸಂಬಂಧ ಒಂದು ಅನಿವಾರ್ಯ ಅವಲಂಬನೆಯಾಗುತ್ತದೆಯೆ ವಿನಃ ಆರ್ಥಿಕ ಸಾಮಾಜಿಕ ಕಾರಣಗಳಿಗಾಗಿಯಲ್ಲ. ದೇವಕಿಗೆ ಯಾರೋ ಒಂದು ದಿನ ಸುದ್ದಿತಂದರು, ಗಂಡ ಎಲ್ಲೊ ಬಿದ್ದುಸತ್ತು ಹೋದನೆಂದು ಆಕೆ ಮಿಡಕಲಿಲ್ಲ. ತಾಳಿ, ಬಳೆ ತೆಗೆಯಲಿಲ್ಲ. ರಾಚಪ್ಪನನ್ನು ತನ್ನ ಗಂಡನೆಂದೇ ಮನಸ್ಸು ಒಪ್ಪಿಕೊಂಡದ್ದರಿಂದಿರಬೇಕು. ದೇವಕಿ ತನ್ನಿಂದತಾಳಿ ಕಟ್ಟಿಸಿಕೊಳ್ಳುವಂಥ ಹೆಂಡತಿಯಾಗಿ ಯಾಕೆ ಹುಟ್ಟಲಿಲ್ಲ. ಅಥವಾ ತಾನಾದರೂ ಮಾದರವನಾಗಿ ಹುಟ್ಟಿದ್ದರೂ ಆಕೆ ರಂಡೇ ಮುಂಡೆಯಾಗಿದ್ದರೂ, ದೈವದೆದುರಿಗೆ ತಾಳಿಕಟ್ಟಿ ಮನೆಗೆ ಕರೆತರುತ್ತಿದ್ದೆ. ಎನ್ನುವ ರಾಚಪ್ಪನ ಆಲೋಚನೆ ಪ್ರೀತಿಸಿದ ಹೃದಯಗಳು ಕೂಡಿ ಬಾಳದಂತೆ ಮಾಡುವ ಸಾಮಾಜಿಕ ನಿಯಮಗಳ ಕುರಿತದ್ದು. ಅವರಿಬ್ಬರೂ ಮದುವೆಯಾಗಿ ಬಾಳಲು ಜಾತಿ ಅಡ್ಡವಾಗಿದೆ. ಆದರೆ ಈಗಾಗಲೆ ಮದುವೆಯಾಗಿರುವ ನಾಲ್ಕು ಮಕ್ಕಳ ತಂದೆಯಾಗಿರುವ ರಾಚಪ್ಪ ಮತ್ತೆ ಮದುವೆಗೆ ಆಲೋಚಿಸುವುದು ಪುರುಷಾತ್ಮಕ ಚಿಂತನೆಯೆ ಆಗಿದೆ.

ಇಲ್ಲಿಯ ದೇವಕಿ ಯಾವ ಸಾಮಾಜಿಕ ನಿಯಮಗಳ ಗೋಡವೆಗೆ ಹೋಗದೆ ತಾನು ನಂಬಿದ ರೀತಿಯಲ್ಲಿ ಬದುಕುತ್ತಾಳೆ. ತಾಳಿ ಕಟ್ಟಿದ ಮಾತ್ರಕ್ಕೆ ಗಂಡನನ್ನು ಒಪ್ಪದ, ತಾನು ಒಪ್ಪಿದ

ರಾಚಪ್ಪನಿಗಾಗಿ ತಾಳಿಯನ್ನು ಒತ್ತೆ ಇಡುವ ಮಟ್ಟಕ್ಕೆ ಅವಳು ಮುಂದಾಗುತ್ತಾಳೆ. ಹೀಗೆ ಪಿತೃ ಸಂಸ್ಕೃತಿಗೆ ಪ್ರತಿರೋಧ ಒಡ್ಡಿದ ಮಹಿಳೆಯರು ಅತ್ಯಂತ ಆತ್ಮವಿಶ್ವಾಸವುಳ್ಳ ಸ್ವಾಭಿಮಾನಿ, ಸ್ವಾವಲಂಬಿ ದಿಟ್ಟೆಯರಾಗಿದ್ದಾರೆ. ತಮ್ಮ ಮಿತಿಯೊಳಗೆ ತಮ್ಮ ಬದುಕಿನ ರೀತಿಯಲ್ಲಿ ಪುರುಷ ಸೃಷ್ಟಿಯ ಮೌಲ್ಯಗಳನ್ನು ಮೀರುತ್ತಾರೆ.

ಕಥೆಗಳಲ್ಲಿ ಗಮನಿಸಿದಂತೆ ವಿವಾಹ ಬಾಹಿರ ಸಂಬಂಧ ಗಂಡಿಗೆ ಪ್ರತಿಷ್ಠೆಯದಾದರೆ, ಹೆಣ್ಣಿಗೆ ಕಳಂಕದ್ದಾಗುತ್ತದೆ. ಇಲಿಯ ಕಥೆಗಳಲ್ಲಿ ವ್ಯಕ್ತವಾದಂತೆ ವಿವಾಹಬಾಹಿರ ಸಂಬಂಧ ಗಂಡಿನ ಲೋಲುಪತೆಗೆ ಏರ್ಪಟ್ಟರೆ, ಹೆಣ್ಣಿನ ಸಂದರ್ಭದಲ್ಲಿ ಅಸಮ ದಾಂಪತ್ಯದಿಂದ, ರೋಗಿಷ್ಠ ಗಂಡನಿಂದ ಇಲ್ಲವೆ ಮಕ್ಕಳಾಗದ ಕಾರಣಕ್ಕಾಗಿ ಏರ್ಪಟ್ಟಿದ್ದು ತಿಳಿದುಬರುತ್ತದೆ. ಮಹಿಳೆ ಗಂಡನ ವಿವಾಹ ಬಾಹಿರ ಸಂಬಂಧವನ್ನು ತಿಳಿದೂ ಅವನೊಂದಿಗೆ ಬದುಕಬೇಕಾದ ಅನಿವಾರ್ಯತೆಯನ್ನು ಸಮಾಜ ಅವಳಿಂದ ನಿರೀಕ್ಷಿಸಿದರೆ, ಹೆಣ್ಣಿನ ವಿವಾಹಬಾಹಿರ ಸಂಬಂಧ ಅವಳನ್ನು ಮನೆಯಿಂದ ಹೊರದೂಡುವಂಥದಾಗುತ್ತದೆ. ಎರಡೂ ಸಂದರ್ಭಗಳಲ್ಲಿ ನಿರ್ಣಯ ಪುರುಷರದಾಗುವುದರಿಂದ ಸಹಜವಾಗಿ ಅದು ಪಕ್ಷಪಾತ ನೀತಿಯನ್ನು ಅನುಸರಿಸುತ್ತದೆ.

ವಿವಾಹ ವ್ಯವಸ್ಥೆ ಮಹಿಳೆಯ ಮೇಲೆ ನಿರ್ಬಂಧಗಳನ್ನು ಹೇರುತ್ತಾ ಉಸಿರಾಡಲು ಕೂಡಾ ಅನುಮತಿ ಕೇಳುವ ಸ್ಥಿತಿಗೆ ತಂದು ನಿಲ್ಲಿಸಿದೆ. ಉಸಿರೆತ್ತದಂತೆ ದನಿಯನ್ನು ಅದುಮಿದೆ. ವಿವಾಹ ಮತ್ತು ಕುಟುಂಬಗಳೇ ಮಹಿಳೆಯ ಅಧೀನ ಬದುಕಿಗೆ ಮತ್ತು ಅವಳ ಎಲ್ಲಾ ಸಮಸ್ಯೆಗಳಿಗೆ ಕಾರಣವೆಂಬುದನ್ನು ಸ್ತ್ರೀವಾದಿ ಚಿಂತನೆ ಸರಿಯಾಗಿಯೇ ಗ್ರಹಿಸಿದೆ. ಆಸ್ತಿ, ಅಧಿಕಾರ, ಅಂತಸ್ತು ಯಾವುದೂ ಇಲ್ಲದ ಕೇವಲ ಪುರುಷನೆಂಬ ಕಾರಣಕ್ಕೆ ಮಹಿಳಾ ಬದುಕಿಗೆ ಯಜಮಾನನಾಗುವ ಪುರುಷ ಪ್ರಧಾನ ವ್ಯವಸ್ಥೆಯ ಪ್ರಾಬಲ್ಯದ ಪ್ರತೀಕವಾಗಿದ್ದಾನೆ. ಹೀಗೆ ಮಹಿಳೆಯರನ್ನು ಅಸಹಾಯ ಮತ್ತು ಅವಲಂಬಿತರನ್ನಾಗಿ ಮಾಡುವುದರ ಮೂಲಕ ಪುರುಷ ಪ್ರಧಾನ ವ್ಯವಸ್ಥೆ ಸ್ಥಿರೀಕರಣಗೊಳ್ಳುತ್ತದೆ.

**೫.೨ ಮಹಿಳಾ ಶೋಷಣೆಯ ಚಿತ್ರಣ:**

ಪುರುಷ ಪ್ರಧಾನವಾದ ನಮ್ಮ ಸಮಾಜದಲ್ಲಿ ಮಹಿಳೆಯರು ಯಾವತ್ತು ನಾಲ್ಕು ಗೋಡೆಗಳ ನಡುವೆ ಬಾಳಿದವರು. ಗಂಡಸರು ಮಾಡುವ ಪ್ರತಿಯೊಂದು ಅನ್ಯಾಯ, ದಬ್ಬಾಳಿಕೆಗಳಿಗೆ ಚಕಾರ ಎತ್ತದೆ ಗುಲಾಮಳಂತೆ ಜೀವನ ಸವೆಸಿದ ಸ್ತ್ರೀಯರು ಜೀವಂತ ಶವಗಳಂತಾಗಿದ್ದಾರೆ. ತಾನು ಮಾಡುವುದೆ ನ್ಯಾಯ, ತಾನು ಹೇಳಿದಂತೆ ಕೇಳುವುದೊಂದೆ ಸ್ತ್ರೀಯರ ಕೆಲಸ ಎಂದು ಭಾವಿಸಿದ ಭಾರತೀಯ ಪುರುಷ ಪ್ರಧಾನ ಸಂಪ್ರದಾಯ, ಮೇಲಿಂದ ಮೇಲೆ ಕಿರುಕುಳ ಕೊಡುತ್ತಲೇ ಬಂದಿದೆ.

ಗಂಡಸಿನ ಕ್ರೌರ್ಯಕ್ಕೆ ಸ್ತ್ರೀ ಸಂತತಿಯೇ ನಲುಗಿ ಹೋಗಿದೆ. ಅನ್ಯಾಯ ಅತ್ಯಾಚಾರಗಳು ಅಧಿಕವಾದಂತೆಲ್ಲ ಸ್ತ್ರೀಯರು ಅನಿವಾರ್ಯವಾಗಿ ಪುರುಷರನ್ನು ಪ್ರತಿಭಟಿಸಬೇಕಾದ ಅಗತ್ಯ ಕಂಡುಬರುತ್ತದೆ. ಸಮಾನ ಬದುಕಿಗಾಗಿ, ಸ್ವತಂತ್ರ ಬದುಕಿಗಾಗಿ, ಮಹಿಳೆಯಿಂದ ಹೋರಾಟ ಆಗಬೇಕಿದೆ. ಏಕೆಂದರೆ ಅವಕಾಶ ಕೊಡದ ವ್ಯವಸ್ಥೆಯಲ್ಲಿ ಕಸಿದುಕೊಳ್ಳುವ ಮಾರ್ಗವೆ ಸರಿ ಎನಿಸುತ್ತದೆ. ಹಿಂದಿನಿಂದ ಇಂದಿನವರೆ ಸ್ತ್ರೀ ಪುರುಷ ಸಮಾಜದಿಂದ ಹಲವಾರು ಕಷ್ಟಗಳನ್ನು ಅನುಭವಿಸಿದ್ದಾಳೆ. ಈ ನಾಡಿನ ಪುರುಷರಿಂದಷ್ಟೆ ಅಲ್ಲದೆ ಪರಕೀಯ ಪುರುಷರಿಂದಲೂ ನಾಡಿನ ಸ್ತ್ರೀ ತೊಂದರೆಗೊಳಗಾಗಿದ್ದಾಳೆ. ಇವೆಲ್ಲವುಗಳ ಅರಿವಿರುವ ವಿಚಾರವಾದಿಗಳು ಸ್ತ್ರೀಯರ ಬದುಕಿನ ದುರಂತವನ್ನು ಬರಹದಲ್ಲಿ ಹಿಡಿದಿಡುವ ಅಮೋಘ ಸಾಹಸ ಮಾಡಿದ್ದಾರೆ. ಆಧುನಿಕ ಸಾಹಿತ್ಯದ ಪ್ರಮುಖ ಮತ್ತು ಜನಪ್ರಿಯವಾದ ಕಥಾ ಸಾಹಿತ್ಯದಲ್ಲಿಯೂ ಸ್ತ್ರೀಯರ ಬದುಕಿನ ನಾನಾ ಮುಖಗಳು ಅಭಿವ್ಯಕ್ತಗೊಂಡಿವೆ. ಇಲ್ಲಿ ದಲಿತ, ಹಿಂದುಳಿದ, ಅಲ್ಪ ಸಂಖ್ಯಾತ, ಬಹುಸಂಖ್ಯಾತ, ಅಸಹಾಯಕ, ನಿರ್ಗತಿಕ ಮಹಿಳೆಯರು ಶೋಷಣೆಗೊಳಗಾದ ಪರಿ ಪರಿಣಾಮಕಾರಿಯಾಗಿ ಚಿತ್ರಿತಗೊಂಡಿದೆ. ಸಮಾಜದ ವ್ಯವಸ್ಥೆಯ ಉಚ್ಚ ಸ್ತರದಲ್ಲಿರುವ ಗೌಡ, ಕುಲಕರ್ಣಿ, ಸಾಹುಕಾರರು ಮಾಡುವ ದುಷ್ಕೃತ್ಯಗಳನ್ನು ಕಥೆಗಾರರು ಅತ್ಯಂತ ವಾಸ್ತವವಾಗಿ ವಿವರಿಸಿದ್ದಾರೆ.

ಹೈದ್ರಾಬಾದ್ ಕರ್ನಾಟಕದ ಕಥಾ ಸಾಹಿತ್ಯವು ವಿಪುಲವಾಗಿ ಬೆಳೆದಿದೆ. ಇಲ್ಲಿಯ ಕಥೆಗಾರರು ಬದುಕಿನ ಸಮಸ್ತ ಅನುಭವಗಳನ್ನು ಅವಲೋಕಿಸಿದ್ದಾರೆ. ಅಂಥವರಲ್ಲಿ ಚೆನ್ನಣ್ಣ ವಾಲೀಕಾರ, ಗೀತಾನಾಗಭೂಷಣ, ಸರಿತಾ ಕುಸುಮಾಕರ ದೇಸಾಯಿ, ಚಿತ್ರಶೇಖರ ಕಂಠಿ, ರಾಜಶೇಖರ ಹತಗುಂದಿ, ಸಿದ್ಧರಾಮ ಹೊನ್ಕಲ್, ಸೂಗಯ್ಯ ಹಿರೇಮಠ, ಸಗರ ಕೃಷ್ಣಾಚಾರ್ಯ, ಶಿವರಾಜ ಪಾಟೀಲ, ಭಾಲಚಂದ್ರ ಜಯಶೆಟ್ಟಿ, ಶ್ರೀಕಾಂತ ಪಾಟೀಲ, ಶಿವಕುಮಾರ ನಾಗವಾರ, ಅಮರೇಶ ನುಗಡೋಣಿ, ದೇಶಪಾಂಡೆ, ಬಿ.ಟಿ, ಲಲಿತಾ ನಾಯಕ ಮುಂತಾದವರು.

ಅತ್ಯಾಚಾರ ಮಾಡಲು ಬಂದ ನರರಾಕ್ಷಸರೆಂದೇ ಹೆಸರು ವಾಸಿಯಾಗಿರುವ ಶುಂಭ-ನಿಶುಂಭರನ್ನು ಧೈರ್ಯದಿಂದ ಸಾಯಿಸಿದ ಧೀರ ಮಹಿಳೆಯ ಚಿತ್ರಣ 'ಶುಂಭ-ನಿಶುಂಭ ಮತ್ತು ಜಕ್ಕವ್ವ' ಕಥೆಯಲ್ಲಿ ಚೆನ್ನಣ್ಣ ವಾಲೀಕಾರರು ಪರಿಣಾಮಕಾರಿಯಾಗಿ ಹಿಡಿದಿಟ್ಟಿದ್ದಾರೆ. ಊರಿನ ಪ್ರಮುಖರಾದ ಗೌಡ, ಕುಲಕರ್ಣಿಯರು ಕೆಳವರ್ಗದ ಅಸಹಾಯಕ ಮಹಿಳೆಯರ ಮೇಲೆ ನಾನಾ ರೀತಿಯಲ್ಲಿ ನಡೆಸುವ ದೌರ್ಜನ್ಯ ಅತ್ಯಾಚಾರ, ಶೋಷಣೆಗಳನ್ನು ಪ್ರತಿನಿಧಿಸುವ ಕಥೆ 'ಶುಂಭ ನಿಶುಂಭ ಮತ್ತು ಜಕ್ಕವ್ವ" ಜಕ್ಕವಳನ್ನು ಮೋಹಿಸಿದ ಗೌಡ ಅವಳ ಗಂಡನನ್ನು ಕೊಂದರೂ ಅವನ ಆಸೆ ಈಡೇರುವುದಿಲ್ಲ. ಆಗ ಅವಳಿಗೆ ಆಶ್ರಯನೀಡಿದ ಅವಳ ತಮ್ಮನನ್ನೂ ಕೊಲೆ ಮಾಡುತ್ತಾನೆ, ಇದರಿಂದ ಕೆರಳಿದ ಜಕ್ಕವ್ವ ಕುಡುಗೋಲಿನಿಂದ ಈ ನರ ರಾಕ್ಷಸರ ಕುತ್ತಿಗೆ ಕಡಿದು ತನ್ನ ಮೇಲಷ್ಟೇ

ಅಲ್ಲ ಇಡೀ ಮಹಿಳಾವರ್ಗದ ಮೇಲಾಗುವ ಶೋಷಣೆಗಳನ್ನು ಶಮನ ಮಾಡಿಕೊಂಡ ಧೀರ ಮಹಿಳೆಯಾಗಿ ಕಂಡು ಬರುತ್ತಾಳೆ,

ಮೇಲ್ವರ್ಗದ ಜನರ ಶೋಷಣೆ, ಹಿಂಸೆಯಿಂದ ಮನನೊಂದ ಕೆಳವರ್ಗದ 'ಜಕ್ಕವ್ವ' ತನ್ನ ಸಹನೆಯ ಕಟ್ಟೆಯೊಡೆದು ಗೌಡ ಕುಲಕರ್ಣಿಯರ ಗುತ್ತಿಗೆಯನ್ನು ಕುಡುಗೋಲಿನಿಂದ ಕತ್ತರಿಸುವುದರ ಮೂಲಕ ತನ್ನ ಕೋಪವನ್ನು ಶಮನ ಮಾಡಿಕೊಂಡಿರುವುದು ಕಂಡುಬರುತ್ತದೆ.

ವಾಲೀಕಾರರ 'ಕೆಸರಿನಲ್ಲಿ ಕೆಸರಾಗಿ ಹೋದ ಕಮಲ' ಕಥೆಯಲ್ಲಿ ಸ್ತ್ರೀ ತನ್ನ ಜೀವನದಲ್ಲಿ ಒಂದು ಸಲ ಜಾರಿದಳೆಂದು ಮತ್ತೆ ಅವಳನ್ನು ಸಮಾಜ ಎಂದೂ ಮೇಲೆತ್ತುವುದಿಲ್ಲ. ಮೇಲ್ವರ್ಗದವರ ಕಾಮಪಿಪಾಸೆಗೆ ಬಲಿಯಾದ ಸ್ತ್ರೀಯರು ಅನಿವಾರ್ಯವಾಗಿ ತಮ್ಮ ಮಾನ ಕಳೆದುಕೊಂಡು ಬದುಕಬೇಕಾಗುತ್ತದೆ ಎಂಬ ವಸ್ತು ಈ ಕಥೆಯಲ್ಲಿ ನೋಡಬಹುದು, ವೆಂಕಟ ಶೆಟ್ಟಿಯಂತಹ ನೀಚ ವ್ಯಕ್ತಿಯ ಬಲೆಗೆ ಸಿಕ್ಕುಬಿದ್ದು ಸೂಳೆತನದ ಪಟ್ಟ ಕಟ್ಟಿಕೊಂಡು ಬಾಳುವ ಮಹಿಳೆಯನ್ನು ಒಬ್ಬ ಆದರ್ಶ ಶಿಕ್ಷಕ ಬಾಳುಕೊಡಲು ಮುಂದೆ ಬರುತ್ತಾನೆ. ಆದರೂ ಅದು ಅವನಿಂದ ಸಾಧ್ಯವಾಗುವುದಿಲ್ಲ. ವೆಂಕಟಶೆಟ್ಟಿಯಂತಹವರು ಎಲ್ಲಿಯವರೆಗೆ ಇರುತ್ತಾರೋ ಅಲ್ಲಿಯವರೆಗೆ ಇಂಥ ಅಮಾಯಕ ಹೆಣ್ಣು ಮಕ್ಕಳ ಬಾಳು ಬೆಳಗುವುದಿಲ್ಲ ಎನ್ನುವ ವಾಸ್ತವವನ್ನು ಈ ಕಥೆ ಕಟ್ಟಿಕೊಡುತ್ತದೆ.

ವೇಷಧಾರಿಗಳೇ ಹೆಚ್ಚಾಗಿರುವ ಇಂದಿನ ಸಮಾಜದಲ್ಲಿ ಮೇಲ್ನೋಟಕ್ಕೆ ತಾನೊಬ್ಬ ಆದರ್ಶವ್ಯಕ್ತಿ ಸಮಾಜ ಸುಧಾರಕರು ಎನ್ನುವ ಕಪಟತನದ ಮುಖವಾಡ ಧರಿಸಿ ಬಡವರನ್ನು, ನಿಸ್ಸಹಾಯಕರನ್ನು ವಂಚಿಸುವ ವ್ಯಕ್ತಿಗಳು ನಮ್ಮ ಸುತ್ತಲೂ ಇದ್ದಾರೆ ಎನ್ನುವ ವಾಸ್ತವವನ್ನು ಸಗರ ಕೃಷ್ಣಾಚಾರಯ್ಯ ತಮ್ಮ 'ಆದರ್ಶ' ಕಥೆಯ ಮೂಲಕ ಸ್ಪಷ್ಟಪಡಿಸಿದ್ದಾರೆ. ಸಮಾಜಘಾತುಕರ ದುಷ್ಕೃತ್ಯಕ್ಕೊಳಗಾಗಿ ನರಕಯಾತನೆಯನ್ನು ಅನುಭವಿಸುತ್ತಿರುವ ಹೈದರಾಬಾದ್ ಕರ್ನಾಟಕದ ಮುಸ್ಲಿಂ ತರುಣಿಯೊಬ್ಬಳು ಸಂದರ್ಶಕನೊಬ್ಬನಿಗೆ ತನ್ನ ಜೀವನ ವೃತ್ತಾಂತವನ್ನು ವರದಿ ಮಾಡುವ ರೀತಿಯಲ್ಲಿ ಪ್ರಸ್ತುತ ಕಥೆ ನಿರೂಪಿತವಾಗಿದೆ. ಕಡುಗಲಿ ಎಂದೇ ಹೆಸರುವಾಸಿಯಾದ ಕಾಮಪೂರದ ಆದರ್ಶ ವ್ಯಕ್ತಿ ಮೋಹನರಾಯನು ಆಂತರಿಕವಾಗಿ ಎಂಥ ಅಮಾನವೀಯ ಕಾರ್ಯವೆಸಗುತ್ತಿದ್ದಾನೆಂಬುದು ತಿಳಿದು ಬರುತ್ತದೆ. ಗುಂಡಾಗಳನ್ನು ಸಾಕೆ ತನಗೆ ಬೇಕಾದ ಹೆಂಗಸರನ್ನು ಎತ್ತಿಕೊಂಡು ತರುವುದು ಬಡವರ, ದೀನದುರ್ಬಲರ ಮೇಲೆ ಅತ್ಯಾಚಾರ ಎಸಗುವಂಥ ಕದೀಮ ಮೋಹನರಾಯ ಬಾಹ್ಯವಾಗಿ ಪೊಳ್ಳು ಆದರ್ಶತನದಿಂದ ಮೆರೆಯುವ ವೇಷಾಧಾರಿಯಾಗಿದ್ದಾನೆ. ಇಂಥ ಹುಸಿ ಆದರ್ಶವಾದಿಗಳ ಬಲೆಗೆ ಬಿದ್ದು ಹಾಳಾದ ಅಸಹಾಯಕ ದುರ್ಬಲ ಸ್ತ್ರೀಯರ ದುರಂತ ಬದುಕನ್ನು ಈ ಕಥೆ ಹೇಳುತ್ತದೆ.

ಯುವ ಶಕ್ತಿಯನ್ನು ಚೆನ್ನಾಗಿ ಕಟೆದು ದೇಶದ ಭವಿಷ್ಯವನ್ನು ರೂಪಿಸುವಂತಹ ಪವಿತ್ರ ಕಾರ್ಯ ಶಿಕ್ಷಕನದು. ಆದರೆ ದುರಂತವೇನೆಂದರೆ, ತನ್ನ ಕರ್ತವ್ಯವನ್ನು ಮರೆತು ಇಂದಿನ ಶಿಕ್ಷಕರು ವಿದ್ಯಾರ್ಥಿನಿಯರ ಮೇಲೆ ಅತ್ಯಾಚಾರ ಬಲತ್ಕಾರವನ್ನು ಎಸಗುತ್ತಿದ್ದಾರೆ. ಎನ್ನುವ ಸತ್ಯ ಸಂಗತಿಯನ್ನು ಸ್ವತಃ ಶಿಕ್ಷಕರಾದ ಶಿವರಾಜ ಪಾಟೀಲರು 'ಶಿಕ್ಷಕನಿಗೆ ಶಿಕ್ಷೆ' ಎಂಬ ಕಥೆಯಲ್ಲಿ ಬಿಂಬಿಸಿದ್ದಾರೆ. ವಿದ್ಯಾರ್ಥಿಗಳನ್ನು ಬದುಕಿನ ಸನ್ಮಾರ್ಗದತ್ತ ಕೊಂಡೊಯ್ಯುವ ಶಿಕ್ಷಕನೇ ಇಂಥ ನೀಚ ಕೆಲಸಕ್ಕೆ ಕೈಹಾಕಿದರೆ ಸಮಾಜ ಸುಧಾರಣೆಯಾಗುವುದು ಕನಸಿನ ಮಾತೇ ಸರಿ.

ಗೀತಾ ನಾಗಭೂಷಣರ 'ಬೇಲಿ' ಕಥೆಯಲ್ಲಿ ಬರುವ ಗುರುಲಿಂಗಪ್ಪ ಗೌಡ ಆದರ್ಶ ವ್ಯಕ್ತಿತ್ವವುಳ್ಳವನು. ಆದರೆ ವಿಧವೆಯಾದ ತನ್ನ ಸೊಸೆ ಸೀನಿಂಗಿಯ ಬೇಲಿರೂಪದಲ್ಲಿ ಅಂದರೆ ರಕ್ಷಣೆ ಮತ್ತು ಕಾವಲಿನಂತಿದ್ದ ಗುರುಲಿಂಗಪ್ಪಗೌಡ ತಾನು ಹಾಕಿದ ಬೇಲಿಯನ್ನು ತನ್ನ ಸೊಸೆಯನ್ನು ಭೋಗಿಸುವ ಮೂಲಕ ಮುರಿದು ಹಾಕುವ ಅಪರಾಧ ಎಸಗುತ್ತಾನೆ. ತನ್ನ ಮಾವನ ಕಾಮದಾಹಕ್ಕೆ ತುತ್ತಾದ ಸೀನಿಂಗಿ ನಸುಕಿನಲ್ಲಿಯೇ ಬಾವಿಗೆ ಬಿದ್ದು ಪ್ರಾಣ ಬಿಡುತ್ತಾಳೆ. ಇದು ಕಥೆಯ ಸಂಕ್ಷಿಪ್ತ ಪರಿಚಯವಾಗಿದೆ. "ನಿಮ್ ಗೋಡ ಭಾಳ ಗಂಭೀರ ಗಣಪ ಹನಾನೋ ಹೊನ್ನ. ನಾಕು ನಾಕು ಹೆಣ್ಣಗೊಳಗಿ ಒಂದೇ ಸರ್ತಿಗೆ ಹಿಂಡಿ ಹಿಪ್ಪಿ ಮಾಡಾ ತಾಕಾತ್ ಅದಾ, ಅವನ ಬಲ್ಲಿ ಅದರ ಅವನ್ವನ ಯಾಕೋ ಹೆಂಗಸರಲಿಂದ ಹರದಾರಿ ದೂರ ಇರ್ತಾನಂವಾ"[೩೯] ಎನ್ನುವ ಮಾತುಗಳು ಗೌಡನ ಆದರ್ಶ ವ್ಯಕ್ತಿತ್ವವನ್ನು ಸೂಚಿಸುತ್ತದೆ ಗುರುಲಿಂಗಪ್ಪಗೌಡ ಹಾಕಿದ ಬೇಲಿ ಕೇವಲ ಹೊಲಕ್ಕಷ್ಟೇ ಕಾವಲಿರದೆ ತನ್ನ ವಿಧವೆ ಸೊಸೆಯ ಯೌವ್ವನದ ರಕ್ಷಣೆಯನ್ನು ಮಾಡುತ್ತದೆ. ಒಮ್ಮೆ ಬೆದಿಗೆ ಬಂದ ಹಸುವಿನ ಬಗ್ಗೆ ಹೆಚ್ಚಿನ ಕಾಳಜಿ ವಹಿಸಿ "ನಂಬಲ್ಲೆ ಬೀಜದ ಹೋರಿ ಅದಾವಲ್ಲ ಮಾವಯ್ಯ ಪಾಪ ಅದಕೆ ಈಗೆ ಆಸಿ ಆಗ್ತಾದೇನೋ ಒಂದೇ ಸವನೆ ಚಿರಲ್ಲಕಕೆತ್ತದೆ".[೪೦] ಎನ್ನುವ ಅವಳಾಡಿದ ಸಹಜ ಮಾತುಗಳು ಗೌಡನ ಅಪಾರ್ಥ ತಿಳುವಳಿಕೆಗೆ ಕಾರಣವಾಗುತ್ತದೆ. ತನ್ನನ್ನೆ ಹೋಲಿಸಿಕೊಂಡು ಈ ರೀತಿ ಹೇಳುತ್ತಿರಬಹುದೆಂದು ಭಾವಿಸಿ ಅವಳೊಂದಿಗೆ ಆ ರಾತ್ರಿ ಸಂಬಂಧ ಹೊಂದಿದ ಕಾರಣ ಸೀನಿಂಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ತನ್ನ ಬೇಲಿಯೇ ತನಗೆ ಮುಳುವಾದರೆ ಬೆಳೆಯಾದರೂ ಹೇಗೆ ಬೆಳೆದೀತು? ತನ್ನ ಮಾವನನ್ನೆ ಪ್ರಾಣವೆಂದು ಅರಿತಿದ್ದ ಸೀನಿಂಗಿ ತನ್ನ ಮಾವನ ವಿರುದ್ಧ ಮುಖಾಮುಖಿಯಾಗಿ ಪ್ರತಿಭಟಿಸದೆ ಬಾವಿಗೆ ಹಾರಿ ಆತ್ಮಹತ್ಯೆ ಮಾಡಿಕೊಳ್ಳುವ ಮೂಲಕ ಪ್ರತಿಭಟಿಸಿ ತೋರುತ್ತಾಳೆ.

ಇಲ್ಲಿ ಮಾವನಿಂದ ಮಾನ ಕಳೆದುಕೊಂಡ ಸೀನಿಂಗಿ ಸಾಯುವ ಮೂಲಕ ಪ್ರತಿಭಟಿಸಿದ್ದು ಆಕೆಯ ಒಂದು ದೊಡ್ಡ ತಪ್ಪೆಂದು ಹೇಳದೇ ಗತಿಯಿಲ್ಲ. ಏಕೆಂದರೆ ಸಾವು ಒಂದೇ ಸಮಸ್ಯೆಗೆ

ಪರಿಹಾರವಲ್ಲ.(ಉತ್ತರವಲ್ಲ) ಆಕೆಯ ಸಮಸ್ಯೆಯ ಪರಿಹಾರಕ್ಕೆ ಅಥವಾ ಪ್ರತಿಕಾರಕ್ಕೆ ಪ್ರತಿಭಟನೆಗೆ ಹಲವು ಸುರಕ್ಷಿತ ಮಾರ್ಗಗಳಿವೆ. ಆದರೆ ಇಲ್ಲಿ ಆಕೆ ಆತ್ಮಹತ್ಯೆಯನ್ನೇ ತನ್ನ ಮಾವನ ವಿರುದ್ಧದ ಪ್ರತಿಭಟನೆಯಾಗಿ ಆರಿಸಿಕೊಳ್ಳುವದೊಂದು ದುರಂತವೆನಿಸುತ್ತಿದೆ. ಹೀಗೆ ಕಥೆಗಾರ್ತಿ ಗೀತಾ ನಾಗಭೂಷಣರು ಪರಿಣಾಮಕಾರಿಯಾಗಿ ಸ್ತ್ರೀಯೋರ್ವಳ ದುರಂತವನ್ನು ಬೇಲಿ ಕಥೆಯಲ್ಲಿ ಚಿತ್ರಿಸಿದ್ದಾರೆ. ಗೀತಾ ನಾಗಭೂಷಣರ 'ಸತ್ತ ಹೆಣ್ಣಿನ ಸುತ್ತ' ಕಥೆಯೂ ಕೂಡ ಸ್ತ್ರೀಯ ಶೋಷಣೆಯ ಬೀಜವನ್ನೇ ಒಳಗೊಂಡಿದೆ. 'ಸತ್ತ ಹೆಣ್ಣಿನ ಸುತ್ತ' ದಲ್ಲಿ ವ್ಯಕ್ತಿ ಜೀವಂತ ಇರುವತನಕ ತಾನು ತನ್ನದು ಎಂದು ಬಡಿದಾಡಿ ಒಳ್ಳೆಯವ ಕೆಟ್ಟವ ಎನ್ನುವಂತಹ ಎರಡು ಶಬ್ದಗಳಿಗೆ ಆಹಾರವಾಗುತ್ತಾನೆ. ಅದರಂತೆ ಇಲ್ಲಿ ಉದ್ಯೋಗಸ್ಥೆ ಮಹಿಳೆ ಲಕ್ಷ್ಮೀಯನ್ನು ಅವಳ ಗಂಡ ಅತ್ತೆಯಂದಿರೆಲ್ಲ ಸೇರಿ ಕೊಲೆ ಮಾಡಿ ಆತ್ಮಹತ್ಯೆ ಎಂದು ಪ್ರಚಾರ ಮಾಡುತ್ತಾರೆ. ಅವಳ ಉದ್ಯೋಗದ ಮೇಲೆ ಧನ ಸಹಾಯ ಪಡೆದು ಮನೆ ಕಟ್ಟಿಸಿಕೊಂಡಾದ ನಂತರ ಅವಳ ಕೊಲೆ ಮಾಡಿರುವುದು, ಇವಳ ಗಂಡ ಮತ್ತು ಅತ್ತೆಯವರು ಮಾನವೀಯ ಸಂಬಂಧಗಳನ್ನು ಮುರಿದು ಧನ ಪಿಶಾಚಿಯಾಗಿರುವುದನ್ನು ಗೀತಾ ನಾಗಭೂಷಣರು ಈ ಕಥೆಯಲ್ಲಿ ಚಿತ್ರಿಸಿದ್ದಾರೆ. ಹೆಣ್ಣಿಗೆ ಹೆಣ್ಣು ಶತ್ರು ಎಂಬ ಮಾತಿಗೆ ಈ ಕಥೆ ಉತ್ತಮ ನಿದರ್ಶನವನ್ನೊದಗಿಸುತ್ತದೆ. ಹಣದಾಸೆಗಾಗಿ ತನ್ನ ಮಗನ ಬಾಳನ್ನು ಸಹ ಲೆಕ್ಕಕ್ಕೆ ತೆಗೆದುಕೊಳ್ಳದೇ ಸೊಸೆಯನ್ನು ಕೊಲೆ ಮಾಡಿರುವುದು ಓದುಗರನ್ನು ಬೆಚ್ಚಿ ಬೀಳಿಸುತ್ತದೆ.

ಸಿದ್ಧರಾಮ ಹೊನ್ಕಲ್‌ರು ಈ ಭಾಗದ ಪ್ರತಿಭಾವಂತ ಕಥೆಗಾರರಾಗಿದ್ದಾರೆ. ಅವರು ತಮ್ಮ ಕಥೆಗಳಿಗಾಗಿ ಆಯ್ದುಕೊಳ್ಳುವ ವಸ್ತುಗಳು ಇತರರಿಗಿಂತ ಭಿನ್ನವೆನಿಸುತ್ತವೆ. ಇವರ 'ಸ್ಯಾಡಿಸ್ಟ್' ಕಥೆ ಯುವತಿಯೋರ್ವಳೂ ತನ್ನ ಗಂಡ ನೀಡುವ ಕ್ರೂರ ಹಿಂಸೆಯನ್ನು ಮೂಕ ಹಸುವಿನಂತೆ ಅನುಭವಿಸುವ ಹೃದಯ ವಿದ್ರಾವಕ ಚಿತ್ರಣವನ್ನೂಳಗೊಂಡಿದೆ. ಈ ಕಥೆಯ ಮೂಲಕ ಕಥೆಗಾರರು ಯುವತಿಯೋರ್ವಳ ಸಾಹಸಮಯ ಬದುಕಿನೆಡೆಗೆ ಗುರಿ ಇಟ್ಟಿದ್ದಾರೆ. ಆಕೆಯ ತಾಳ್ಮೆಗೆ ವಿರುದ್ಧವಾದ ಕ್ರೂರ ಹಿಂಸೆಯನ್ನು ಕಣ್ಣಿಗೆ ಕಟ್ಟುವಷ್ಟು ವಾಸ್ತವವಾಗಿ ಚಿತ್ರಿಸಿದ್ದಾರೆ.

ಸುಮಿತ್ರಾ, ತನ್ನ ಗಂಡನ ಉದ್ಯೋಗ ದೊರಕದಕ್ಕೆ ತನ್ನ ಮೇಲೆ ಕೋಪಿಸಿಕೊಂಡು ನೀಡುತ್ತಿರಬೇಕೆಂದುಕೊಳ್ಳುತ್ತಾಳೆ, ಆಕೆಯ ಮನದಲ್ಲಿ ಗಂಡ ಕಾಲ ಕಳೆದಂತೆ ಸುಧಾರಿಸಬಹುದು ತನಗೆ ಹಿಂಸೆ ಕೊಡುವುದು ನಿಲ್ಲಿಸಬಹುದು ಎಂದು ದೃಢವಿಶ್ವಾಸ ಹೊಂದಿರುತ್ತಾಳೆ, ಆದರೆ ಅಮರೇಶನ ಹಿಂಸೆ ದಿನ ದಿನಕ್ಕೆ ಮುಗಿಲುಮುಟ್ಟುತ್ತಲೇ ಹೋಗುತ್ತದೆ ಇದ್ದರಿಂದ ಜಿಗುಪ್ಸೆಗೊಂಡ ಸುಮಿತ್ರಾ ತನ್ನ ಗಂಡನನ್ನು ಬಿಟ್ಟು ತನ್ನ ತವರಿಗೆ ಹೋಗಲು ನಿಶ್ಚಯಿಸಿ ತಂದೆಗೆ ತನ್ನನ್ನು ಊರಿಗೆ ಕರೆದುಕೊಂಡು ಹೋಗಬೇಕೆಂದು ಪತ್ರ ಬರೆಯುತ್ತಾಳೆ.

ಇಲ್ಲಿ ತನ್ನ ಗಂಡ ಅಮರೇಶನ ಮೇಲೆ ಅತೀವ ನಂಬಿಕೆ, ವಿಶ್ವಾಸ, ಪ್ರೇಮ, ಅನುಕಂಪ ಸುಮಿತ್ರಾ ಇಟ್ಟಿರುತ್ತಾಳೆ ಆದರೆ ಇದಕ್ಕೆ ಪ್ರತಿಯಾಗಿ ಅಮರೇಶ ಆಕೆಯ ಮೇಲೆ ಸಿಟ್ಟು, ಮುನಿಸು, ಕೋಪತಾಳುವುದು ಓದುಗರಿಗೆ ವಿಷಾದವನ್ನುಂಟು ಮಾಡುತ್ತದೆ. ತನಗಾಗಿ ಬಾಳುತ್ತಿರುವ ಹೆಣ್ಣು ಜೀವ ಒಂದರ ಮನಸ್ಸನ್ನು ಅರಿತುಕೊಳ್ಳಲು ಅಮರೇಶ ವಿಫಲನಾಗಿದ್ದಾನೆ. ಕಥೆಗಾರರು ಯುವ ಜನಾಂಗದ ಅಧೋಗತಿಯನ್ನು ಇಲ್ಲಿ ತಳಿಸಲು ಪ್ರಯತ್ನಿಸಿದ್ದಾರೆಂದು ತೋರುತ್ತದೆ.

ಚಿತ್ರಶೇಖರ ಕಂಠಿಯವರ 'ಗೌರಿಬಿ' ಕಥೆ ಮುಸ್ಲಿಂ ಜನಾಂಗದ ಅನಾಥ ತರುಣ ವಿಧವೆಯೊಬ್ಬಳ ಧಾರುಣ ಚಿತ್ರಣವನ್ನೊಳಗೊಂಡಿದೆ. ಇಲ್ಲಿ ತನ್ನ ಗಂಡನನ್ನು ಕಳೆದುಕೊಂಡ 'ಗೌರಿಬಿ' ಸ್ವಾವಲಂಬಿ ಜೀವನ ನಡೆಸುವುದಕ್ಕಾಗಿ ಮತ್ತು ತನ್ನ ಮಗುವಿಗೆ ಶಿಕ್ಷಣ ಕೊಡಿಸುವುದಕ್ಕಾಗಿ ಗುರುಬಸಪ್ಪ ಗೌಡರ ಮನೆಯಲ್ಲಿ ಕೆಲಸ ಮಾಡಿಕೊಂಡು ಬದುಕಲು ಪ್ರಾರಂಭಿಸುತ್ತಾಳೆ. 'ಗೌರಿಬಿ'ಯ ತುಂಬಿದ ತಾರುಣ್ಯ ಬೆಳ್ಳಗಿನ ಮೈಬಣ್ಣ ಕಂಡ ಪಡ್ಡೆ ಹುಡುಗರು ಜಲ್ಲು ಸುರಿಸುತ್ತಿದ್ದರಾದರೂ, ಗುರುಬಸಪ್ಪ ಗೌಡ ಒಬ್ಬ ಪ್ರತಿಷ್ಠಿತ ವ್ಯಕ್ತಿ ಹೇಗೋ ಅಷ್ಟೆ ಕಠಿಣ ಹೃದಯದವನಾಗಿದ್ದುದರಿಂದ ಯಾರೂ ಅವಳ ದೇಹ ಮುಟ್ಟಲು ಧೈರ್ಯ ಮಾಡಲಿಲ್ಲ ಆದರೆ ಒಂದು ದಿನ ತೋಟಕ್ಕೆ ಬಟ್ಟೆ ತೋಳೆಯಲು ಹೋದಾಗ ಗುರುಬಸಪ್ಪನ ಮಗ ಶಿವಬಸ್ಸುವಿನ ಬಲತ್ಕಾರಕ್ಕೆ ಒಳಗಾಗುತ್ತಾಳೆ. "ಬ್ಯಾಡ್ರಿ ನಿಮಗೆ ಕೈ ಮುಗಿತಿನಿ ಕಾಲಿಗೆ ಬೀಳ್ತಿನಿ ನನಗೆ ಏನು ಮಾಡಬ್ಯಾಡ್ರಿ"[೪೧] ಎಂದು ಆಕೆ ಬೇಡಿಕೊಂಡರೂ ಕಾಮನೆತ್ತಿಗೇರಿದ ಶಿವಬಸ್ಸು "ಸುಮ್ಮಕ್ಕಿರು ಚೀರಿದೆಂದರೆ ನೀನೇ ಬದನಾಮ ಅಗ್ತಿ, ಖೋಲ್ಯಾಗ ಮಲಗಿದ್ದ ನನ್ನ ಮ್ಯಾಲಕ ಬಂದು ಬಿದ್ದು ಜಬರದಸ್ತಿ ಮಾಡ್ಯಾಳಂತ ಬಂದವರ ಮುಂದೆ ಹೇಳ್ತಿನಿ"[೪೨] ಎಂದು ಹೇದರಿಸಿ ಅಸಹಾಯಕಳನ್ನಾಗಿ ಮಾಡಿ ವಂಚಿಸಿದ ಶಿವಬಸ್ಸು ಆಕೆಯನ್ನು ಯಾರೂ ಗೊತ್ತಿಲ್ಲದ ಮುಂಬೈ ನಗರಕ್ಕೆ ಬದುಕಲು ಹೋಗುವಂತೆ ಮಾಡುತ್ತಾನೆ.

ಗುರುಬಸಪ್ಪ ಗೌಡನ ಮಗನಿಂದ ಬಲತ್ಕಾರಕ್ಕೊಳಗಾದ ಗೌರಿಬಿ ಪಂಚಾಯಿತಿ ಕರೆಸಿ ಅಲ್ಲಿಯ ಊರಿನ ಪ್ರಮುಕರ ಮುಂದೆ "ನಾ ಇಲ್ಲಿಯತನಕ ದುಡದ ರೊಕ್ಕ ಸಾಡೆಚಾರ ಹಜಾರ ಜಮಾ ಅವ ಅಂತ ಗುರುಬಸಪ್ಪ ಅಣ್ಣೋರು ಹೇಳ್ಯಾರ. . . . ಗಂಡನ ಕಳಕೊಂಡ ಹೆಣ್ಣಿಗೆ ಯಾರಾರ ಮಧುವಿ ಮಾಡಿಕ್ಕೊಳ್ಳಾಕ ಮುಂದ ಬಂದ್ರ ಅಂತ ಮಂದಿಗೆ ಈ ರೊಕ್ಕ ಖರ್ಚು ಮಾಡಬೇಕಂತ ನಿಮ್ಮಲ್ಲಿ ಬೇಡಕೋತಿನಿ. ಗಂಡ ಸತ್ತ ಹೆಣ್ಣು ಮಕ್ಕಳು ಮತ್ತು ಮಧುವಿ ಮಾಡಿಕೊಂಡು ಸಂಸಾರ ನಡೆಸಬೇಕಾನ್ನಾದೆ ನನ್ನಾಸೆ",[೪೩] ಎಂದು ಆಕೆ ಹೇಳುವ ಈ ಮಾತುಗಳು ವಿಧವೆಯರ ಕಲ್ಯಾಣದ ಮಾತುಗಳಾಗಿವೆ. ಸ್ವತಃ ತಾನೊಬ್ಬ ವಿಧವೆಯಾಗಿ ಸಮಸ್ಯೆಗಳನ್ನು ಅನುಭವಿಸಿದ ಗೌರಿಬಿ ಉಳಿದ ವಿಧವೆಯಾರಾದರೂ ತಾನು ಅನುಭವಿಸಿದ ಯಾತನೆಗಳನ್ನು ಅನುಭವಿಸಬಾರದೆಂದು ಹೇಳುತ್ತಾಳೆ. ಇದು ಈ ಕಥೆಯ ಪ್ರಮುಖ ಆಶಯವೂ ಆಗಿದೆ ಎನ್ನುವುದು ಗಮನಿಸಬೇಕು.

ಚಿತ್ರಶೇಖರ ಕಂಠಿಯವರ 'ಗೌಡ್ರ ಗೌರಿ ಗುಂಡನ ಚನ್ನಿ' ಕಥೆ ಕೆಳವರ್ಗದ ಚನ್ನಿಯ ಬದುಕು ಪ್ರಾಣಿಗಿಂತಲೂ ಕನಿಷ್ಟವಾಗಿ ಪರಿಗಣಿತವಾಗಿ ಶೋಷಿಸಲ್ಪಡುವುದನ್ನು ಚಿತ್ರಿಸುತ್ತದೆ. ಗುಂಡ ಗೌಡರ ಹೊಲೆಯಾಳು. ಗೌಡರ ಗೌರಿ ಹಸುವಿಗೆ ಹೆರಿಗೆ ನೋವು ಆರಂಭವಾಗಿರುತ್ತದೆ. ಮನೆಯಲ್ಲಿ ಗುಂಡನ ಹೆಂಡತಿ ಚನ್ನಿಗೆ ಹೆರಿಗೆನೋವು ಕಾಣಿಸಿಕೊಂಡು ಸೂಲಗಿತ್ತಿಯ ಕೈಮೀರಿ ಡಾಕ್ಟರನ್ನು ಕರೆತರಬೇಕೆಂದು ಕಾಳಪ್ಪ ಬಂದು ಹೇಳುತ್ತಾನೆ. ಗುಂಡ ಗೌಡರ ಅನುಮತಿ ಕೇಳುತ್ತಾನೆ. ಬಾಣೆತನ ಅಂದ ಮೇಲೆ ತರಾಸಾಗ್ತದಪ ಗುಂಡ. ಬ್ಯಾನಿ ಸುರುವಾಗಿಬೇಕು ಬಾಣತನ ಆಗ್ತದ ಬಿಡು ನೀ ಹೋದಿ ಅಂದ್ರ ಗೌರಿ ಗತಿ ಏನು?" ಎಂದು ಹೇಳಿ ನಿರಾಕರಿಸುತ್ತಾನೆ.

ಗುಂಡ ಗೌರಿ ಕರು ಹಾಕಿದ ಮೇಲೆ ಕೆಲಸ ಮುಗಿಸಿ ಮನೆಗೆ ಬರುವುದರಲ್ಲಿ ಚನ್ನಿ ಹೆರಿಗೆಯ ತೊಂದರೆಯಿಂದ ಅಸುನೀಗುತ್ತಾಳೆ. ಸಮಯಕ್ಕೆ ಸರಿಯಾಗಿ ಚಿಕಿತ್ಸೆಸಿಗದೇ ಚನ್ನಿ ಹೆತ್ತು ಸಾಯುತ್ತಾಳೆ. ಬಡತನ, ದೂರದ ಆಸ್ಪತ್ರೆ ಗರ್ಭಿಣಿಯ ಆರೋಗ್ಯ ರಕ್ಷಣೆಗೆ ಸಹಕಾರಿಯಾಗಿಲ್ಲದಿರುವುದನ್ನು ಹಾಗೂ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಕೆಳವರ್ಗದ ಮಹಿಳೆಯ ಬದುಕಿಗೆ ಬೆಲೆ ಇಲ್ಲದಿರುವುದನ್ನು ಕಥೆ ಪ್ರತಿನಿಧಿಸುತ್ತದೆ.

ಸೂಗಯ್ಯ ಹಿರೇಮಠ 'ಹುತ್ತ' ಎನ್ನುವ ಕಥೆಯಲ್ಲಿ ಸೂಗಯ್ಯ ಹಿರೇಮಠರು ಲಚಮನಗೌಡನ ಲೈಗಿಂಕ ಕಿರುಕುಳ, ಶೊಷಣೆ, ಮೋಸ, ಕಳ್ಳತನಗಳ ಕಂತೆಯನ್ನು ಕತೆ ಮಾಡಿ ಹೇಳಿದ್ದಾರೆ. ಊರಿಗೆ ಗೌಡನಾದ ಲಚಮನ ಗೌಡನಿಂದಲೇ ಸಂಭವಿಸಿದ್ದರೂ ಅವರು ಸಾವು ಆಕಸ್ಮಿಕ ಎಂದು ಸಾಬೀತು ಮಾಡುತ್ತಾನೆ. ಹೊಲದಲ್ಲಿ ನಿಷ್ಠೆಯಿಂದ ಕೆಲಸ ಮಾಡಿದ ಹುಸೇನಿ ಕೊಲೆ ಅರೋಪದ ಮೇಲೆ ಜೈಲು ಸೇರಿದುದು ಕೂಡ ಲಚಮನಗೌಡರಿಂದಲೇ. ಇಂದಿನ ಸಮಾಜದಲ್ಲಿ ಬಡವರ್ಗದ ಜನರ ಅಥವಾ ಅಲ್ಪಸಂಖ್ಯಾತರ ಬದುಕು ಏಕೆ ಅತಂತ್ರವಾಗುತ್ತಿದೆ ಎನ್ನುವುದನ್ನು ಕಥೆಗಾರರು 'ಹುತ್ತ' ಕತೆಯಲ್ಲಿ ಅತ್ಯಂತ ಸೊಗಸಾಗಿ ಚಿತ್ರಿಸಿದ್ದಾರೆ. ಊರಿಗೆ ಮುಖಂಡರಾದ ಗೌಡರು ಮಾಡುವ ಯಾವುದೇ ತಪ್ಪು ಕೆಲಸಗಳನ್ನು ಕೂಡ ತಪ್ಪು ಎಂದು ಹೇಳುವ ಸಾಹಸ ಯಾರು ಮಾಡುವಂತಿಲ್ಲ. ಸುತ್ತಲಿನ ಸಮಾಜವನ್ನು ಬರೆಗಣ್ಣಿನಿಂದ ಗಮನಿಸುವ ಸೂಗಯ್ಯ ಹಿರೇಮಠರು ತಮ್ಮ ಕಥೆಗಳಲ್ಲಿ ವಾಸ್ತವಿಕತೆಗೆ ಹೆಚ್ಚಿನ ಒತ್ತು ನೀಡಿದ್ದಾರೆ. 'ಹುತ್ತ' ಕಥೆಯ ಲಚಮನಗೌಡ ಒಬ್ಬನಿಂದಲೇ ಸಮಾಜದಲ್ಲಿ ಬಡವರ ಬದುಕು ಹದಗೆಡುತ್ತಿದೆಯಂದಲ್ಲ. ಇಂತಹ ಇನ್ನೂ ಎಷ್ಟೋ ಜನ ಲಚಮನಗೌಡರ ಸಮಾಜದಲ್ಲಿ ಜೀವಂತವಿದ್ದಾರೆ. ಅವರಿಂದ ಲಾಲಬಿ, ಚಾಂದಬಿಯಂತಹ ಅದೆಷ್ಟೋ ಅಮಾಯಕ ಬಡ ಹೆಣ್ಣು ಮಕ್ಕಳು ಶೀಲ ಕಳೆದುಕೊಂಡು ಹೆಣವಾಗಿದ್ದಾರೆ. ಎನ್ನುವುದನ್ನು ಕಥೆಗಾರರು ತಮ್ಮ ಈ ಕಥೆಯಲ್ಲಿ ಸೂಚ್ಯವಾಗಿ ತಿಳಿಸಿದ್ದಾರೆ. ಅಲ್ಲದೆ ಹಿಂದುಳಿದವರು, ಅಲ್ಪಸಂಖ್ಯಾತರು, ದಲಿತರು,

ಬಡವರು, ಶೋಷಣೆಗೆ ಗುರಿಯಾಗಲು ಪ್ರಮುಖ ಕಾರಣವೆಂದರೆ ಅವರ ಅಜ್ಞಾನ, ಅಂಧಶ್ರದ್ಧೆ, ಗೌಡರ, ಪ್ರಮುಖರ ಬಗೆಗಿನ ಭಯ, ಭಕ್ತಿ ಹಾಗೂ ಅನಕ್ಷರತೆ ಈ ಮುಂತಾದವುಗಳೆಂದು ಹೇಳಬಹುದು. ಈ ಎಲ್ಲ ಅಡ್ಡ ಗೋಡೆಗಳನ್ನು ಒಡೆದು ಹೊರಬರಬೇಕಾದುದು ಇಂದಿನ ಬಹುಮುಖ್ಯ ಅಗತ್ಯವಾಗಿದೆ ಎನ್ನುವುದು ಈ ವರ್ಗ ಮನಗಾಣಬೇಕು.

ಬಾಲಚಂದ್ರ ಜಯಶೆಟ್ಟಿ ಜಯಶೆಟ್ಟಿಯವರು "ಎಲ್ಲಮ್ಮನ ಸೇವೆ" ಕಥೆಯಲ್ಲಿ ಸ್ತ್ರೀಯರು ಶೋಷಣೆಯ ಕುರಿತು ತುಂಬಾ ಮಾರ್ಮಿಕವಾಗಿ ಹೇಳಿದ್ದಾರೆ. ಹೊಲೆಯರ ಕಾಳನ ಮಗಳು ಚೆನ್ನಿ ಹದಿಹರೆಯದ ಚೆನ್ನಿಯಂಥ ಯುವತಿಯರನ್ನು ಬೆತ್ತಲೆ ಸೇವೆಯಲ್ಲಿ ತೊಡಗಿಸಿ ಮನರಂಜನೆ ಮಾಡಿಕೊಳ್ಳುವ ಊರಿನ ಗೌಡ-ಕುಲಕರ್ಣಿಯರ ಕಥೆಯಾಗಿದೆ. ತಮ್ಮ ಹೆಂಡತಿಯರಿಗೆ ಗಂಡರಾಗದಿದ್ದ ಈ ಪ್ರಮುಖರು ಊರಿನಲ್ಲಿಯ ಹರೆಯದ ಯುವತಿಯರ ಮೇಲೆ ಕಣ್ಣು ಹಾಕುತ್ತಿದ್ದರು. ಅಂಥ ಸುಂದರ ಯುವತಿ ಚೆನ್ನಿಯನ್ನು ಬೆತ್ತಲೆ ಸೇವೆಗೆ ಒಪ್ಪುವಂತೆ ಮಾಡಿ, ಪೂಜಾರಿಯು ಕುಡಿಸಿದ ಔಷಧಿಯ ಅಮಲಿನಲ್ಲಿದ್ದರೂ ಗೌಡನ ದೌರ್ಜನ್ಯವನ್ನು ವಿರೋಧಿಸಿ ಎದೆಗೆ ಒದ್ದದ್ದು, ಅವನು ಜೋಲಿ ತಪ್ಪಿ ಜಾರಿಬಿದ್ದು ಕಂಠಿಯಿಂದಲೇ ಓಡಿ ಹೋದದ್ದು ಅಲ್ಲಿ ನೋಡುವುದು ಇಲ್ಲಿಯ ಕಥಯಾಗಿದೆ. ಇಲ್ಲಿ "ಬೆತ್ತಲೆ ಸೇವೆ"ಯ ಹಿಂದಿನ ಸಂಚು-ಹೊಂಚುಗಳ ಚಿತ್ರಣವನ್ನು ಕಥೆಗಾರರು ಅತ್ಯಂತ ಸರಳವಾಗಿ ಹೇಳಿದ್ದಾರೆ.

ಇವರ ಇನ್ನೊಂದು ಕಥೆಯಾದ "ಸೋಬಾನ" ದಲ್ಲಿ ತಮ್ಮ ಊರಾದ ರಾಸೂರಿನ ವಸ್ತುವನ್ನೇ ಆರಿಸಿಕೊಂಡ ಕಥೆ ಹೆಣೆದಿದ್ದಾರೆ. ಈ ಕಥೆಯಲ್ಲಿ ಮದುವೆಯಾದ ಪ್ರತಿ ಹೆಣ್ಣು ತನ್ನ ಗಂಡನನ್ನು ಕೂಡುವ ಮೊದಲು ಆ ಹಳ್ಳಿಯ ಧಣಿಯೊಂದಿಗೆ ಮೊದಲ ರಾತ್ರಿ ಕೂಡಬೇಕೆಂಬ ಪದ್ಧತಿಯೇ ಇದರ ವಸ್ತುವಾಗಿದೆ, ಇಲ್ಲಿ ನರಸಿಂಗನ ಸೊಸೆಯಾದ ದಾನವ್ವಳ ಸೋಬಾನದ ಕಥೆಯನ್ನು ಹೇಳಿದ್ದಾರೆ. ಊರಿಗೆ ಸಾಹುಕಾರನಾದವನು ತನ್ನ ಇಚ್ಚೆಯನ್ನು ತೀರಿಸಿಕೊಳ್ಳಲು ಹೂಡಿದ ಪದ್ಧತಿ ಹಾಗೆಯೇ ಬೆಳೆಯುತ್ತಾ ಬಂದಿತ್ತು ಸೋಬಾನಕ್ಕೆ ಬಂದ ಹೆಣ್ಣು ಮೊದಲು ಧಣಿಯ ಮನೆಗೆ ಹೋಗಿ ಮೊದಲ ರಾತ್ರಿ ಅವನಲ್ಲಯೇ ಕಳೆಯುವುದು ರೂಢಿಯಾಗಿತ್ತು. ಇದಕ್ಕೆ ಗುಜ್ಜವ್ವಳು ಸಹ ಬಲಿಯಾಗಿದ್ದಳು, ಆದರೆ ಗುಜ್ಜವ್ವ ಅಂಥ ಸಮಸ್ಯೆ ಬಂದಾಗ ಧಣೇರ ಕೊಬ್ಬನ್ನು ಮುರಿದಿದ್ದಳು. ಮುಂದೆ ಮಗಳು ಸಹ ಸೋಬಾನವಾದ ರಾತ್ರಿ ಕುಡುಗೋಲಿನಿಂದ ಪ್ರತಿಭಟಿಸುತ್ತಾಳೆ. ಹೀಗೆ ಈ ಪ್ರತಿಭಟನೆಯಿಂದ ದಾನವ್ವ ತನ್ನದೇ ದಾರಿ ಹುಡುಕಿಕೊಂಡಳು ಕೊನೆಗೆ ಧಣಿಯ ಹೆಂಡತಿಗೆ ದಾನವ್ವ ನಿಜ ಸಂಗತಿ ತಿಳಿಸಿ ಅನಾಹುತ ತಪ್ಪಿಸುತ್ತಾಳೆ. ಇದು ಒಂದು ಪ್ರತಿಭಟನೆ ರೂಪದಲ್ಲಿ ಬಂದು ವ್ಯಕ್ತಗೊಳ್ಳುತ್ತದೆ.

ಶ್ರೀಕಾಂತ ಪಾಟೀಲರ "ಮೂಡಲದಾಗ ಕೆಂಪರಾಶಿ ಮೂಡಿತ್ತು" ಕಥೆಯು ಜಯತೀರ್ಥ ರಾಜ ಪುರೋಹಿತ ದತ್ತಿ ಕಥಾ ಸ್ಪರ್ಧೆಯಲ್ಲಿ ಚಿನ್ನದ ಪದಕ ಗಳಿಸಿದ ಕಥೆಯಾಗಿದೆ ಹಾಗೂ 'ಬಿಸಿಲ ಹನಿಗಳು' ಎಂಬ ಹೈದರಾಬಾದ್ ಕರ್ನಾಟಕದ ಪ್ರಾತಿನಿಧಿಕ ಕಥಾ ಸಂಕಲನದಲ್ಲಿ ಪ್ರಕಟಗೊಂಡಿದೆ. ಇದರಲ್ಲಿ ಭಾಗಾದಿಯರ ಬಾಂಧವ್ಯವನ್ನು ಚಿತ್ರಿಸುತ್ತಲೇ ಅವರ ಸಣ್ಣತನ, ಅಸೂಯೆ, ಅನುಮಾನಗಳನ್ನೆಲ್ಲಾ ಕಾಣಿಸುವ ವಾಸ್ತವತೆ ಇದೆ. ಗಂಡ ತೀರಿದ ನಂತರ ಸಣ್ಣಿ ತನ್ನ ಮಗಳೊಂದಿಗೆ ಇದ್ದು ಬಾಳುವೆ ಮಾಡುತ್ತಾಳೆ, ಶಾಂತಪ್ಪ ಸತ್ತ ನಂತರ ಸಣ್ಣಿಗೆ ಆಸ್ತಿ ಕೊಡಲು ನಿರಾಕರಿಸುತ್ತಾ, ಭಾವ ಮೈದುನರು ಸಾಕಷ್ಟು ಕಷ್ಟಗಳನ್ನು ಕೊಡುತ್ತಾರೆ. ಆದರೆ ಇಲ್ಲಿ ಊರಿನ ಗೌಡ ಕುಲಕರ್ಣಿಯರು ಯಾರು ಸಹಾಯಕ್ಕೆ ಬರುವುದಿಲ್ಲ, ಎಲ್ಲ ಜವಾಬ್ದಾರಿ ಈಕೆಯ ಮೇಲಿರುತ್ತದೆ. ಇದನ್ನೆಲ್ಲಾ ಸಹಿಸಿಕೊಂಡು ಸಣ್ಣಿ ಆಸ್ತಿಗಾಗಿ ದಾಯಾದಿಗಳೊಂದಿಗೆ ಸೆಣಸಾಡುವುದು ಹಾಗೂ ಕೊನೆಯಲ್ಲಿ ಕತ್ತಿಯನ್ನು ಹಿಡಿದು ನಿಂತಾಗಲೇ ಅವರೆಲ್ಲಾ ಅಂಜುತ್ತಾರೆ. "ಹೆಣ್ಣು ಮುನಿದರೆ ಮಾರಿ" ಎನ್ನುವ ತತ್ವವನ್ನು ಮತ್ತು ಧೈರ್ಯದಿಂದ ಹೇಗೆ ಆಸ್ತಿಯನ್ನು ಪಡೆಯಬಹುದೆಂದು ಪ್ರತಿಭಟಿಸಲು ಪ್ರಾರಂಭಿಸಿದಾಗ ಎದುರಿನವರ ಶಕ್ತಿ ಕುಂದುತ್ತದೆ ಎಂಬುದು ಇಲ್ಲಿ ವ್ಯಕ್ತಪಡಿಸಿದ್ದಾರೆ.

ನಾಗವಾರರ 'ಬಾಬಡಿ' ಈ ಕಥೆಯು ಒಂದು ಅಸಹಾಯಕ ಹೆಣ್ಣಿನ ಬಂಜೆತನದ ಸಮಸ್ಯೆಯನ್ನು ಕುರಿತು ಧ್ವನಿಸುತ್ತದೆ. ಹಾಗೂ ಇದನ್ನು ವಿವರಿಸುವುದಕ್ಕಾಗಿ ಒಂದು ಕಾಳನ್ನು ಉದಾಹರಣೆಯಾಗಿಟ್ಟುಕೊಂಡು ಹೇಳಿದ್ದು ಬಹು ಮಾರ್ಮಿಕವಾಗಿದೆ.

ಬಾಬಮ್ಮ ಸನ್ಮುಕಯ್ಯನ ಮೊದಲನೆಯ ಹೆಂಡತಿ. ಸ್ತ್ರೀಯರಿಗೆ ಮದುವೆಯಾದ ಮೇಲೆ ಮಕ್ಕಳ ಆಸೆ ಆಕಾಂಕ್ಷೆಗಳು ಇರುವುದು ಸಹಜ. ಅದರಂತೆ ಬಾಬಮ್ಮಳಿಗೂ ತಾಯ್ತನದ ತುಡಿತವೂ ಇತ್ತು, ತನ್ನ ಯಾವುದೇ ತಪ್ಪಿಲ್ಲದಿದ್ದರು ತಂದೆಯ ಒಣ ಪ್ರತಿಷ್ಠೆಗೆ ಬಲಿಯಾಗಿ ಗಂಡನಿಂದ ದೂರಾಗಿ, ತವರು ಮನೆಯಲ್ಲಿಯೇ ಉಳಿಯಬೇಕಾಗುತ್ತದೆ. ಒಂದು ವೇಳೆ ತಂದೆ ಹಾಗೂ ಗಂಡ ಇಬ್ಬರಲ್ಲಿ ಒಬ್ಬರಾದರೂ ಸೋತಿದ್ದರೆ ಬಾಬಮ್ಮ ಬಂಜೆಯಾಗುವ ಪ್ರಸಂಗವೇ ಬರುತ್ತಿರಲಿಲ್ಲ. ಹೀಗೆ ಹಸಿ ಬಯಕೆಗಳನ್ನು ಒಡಲಲ್ಲಿಟ್ಟುಕೊಂಡು ಗಂಡನ ಜೊತೆ ಸಂಸಾರದ ಸುಖ ಕಾಣದೇ ಬಾಬಮ್ಮ ಕೊನೆಗೆ ಸಾವನ್ನಪ್ಪುವುದು ಇಲ್ಲಿಯ ಕರುಣಾಜನಕ ಕಥೆಯಾಗಿದೆ.

ದೇಶಪಾಂಡೆಯವರ "ಕತೆಯಾದ ಬದುಕು" ಕಥೆಯಲ್ಲಿ ಹೆಣ್ಣು ಏಕಾಂಗಿಯಾಗಿ ಬದುಕಲು ಸಾಧ್ಯವಿಲ್ಲ. ಗಂಡಿನ ಆಶ್ರಯ ಅವಳಿಗೆ ಅವಶ್ಯವಾಗಿ ಬೇಕೇ ಬೇಕು ಎನ್ನುವುದು ಒತ್ತಿ ಹೇಳುತ್ತದೆ. ರಾಮಿಯ ಬದುಕು ತೆರೆದ ಬಾಗಿಲು ಆಗಿರಲಿಲ್ಲ ಮುಚ್ಚಿದ ಬಾಗಿಲಿನ ಹಿಂದೆ ಮುಖ ಮರೆಸಿಕೊಂಡವರ ಮುಖವಾಡಗಳ ಬದುಕಾಗಿತ್ತು. ಇಲ್ಲಿ ಐದು ಮಕ್ಕಳ ತಾಯಿಯಾದ ರಾಮಿ ಚಿಕ್ಕಂದಿನಿಂದಲೂ

ಕಷ್ಟದಿಂದಲೇ ಬೆಳೆದು, ವಿವಾಹದ ನಂತರವೂ ಬಡತನದ ಬವಣೆಯಲ್ಲಿ ಬೇಯುತ್ತಾಳೆ. ವಿವಾಹವಾದ ಕೆಲದಿನಗಳಲ್ಲೇ ಪತಿಯನ್ನು ಕಳೆದುಕೊಂಡು ವಿಧವೆಯಾಗುತ್ತಾಳೆ. ಹಿಂದೆ ಯಾವುದೇ ಆಸ್ತಿ ಇರಲಾರದೇ ಇದ್ದರೂ ತನ್ನ ಜೀವ ಸವೆಸಿ ಮಕ್ಕಳನ್ನು ಸಾಕುತ್ತಿರುತ್ತಾಳೆ. ಮುಂದೆ ರಾಮಿಗೆ ಒಂದು ಕಡೆ ಹೆಣ್ಣು ಮಕ್ಕಳ ವಿವಾಹದ ಸಮಸ್ಯೆಯಾದರೆ, ಇನ್ನೊಂದು ಕಡೆ ಬಡತನ ಅಸಹಾಯಕತೆಗಳು ಕಾಡುತ್ತವೆ. ಇಂತಹ ಅಸಹಾಯಕ ಸ್ಥಿತಿಯನ್ನು ಕಂಡು ಅದರ ದುರುಪಯೋಗವನ್ನು ಇಂದಿನ ಸಮಾಜ ಪಡೆದುಕೊಳ್ಳಲು ಹೆಣಗಾಡುತ್ತದೆ. ಒಂಟಿ ಹೆಣ್ಣು ಇವತ್ತಿನ ಸಮಾಜದಲ್ಲಿ ಗಂಡಸಿನ ಕೆಟ್ಟ ದೃಷ್ಟಿ ಹಾಗೂ ದೌರ್ಜನ್ಯಗಳಿಗೆ ಬಲಿಯಾಗದೇ ಬದುಕಲು ಸಾಧ್ಯವೇ ಇಲ್ಲ ಎಂಬ ವಿಚಾರವನ್ನು ಕಥೆಗಾರರು ಯಥಾವತ್ತಾಗಿ ತಿಳಿಸಿದ್ದಾರೆ.

ಇವರ ಇನ್ನೊಂದು ಕಥೆಯಾದ 'ಪ್ರವಚನ'ವು ವಿಶೇಷ ರೀತಿಯ ವಸ್ತುವನ್ನೊಳಗೊಂಡಿದೆ. 'ಪ್ರವಚನ' ಎಂದ ಕೂಡಲೇ ಮೊದಲು ತಲೆಗೆ ತಟ್ಟನೆ ಹೊಳೆಯುವುದು ದೇವರು-ಧರ್ಮ, ದೈವ ನಂಬಿಕೆ ಎಂಬ ವಿಷಯಗಳು. ಇಂದಿನ ಜನರು ಇಂತಹ ನಂಬಿಕೆಯನ್ನು ಸುಳ್ಳಾಗಿಸುತ್ತಿದ್ದಾರೆ ಎಂಬ ಅಂಶವನ್ನು ಕಥೆಗಾರರು ಇಲ್ಲಿ ಹಿಡಿದಿಟ್ಟಿದ್ದಾರೆ. ಜನರು ಇಂದಿಗೂ ದೇವರಲ್ಲಿ, ಗುರುಗಳಲ್ಲಿ ನಂಬಿಕೆಯಿಟ್ಟು ಭಕ್ತಿಯಿಂದ ಪೂಜಿಸುತ್ತಲ್ಲಿದ್ದಾರೆ. ಅವರ ಆಶೀರ್ವಾದ, ಅನುಗ್ರಹ ಯಾವ ಕಾಲದಲ್ಲಿ ಯಾವ ರೂಪದಲ್ಲಿ ಬರುತ್ತದೆ ಎಂಬುದು ಮಾತ್ರ ಅನುಚಿತ. ಪ್ರವಚನ ಕೇಳಲು ಹೋದ ಧರ್ಮಶೆಟ್ಟಿಯ ಮಗಳು ಕಾಮಾಕ್ಷಿ ಶೀಲಹಾಳಾದುದನ್ನು ಚಿತ್ರಿಸಿದ್ದಾರೆ. ಕಣ್ಣಿನಿಂದ ಕಂಡ ಕಾಮಾಕ್ಷಿ ತಂದೆ ಯಾವುದೇ ಚಕಾರ ಎತ್ತದೆ ಸುಮ್ಮನಿರಬೇಕಾದ ಪ್ರಸಂಗ ಬರುತ್ತದೆ. ಏಕೆಂದರೆ ಹೆಣ್ಣಿನ ಶೀಲ ಕೆಟ್ಟ ಮೇಲೆ ಸಮಾಜ ಅವಳಿಗೆ ಯಾವ ಪಟ್ಟ ಕಟ್ಟುತ್ತಾರೆ ಎಂದು ಹೆದರಿ ವಿಷಯ ಮನದಲ್ಲೇ ಇಟ್ಟುಕೊಂಡಿರುತ್ತಾನೆ. ಮುಂದೆ ಅದೇ ಹೆಣ್ಣು ಗುರುಗಳಲ್ಲಿ ಲಿಂಗದೀಕ್ಷೆ ಪಡೆದುಕೊಂಡು ಸನ್ಯಾಸವನ್ನು ಸ್ವೀಕರಿಸುತ್ತಾಳೆ. ತಪ್ಪುಗಳು ನಡೆಯಬಾರದು ಎಂದು ಯಾವ ಧರ್ಮ-ದೇವರನ್ನು ನಂಬಿರುತ್ತೇವೆಯೋ ಅದೇ ಈಗ "ಬುಡಮೇಲಾಗಿ ನಿಂತರೆ ಮುಂದೇನು? ಗತಿ". ನಾಗರೀಕ ಜನಾಂಗದ ಸಂಪರ್ಕ ಅಷ್ಟಾಗಿ ಇಲ್ಲದ, ದೂರದ ಗುಡ್ಡಗಾಡು ಪ್ರದೇಶದಲ್ಲಿ ತಮ್ಮದೇ ಆದ ಸಮುದಾಯವನ್ನು ನಿರ್ಮಿಸಿಕೊಂಡು ಬದುಕಿದಂಥಾ ಲಂಬಾಣಿಗಳಲ್ಲಿಯೂ ಮಹಿಳಾ ಶೋಷಣೆ ನಡೆಯುವುದನ್ನು ಈ ಕಥೆ ವಿಷಧಿಕರಿಸಿದೆ.

ಬಿ.ಟಿ.ಲಲಿತಾನಾಯಕರ 'ಲೂಟಿ' ಕಥೆಯಲ್ಲಿನ ರಾಮಿಯ ಗಂಡ ಬೀರು ಗೌಡನ ಹೊಲಕ್ಕೆ ಬಂಡಿಯಲ್ಲಿ ಗೊಬ್ಬರ ಹೇರಿಕೊಂಡು ಹೋಗುತ್ತಿರುವಾಗ ಹಿಂದಿನಿಂದ ಬಂದ ಲಾರಿಯೊಂದು ಗುದ್ದಿಕೊಂಡು ಹೋಗಿದ್ದರಿಂದ ಪಕ್ಕೆಲುಬು ಮುರಿದುಕೊಂಡ ಬೀರುವನ್ನು ಆಸ್ಪತ್ರೆಗೆ ಸೇರಿಸಿ, ಗೌಡ ಕೈ ತೊಳೆದುಕೊಂಡು ಬಿಡುತ್ತಾನೆ. ಆದರೆ ಬೀರುನನ್ನು ಪಟ್ಟಣದ ಆಸ್ಪತ್ರೆಗೆ ಸೇರಿಸಲು ಗೌಡನಲ್ಲಿ

ಸಾಲ ಕೇಳಲು ಬರುತ್ತಾಳೆ. ಆದರೆ ಗೌಡ, ಬೀರು ಸತ್ತರೆ ತನ್ನ ಸಾಲವೇ ಮರಳದು ಎಂದರಿತು ಸಾಲ ನೀಡವುದಿಲ್ಲ. ಅವಳು ಪರಿಪರಿಯಾಗಿ ಕೇಳಿಕೊಳ್ಳುವುದೂ ವ್ಯರ್ಥವಾಗುತ್ತದೆ. ನ್ಯಾಯವಾಗಿ ಆಸ್ಪತ್ರೆಯ ಖರ್ಚು ಕೊಡಬೇಕಾದ ಗೌಡ ತಿರುಗಿ ಅವಳನ್ನೇ ಬೈದು ಕಳಿಸುವಲ್ಲಿ ಗೌಡನ ಸ್ವಾರ್ಥಪರ ಕ್ರೌರ್ಯವು ವ್ಯಕ್ತವಾದರೆ, ರಾಮಿಯ ಮುಗ್ಧತೆಯ ಜೊತೆಗೆ ಅಜ್ಞಾನದ ಪರಿಣಾಮ ಬಿಂಬಿಸುತ್ತದೆ. ಸಾಲವನ್ನಾದರೂ ಕೊಡಿ ಎಂದಾಗ ಅದಕ್ಕೆ ಭದ್ರತೆಯನ್ನು ಕೇಳುವ ಯಜಮಾನನ ಕಟುಕತನವನ್ನು ತೋರಿಸಿದರೆ, ತನಗಿರುವ ಹಕ್ಕನ್ನು ಅರಿಯದ ರಾಮಿಯ ಅಸಹಾಯಕತೆಯನ್ನು ಕಾಣಬಹುದು.

ಕೊನೆಗೆ ಅಸಹಾಯಕಳಾದ ರಾಮಿ ಮಕ್ಕಳನ್ನು ಹಾಸಿಗೆ ಹಿಡಿದ ಗಂಡನನ್ನು ಸಾಕುವ ಜವಾಬ್ದಾರಿಯನ್ನು ನಿಭಾಯಿಸಲು ಕಟ್ಟಿಗೆಗೆಂದು ಕಾಡಿಗೆ ಹೋದಾಗ ನಾಗರಿಕರೆಂದೆನಿಸಿ ಕೊಂಡ ಅನಾಗರಿಕರು ಕುಡಿದ ಅಮಲಿನಲ್ಲಿ ತಮ್ಮ ಅಪ್ಪಣೆಯಿಲ್ಲದೆ ಕಟ್ಟಿಗೆ ಕಡಿದದ್ದಕ್ಕಾಗಿ ದಂಡ ಕಟ್ಟಲು ಒತ್ತಾಯಿಸಿದಾಗ ಅಸಹಾಯಕಳಾದ ರಾಮಿಯ ಮಾನಭಂಗ ಮಾಡಿ ಕೊನೆಗೆ ಜೀವನಾಧಾರವಾಗಿದ್ದ ಕೊಡಲಿ ಮತ್ತು ಅವಳ ಸ್ವತ್ತಾಗಿದ್ದ ಬೆಳ್ಳಿ ಗೆಜ್ಜೆಗಳನ್ನು ದೋಚಿಕೊಂಡು ಹೋಗುವಲ್ಲಿ, ಕೇವಲ ಮುಗ್ಧ ಹೆಣ್ಣೋರ್ವಳ 'ಲೂಟಿ' ಯಷ್ಟೇ ಅಲ್ಲ ನಮ್ಮ ದೇಶದ ಬಹುಸಂಖ್ಯಾತ ಹೆಣ್ಣುಗಳ ಮೇಲಾಗುವ ನಿರಂತರ ಅತ್ಯಾಚಾರವನ್ನು ಬಿಂಬಿಸುತ್ತದೆ. ಆದರೆ ರಾಮಿ ಬರೀ ಕೈ ಯಲ್ಲಿ ಹಿಂದಿರುಗದೆ "ನೀವು ಯಾವ ಗವಿಯಾಗ ಅವಿತುಕೊಂಡ್ರು ಬಿಡಂಗಿಲ್ರೋ"[೪೯] ಎಂದು ಅವರನ್ನು ಹುಡುಕಲು ಓಡುತ್ತಾಳೆ.

ಹೀಗೆ ಬಂಡೇಳುವ ಪ್ರವೃತ್ತಿ ಮಹಿಳೆಯರಲ್ಲಿ ಬೆಳೆದು ಬರಬೇಕು. ಪ್ರತಿಭಟನೆ ಹುಟ್ಟಿದಾಗಲೇ ಶೋಷಣೆಗೆ ಕಡಿವಾಣ ಹಾಕಲು ಸಾಧ್ಯವಾಗುತ್ತದೆ ಎನ್ನುತ್ತಾ ಶೋಷಿತ ಮಹಿಳೆ ಪ್ರತಿಕಾರದ ಹೆಜ್ಜೆ ಇಡುತ್ತಿದ್ದಾಳೆ ಎಂಬ ಆಶಯದೊಂದಿಗೆ ಕಥೆ ಮುಗಿಯುತ್ತದೆ.

ಬಿ.ಟಿ.ಲಲಿತಾನಾಯಕರ 'ಉಣ್ಣಲುಂಟು ಉಡಲುಂಟು' ಕಥೆ ಪುರುಷ ಲೋಲುಪತೆಗೆ ಸುಗುಣಾ ಹಾಗೂ ಅವಳ ಮೂರು ಮಕ್ಕಳು ಬಲಿಯಾಗುವ ವಿಷಯ ವಸ್ತುವನ್ನೊಳಗೊಂಡಿದೆ. ಆಕೌಂಟೆಂಡ್ ಆಗಿದ್ದಾಗ ಯಾವ ಹುಚ್ಚು ಹವ್ಯಾಸವಗಳಿಲ್ಲದೆ ಚನ್ನಾಗಿ ಸಂಸಾರ ಮಾಡಿಕೊಂಡಿದ್ದ ಚಂದ್ರಯ್ಯ, ಪ್ರಮೋಷನ್ನಾಗಿ ಗಿಂಬಳಗಿಟ್ಟ ತೊಡಗಿದಾಗ ಸೇದುವ, ಕುಡಿಯುವ ಮತ್ತು ವೇಶ್ಯಾಸಂಗದಂಥ ಚಟಗಳನ್ನು ಕಲಿತು ಹೆಂಡತಿಗೆ ಸುಳ್ಳು ಹೇಳುತ್ತ ವಂಚಿಸುತ್ತಾನೆ. ದುಶ್ಚಟಗಳಿಗೆ ದಾಸನಾಗುವುದೆ ಗಂಡಸುತನದ ಲಕ್ಷಣವೆಂದು ಭಾವಿಸುತ್ತಾನೆ. ಹೆಂಡತಿ ಏನನ್ನಾದರೂ ಕೇಳಿದರೆ ನಿನಗೇನು ಕಡಿಮೆ ಇದೆ. ಹೊಟ್ಟೆಗೆ ಬಟ್ಟೆಗೆ ಎಂದು ಪ್ರಶ್ನಿಸುತ್ತಾನೆ. ಹೆಂಡತಿ ಮಕ್ಕಳು ತುಂಬು

ಸಂಸಾರವಿದ್ದರೂ ದುಶ್ಚಟಗಳನ್ನು ಆಶ್ರಯಿಸುವ ಪುರುಷ ಹೆಂಡತಿಗೆ ಹೊಟ್ಟೆ ಬಟ್ಟೆಗಿದ್ದರಾಯ್ತು ಬೇರೆನೂ ಬೇಕಿಲ್ಲವೆಂದು ಭಾವಿಸುತ್ತಾನೆ. ಅವನು ತನ್ನಿಂದ ಅವಳಿಗೆ ಮತ್ತೇನು ಬೇಕು ಎಂದು ಪ್ರಶ್ನಿಸಿದಾಗ ಸುಗುಣಾ ನಿಮ್ಮಿಂದ ನಮಗೆಲ್ಲಾ ಬೇಕಾಗಿರೋದು ಸಭ್ಯ ನಡವಳಿಕೆ ಎಂದು ಹೇಳಿದಾಗಲೂ ಸುಧಾರಿಸಿಕೊಳ್ಳದ ಚಂದ್ರಯ್ಯ ತನ್ನ ದಾರಿಯಲ್ಲೇ ಮುಂದುವರಿದಾಗ ಸುಗುಣಾ ತನ್ನ ಮೂರು ಮಕ್ಕಳೊಂದಿಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಗಂಡನನ್ನು ತಿದ್ದಲಾಗದ ಸಂದರ್ಭದಲ್ಲಿ ಆತ್ಮಹತ್ಯೆ ಪರಿಹಾರವಲ್ಲವಾದರೂ ತವರ ಆಸರೆ ಇಲ್ಲದ, ಹೆಚ್ಚಿನ ಓದು ಗೊತ್ತಿಲ್ಲದ, ಮರ್ಯಾದೆಗಾಗಿ ಬದುಕುವ ಮಧ್ಯಮವರ್ಗದ ಮಹಿಳೆ ಹೀನ ಬದುಕಿಗಿಂತ ಸಾವು ಶ್ರೇಷ್ಠವೆಂದೇ ಭಾವಿಸುತ್ತಾಳೆ.

**೫.೩ ಮಹಿಳಾ ಪಾತ್ರ ಚಿತ್ರಣ :**

ಕಥಾ ರಚನೆಯಲ್ಲಿ ವಸ್ತು ದೇಹವಾಗಿದ್ದರೆ, ಪಾತ್ರಗಳು ದೇಹವನ್ನು ಹೊತ್ತು ತಿರುಗುವ ಜೀವವಾಗಿವೆ. ನಿರ್ಜೀವ ವಸ್ತುವಿಗೆ ಜೀವ ತುಂಬುವ ಶಕ್ತಿ ಪಾತ್ರಗಳಿಗಿದೆ. ಕಥೆಗಾರ ಈ ಪಾತ್ರಗಳಿಗೆ ತಕ್ಕಂತೆ ಜೀವವನ್ನು ತುಂಬುತ್ತಾನೆ. ಬಹುಶಃ ಕಥೆಯ ರಚನೆಯಲ್ಲಿ ಪಾತ್ರಗಳಿಲ್ಲದೆ ಬರಿ ಘಟನೆಯನ್ನು ಪ್ರಧಾನವಾಗಿರಿಸಿಕೊಂಡ ಕಥೆ ಅಷ್ಟೊಂದು ಪರಿಣಾಮಕಾರಿ ಯಾಗಿರಲಿಕ್ಕಿಲ್ಲವೆನಿಸುತ್ತದೆ. ನಮ್ಮ ಹಿಂದಿನ ಬರಹಗಾರರನ್ನು ಗಮನಿಸಿದಾಗ ಒಬ್ಬೊಬ್ಬರಿಂದ ಒಂದೊಂದು ಪಾತ್ರಗಳು ಸೃಷ್ಟಿಗೊಂಡು ಅವುಗಳು ಇಂದಿಗೂ ಜನಮನದಲ್ಲಿ ಅಚ್ಚಳಿಯದೆ ನಿಂತಿವೆ. ಉದಾಹರಣೆಗೆ ದೇವನೂರ ಮಹಾದೇವರ ಅಮಸ ಮತ್ತು ಸಾಕವ್ವ, ಕಾರಂತರ ಚೋಮ, ಕುವೆಂಪು ಅವರ ಹೂವಯ್ಯ ಮುಂತದ ಪಾತ್ರಗಳನ್ನು ಗಮನಿಸಬಹುದು. ಆಯಾ ಕಥೆಗಾರನ ವಿಚಾರಗಳು, ಭಾವನೆಗಳು, ಅವನು ವಿವಿಧ ವಿಷಯಗಳ ಕುರಿತು ತಳೆದಿರುವ ಧೋರಣೆಗಳನ್ನು ಅವನು ಚಿತ್ರಿಸಿದ ಪಾತ್ರಗಳ ಮೂಲಕ ಕಂಡು ಕೊಳ್ಳಬಹುದು.

ಒಟ್ಟಿನಲ್ಲಿ "ಪಾತ್ರ ಪ್ರಧಾನವಾದಾಗ ಪಾತ್ರದ ಏಳು-ಬೀಳುಗಳು ಪ್ರಮುಖವಾಗುತ್ತವೆ. ಕರಿದಾರ ಕುತ್ತಿಗೆಯಲ್ಲಿ ಸಿಕ್ಕಿಸಿಕೊಂಡು ಕುಣಿಯುವ ಗೊಂಬೆಯಂತಾಗದೆ ಪಾತ್ರಗಳು ಜೀವಂತವಾಗಿರಬೇಕು"[೪೭] ಎಂಬ ಪಿ.ವಿ.ಶಾಸ್ತ್ರೀಯವರ ಮಾತು ಪಾತ್ರ ಸೃಷ್ಟಿಯಲ್ಲಿನ ಸೂಕ್ಷ್ಮತೆಯನ್ನು ಗಮನಿಸಬಹುದು. ಪ್ರಸ್ತುತ ಕಾಲಘಟ್ಟದ ಜನರ ಜೀವನ ಕ್ರಮವನ್ನು ಹತ್ತಿರದಿಂದ ಕಂಡ ನಮ್ಮ ಹೈದರಾಬಾದ್ ಕರ್ನಾಟಕದ ಕಥೆಗಾರರು ಅವರ ನೋವು-ನಲಿವು, ಬಡತನ, ಅನಕ್ಷರತೆ, ಮೌಢ್ಯ, ಸ್ತ್ರೀ ಹಾಗೂ ದಲಿತರ ಶೋಷಣೆ ಹೀಗೆ ಬದುಕಿನ ಹಲವಾರು ಮಗ್ಗಲುಗಳನ್ನು ಪ್ರಮುಖ ಪಾತ್ರಗಳ ಮುಖಾಂತರ ಪರಿಚಯಿಸಿದ್ದಾರೆ.

ಅಸಾಮಾನ್ಯ ಪಾತ್ರಗಳನ್ನು ಸೃಷ್ಟಿಸುವಲ್ಲಿ ನಮ್ಮ ಈ ಭಾಗದ ಕಥೆಗಾರರು ಹಿಂದೆ ಬಿದ್ದಿಲ್ಲ ಎನ್ನುವುದಕ್ಕೆ ವಾಲೀಕಾರರ ಅಗಸರ ಅಂಬವ್ವ, ಜಕ್ಕವ್ವ, ಚಿತ್ರಶೇಖರ ಕಂಠಿಯವರ ಖಂದೀಲು

ಕಳಸಪ್ಪ, ಸೂಗಯ್ಯ ಹಿರೇಮಠರ ಬಸವಯ್ಯ, ಸರತಾ ಕುಸುಮಾಕರ ದೇಸಾಯಿಯವರ ಶಾಮರಾಯ, ಜಯಶೆಟ್ಟಿಯವರ ಮಿರ್ಚಿಬಾಬಾ, ಶಾಂತರಸರ ಬೆಡೇಸಾಬು, ವೆಂಕನಗೌಡ, ಜಿ.ಬಿ.ವಿಸಾಜಿಯವರ ಹೆಡ್ಮಾಸ್ತರ, ಗೀತಾ ನಾಗಭೂಷಣರ ಗಂಗಾ, ಶ್ರೀಕಾಂತ ಪಾಟಿಲರ ಸಣ್ಣಿ, ರವಿ, ಬಿ.ಟಿ.ಲಲಿತಾ ನಾಯಕರ ತೊಳಜ್ಜ, ಸಣ್ಣು, ದೇವಿ, ರಾಮಿ, ಅಂಬೆಸಂಗೆಯವರ ಸೋಮಕ್ಕ ಮುಂತಾದ ಪಾತ್ರಗಳು ಜೀವಂತ ಸಾಕ್ಷಿಯಾಗಿ ನಿಂತಿವೆ. ಇಂತಹ ನೈಜ ಪಾತ್ರ ಚಿತ್ರಣದಲ್ಲಿ. ಆ ಪಾತ್ರಗಳ ವ್ಯಕ್ತಿತ್ವವನ್ನು ಸೆರೆಹಿಡಿದು ಅದರ ಮೂಲಕ ಬದುಕಿನ ನಿಗುಢವಾಗಿದ್ದ ಸತ್ಯಗಳನ್ನು ಎಳೆ ಎಳೆಯಾಗಿ ಬಿಚ್ಚುತ್ತಾ ಹೊಗುತ್ತಾರೆ. ಇವರ ಕಥೆಗಳ ವಸ್ತುವಿನ ವೈವಿಧ್ಯತೆಯಿಂದಾಗಿ ಪಾತ್ರಗಳಲ್ಲಿಯೂ ವಿಶಿಷ್ಟತೆ ಕಂಡು ಬರುತ್ತದೆ.

ಪ್ರಸ್ತುತ ಅಧ್ಯಾಯನವು ಸ್ತ್ರೀ ಕೇಂದ್ರಿತವಾಗಿರುವುದರಿಂದ ಇಲ್ಲಿ ಸ್ತ್ರೀಪಾತ್ರಗಳು ಕಂಡು ಬಂದ ಬಗೆಯನ್ನು ಚಿತ್ರಿಸಲಾಗಿದೆ. ಹೈದರಾಬಾದ್ ಕರ್ನಾಟಕದ ಕಥಾ ಸಾಹಿತ್ಯದಲ್ಲಿ ಸ್ತ್ರೀ ಪಾತ್ರಗಳು ಪುರುಷ ಪ್ರಧಾನ ಸಮಾಜದಲ್ಲಿಯ ದಬ್ಬಾಳಿಕೆ, ಶೋಷಣೆ, ಅತ್ಯಾಚಾರ, ಅನ್ಯಾಯಗಳನ್ನು ಮೌನವಾಗಿಯೇ ಸಹಿಸಿ ಕೊಂಡು ದುರಂತದೆಡೆಗೆ ಸಾಗುವಂತಹ ಚಿತ್ರಣಗಳಿಂದ ಮೂಡಿ ಬಂದಿವೆ.

**೧) ಜಕ್ಕವ್ವ :**

ಈಕೆ ಚನ್ನಣ್ಣ ವಾಲೀಕಾರರ 'ಶುಂಭ ನಿಶುಂಭ ಮತ್ತು ಜಕ್ಕವ್ವ' ಕಥೆಯ ಧೀರ ನಾಯಕಿ. ಇವಳನ್ನು ಆಸೆ ಪಟ್ಟು ಈಕೆಯ ಗಂಡ ಮತ್ತು ತಮ್ಮನನ್ನು ಕೊಲೆ ಮಾಡಿಸಿದ ಶುಂಭ ಮತ್ತು ನಿಶುಂಭರ ರುಂಡವನ್ನು ಚಂಡಾಡಿದ ಸಾಹಸಿ ಮಹಿಳೆ. ಇಡೀ ಊರಿಗೆ ಹೆದರಿಸುವ ಶುಂಭ-ನಿಶುಂಭರೆಂದೇ ಹೆಸರಾದ ಸಿದ್ಧಪ್ಪ ಮತ್ತು ಅವನ ಮಗ ಶೇಖರಪ್ಪ ಚೆಲುವೆ ಜಕ್ಕವ್ವಳ ಮೇಲೆ ಆಸೆ ಪಟ್ಟು ಅವಳ ಗಂಡನನ್ನು ಸಾಯಿಸುತ್ತಾರೆ. ಇದ್ಯಾವುದಕ್ಕೂ ಹೆದರದ ಇವಳು ತನ್ನ ತಮ್ಮನ ಮನೆಯಲ್ಲಿ ಆಶ್ರಯ ಪಡೆದಾಗ ಅವನನ್ನು ಕೊಲ್ಲುತ್ತಾರೆ. ಇದರಿಂದ ರೊಚ್ಚಿಗೆದ್ದ ಜಕ್ಕವ್ವ ಹೊಂಚು ಹಾಕಿ ತಂದೆ ಮಗನ ರುಂಡವನ್ನು ಕತ್ತರಿಸಿ ತನ್ನ ಮೇಲಾದ ಅನ್ಯಾಯಕ್ಕೆ ಪ್ರತೀಕಾರ ತೋರುತ್ತಾಳೆ. ಸ್ತ್ರೀಯರ ಮೇಲಾಗುವ ದಬ್ಬಾಳಿಕೆಗೆ ವಾಲೀಕಾರರು ಜಕ್ಕವ್ವನ ಮಾರ್ಗ ಹಿಡಿಯಲು ಸೂಚಿಸಿದ್ದಾರೆ.

**೨) ಅಂಬವ್ವ :**

ಇವಳು 'ಅಗಸರ ಅಂಬವ್ವ ಮತ್ತವಳ ಪಂಚಾಯಿತಿ ಕಟ್ಟಿ' ಕಥೆಯ ನ್ಯಾಯ ವೈಖರಿಯ ಹೆಣ್ಣು. ಯಾವ ಕಿಡಿಗೇಡಿ ಹಾಗೂ ಗೌಡ ಕುಲಕರ್ಣಿಗಳಿಗೂ ಹೆದರದ ಧೈರ್ಯಶಾಲಿ ಮಹಿಳೆಯಾಗಿದ್ದಾಳೆ. ತನ್ನ ಮಗಳು ಕುರುಬರ ಈರಣ್ಣನೊಂದಿಗೆ ಅನೈತಿಕ ಸಂಬಂಧ ಇರಿಸಿಕೊಂಡ ಸಂಗತಿಯನ್ನು, ಊರಿನ ಕೆಲ ಪೋಲಿಗಳು ಪಂಚಾಯಿತಿ ಕಟ್ಟೆಗೆ ತಂದು ಅಂಬವ್ವನ ಮರ್ಯಾದೆ ತೆಗೆಯುವ ಹೊಂಚಿನಲ್ಲಿರುತ್ತಾರೆ. ಅವರಿಗೆ ಮುಖದ ಮೇಲೆ ಹೊಡೆದಂತೆ "ನನ್ನ ಮಗಳು

ಈರ್ಯಾನ ಮೇಲೆ ಮನಸ್ಸು ಮಾಡ್ಯಾಳಂದ್ರ ಇನ್ನ ಮುಂದ ಈರ್ಯಾನೇ ಅವಳ ಗಂಡ"[೪೭] ಎಂದು ಹೇಳಿದ ನ್ಯಾಯದ ಮಹಿಳೆ. ತಾಯಿ ತನ್ನವಳಾದರೆ ನ್ಯಾಯ ಯಾರದು? ಎನ್ನುವ ಮಾತನ್ನು ಚಾಚು ತಪ್ಪದೇ ಪಾಲಿಸಿದ ಮಹಿಳೆಯಾಗಿದ್ದಾಳೆ.

**೩) ಕಣ್ಣೆಮ್ಮ :**

ಈಕೆ ಚೆನ್ನಣ್ಣ ವಾಲೀಕಾರರ 'ಕುರುಬರ ಕಣ್ಣೆಮ್ಮ' ಕಥೆಯ ದುರಂತ ನಾಯಕಿ. ಕ್ಷುಲ್ಲಕ ಆಸೆಗಳಿಗೆ ಬಲಿಯಾಗಿ ಮನೆ ಪಕ್ಕದ ಅಂಗಡಿಯವನಾದ ನಬಿಲಾಲನೊಂದಿಗೆ ಅನೈತಿಕ ಸಂಬಂಧ ಬೆಳೆಸುತ್ತಾಳೆ. ಇದನ್ನು ಕಣ್ಣಾರೆ ಕಂಡ ಗಂಡ ಶಾಣಪ್ಪ ಗೌಡರಿಗೆ ದೂರು ಕೊಟ್ಟು ತನ್ನ ಸಾವಿಗೆ ತಾನೇ ಕಾರಣನಾಗುತ್ತಾನೆ. ಕಚ್ಚೆ ಹರುಕ ಗೌಡ ಶಾಣಪ್ಪನನ್ನು ಕೊಲ್ಲಿಸಿ, ಆ ಅಪರಾಧವನ್ನು ನಬಿಲಾಲನ ಮೇಲೆ ಹೋರಿಸಿ ಅವನನ್ನು ಜೇಲಿಗೆ ಕಳುಹಿಸಿ ಕಣ್ಣೆಮ್ಮಳನ್ನು ತಾನೇ ಇಟ್ಟುಕೊಳ್ಳುತ್ತಾನೆ. ಈ ಮಧ್ಯ ಮೊದಲೇ ಗರ್ಭಿಣಿಯಾಗಿದ್ದ ಕಣ್ಣೆಮ್ಮ ಮಗುವಿಗೆ ಜನ್ಮ ಕೊಡುತ್ತಾಳೆ. ತನ್ನ ಮತ್ತು ಕಣ್ಣೆಮ್ಮಳ ನಡುವೆ ಅಡ್ಡ ಬಂದ ಆ ಮಗುವನ್ನು ಸಹ ಗೌಡ ಕತ್ತು ಹಿಸುಕಿ ಸಾಯಿಸುತ್ತಾನೆ. ಇದರಿಂದ ದುಃಖತಪ್ತಳಾಗಿ ರೋಧಿಸುತ್ತಿರುವ ಕಣ್ಣೆಮ್ಮಳನ್ನು ಕಂಡು ಬೇಸರಗೊಂಡ ಗೌಡ ಹಿಂದೆ ಮುಂದೆ ನೋಡದೆ ಇವಳನ್ನೂ ಕತ್ತು ಹಿಸುಕಿ ಸಾಯಿಸುವ ದಾರುಣ ಚಿತ್ರಣ ಇಲ್ಲಿ ಮೂಡಿಬಂದಿದೆ. ಏನೋ ಮಾಡಲು ಹೋಗಿ ತನ್ನ ಕುಟುಂಬದೊಂದಿಗೆ ತಾನೂ ನಾಶಹೊಂದಿದ ದುರಂತ ಹೆಣ್ಣಾಗಿದ್ದಾಳೆ ಈ ಕಣ್ಣೆಮ್ಮ.

**೪) ಗಂಗಾ :**

ಇವಳು ಗೀತಾನಾಗಭೂಷಣರ 'ಅವ್ವ' ಕಥೆಯ ನಾಯಕಿ ದೇಶದಲ್ಲಿ ಕೊಳೆತು ನಾರುತ್ತಿರುವ ಸಮಾಜದ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಿ ಸೋಲೊಪ್ಪುವ ನಿಸ್ಸಾಹಾಯಕ ಸ್ತ್ರೀಯಾಗಿದ್ದಾಳೆ. ಅತ್ತ ಕುಲಕರ್ಣಿಯ ಕುತಂತ್ರಕ್ಕೆ ಜೇಲಿಗೆ ಹೋದ ಗಂಡನ ಚಿಂತೆ ಇತ್ತ ಕಾಮಲೆ ರೋಗಕ್ಕೆ ತುತ್ತಾದ ಮಗನ ದುಃಖದ ನಡುವೆ ಸೆಣಸಾಡುವ ಗಂಗಿಗೆ ಕುಲಕರ್ಣಿಯ ಕಿರುಕುಳ ಬೇರೆ ಹಿಂಸಿಸುತ್ತಿರುತ್ತದೆ. ಈ ಮೂರು ವಿಧದ ಸಂಕಟಕ್ಕೆ ಸಿಕ್ಕ ಗಂಗಿ ನಿಸ್ಸಹಾಯಕಳಾಗಿ ಬಿಡುತ್ತಾಳೆ. "ಸರಕಾರಿ ಊಟ, ಹಾಲು, ಚಹಾ ಕೊಡುತ್ತಾರೆ."[೪೮] ಎಂದು ಊರಿನ ಹಲ ಕಲವರು ಹೇಳಿದ ಮಾತು ಕೇಳಿ ಆಸ್ಪತ್ರೆಗೆ ಬಂದ ಗಂಗಾ, ಅಲ್ಲಿಯ ವ್ಯವಸ್ಥೆ ಕಂಡು ತಲ್ಲಣಿಸಿ ಹೋಗುತ್ತಾಳೆ. ದುಡ್ಡಿಲ್ಲದೆ ಏನೂ ಸಿಗುವುದಿಲ್ಲ ಎನ್ನುವ ವಾಸ್ತವಾಂಶ ತಿಳಿದು ಮಗುವಿನ ಜೀವಕ್ಕಿಂತ ತನ್ನ ಮಾನ ದೊಡ್ಡದಲ್ಲ ಎಂದರಿತು ಒಬ್ಬ ಅಪರಿಚಿತನೊಂದಿಗೆ ಕೂಡುತ್ತಾಳೆ. ಆದರೆ ದುರ್ದೈವದ ವಶಾತ್ ಆ ಮಗು ತೀರಿಕೊಳ್ಳುತ್ತದೆ. ಹೀಗೆ ಎಲ್ಲ ಕಡೆಯ ಒತ್ತಡಗಳಿಗೆ ಮಾನಸಿಕ ಹಿಂಸೆ ಅನುಭವಿಸಿದ ಗಂಗಾ, ಮತ್ತೆ ಬಂದ ಗಿರಾಕಿಯನ್ನು ಕಲ್ಲಿನಿಂದ ಹೊಡೆದು "ನನಗ ಏನಂತ ತಿಳ್ಕೋಂಡಿದೋ ನನ್ ಹಾಟ್ಯಾ!

ರೂಪೈ ಆಶಾ ತೋರಸ್ತಾನ್ ಭಾಡಕವು"[೪೯] ಎಂದು ಪ್ರತಿಭಟಿಸುವ ಮಹಿಳೆಯಾಗಿ ಮೂಡಿ ಬಂದಿದ್ದಾಳೆ.

**೫) ಗೌರೀಬಿ :**

ಚಿತ್ರಶೇಖರ ಕಂಠಿಯವರ 'ಗೌರೀಬಿ' ಕಥೆಯ ನಾಯಕಿಯಾದ ಇವಳು ತನ್ನ ಮೇಲಾದ ಅತ್ಯಾಚಾರಕ್ಕೆ ಯಾವುದೇ ಪ್ರತಿಭಟನೆ ತೋರದೆ, ಮೂಕ ವೇದನೆ ಅನುಭವಿಸುತ್ತಾಳೆ. ತನ್ನ ಗಂಡನನ್ನು ಕಳೆದುಕೊಂಡು ಅನಾಥೆಯಾದ ವಿಧವೆ ಗೌರೀಬಿ, ಬದುಕು ಸಾಗಿಸಲು ಕೆಲಸ ಅರಸುತ್ತಾ ಬಸಪ್ಪಗೌಡನ ಮನೆಗೆ ಬರುತ್ತಾಳೆ. ವಿಪರ್ಯಾಸವೆಂದರೆ ತನಗೆ ಆಶ್ರಯನೀಡಿದ ಬಸಪ್ಪ ಗೌಡನ ಮಗನಾದ ಶಿವಬಸ್ಸುವಿನಿಂದಲೇ ಬಲತ್ಕಾರಕ್ಕೊಳಗಾಗುತ್ತಾಳೆ. ತನ್ನ ಮಗನಿಗೆ ಶಿಕ್ಷಣ ನೀಡಿ ಅವನ ಭವಿಷ್ಯವನ್ನು ಉಜ್ವಲಗೊಳಿಸಬೇಕೆಂಬ ಗೌರೀಬಿಯ ಕನಸು ನುಚ್ಚುನೂರಾಗುತ್ತದೆ. ಇದರಿಂದ ಘಾಸಿಗೊಂಡ ಇವಳು ತನಗೆ ಆಶ್ರಯ ನೀಡಿದ ಗೌಡನ ಮನೆಯನ್ನು ತೊರೆಯುವುದರೊಂದಿಗೆ ತಾನು ದುಡಿದು ಸಂಪಾದಿಸಿದ ಹಣವನ್ನು ವಿಧವೆಯರ ಕಲ್ಯಾಣಕ್ಕಾಗಿ ಮುಡಿಪಾಗಿಟ್ಟು ಮುಂದಿನ ತನ್ನ ಬದುಕನ್ನರಸುತ್ತಾ ಹೊರಟು ಹೋಗುತ್ತಾಳೆ. ತನಗಾದ ಅನ್ಯಾಯಕ್ಕೆ ಯಾವುದೇ ಪ್ರತಿಭಟನೆ ತೋರದ ಗೌರೀಬಿ ತನ್ನ ಬದುಕಿನ ದುರಂತದೆಡೆಗೆ ಹೆಜ್ಜೆಯಿಡುತ್ತಾಳೆ.

**೬) ಸೋಮಕ್ಕ :**

ಇವಳು ಸುಬ್ಬಣ್ಣ ಅಂಬೆಸಂಗೆಯವರ 'ಸೋಮಕ್ಕನ ಕಥೆ ಹೀಗಾಯಿತೆ?' ಕಥೆಯ ನಾಯಕಿ. ಸೋಮಕ್ಕ ಗಂಡನಿಗಿಂತಲೂ ಸಂಸಾರದಲ್ಲಿ ಚಂಚಲ ಸ್ವಭಾವದವಳು. ಇವಳ ಕುಟುಂಬವು ಆದರ್ಶಮಯವಾಗಿತ್ತು. ಮಕ್ಕಳಿಲ್ಲವೆಂಬ ಒಂದೇ ಕಾರಣಕ್ಕಾಗಿ ಸೋರಗುತ್ತಿದ್ದಳು. ವಿವಿಧ ರೀತಿಯ ಹರಕೆಗಳನ್ನು ಮಾಡಿದರೆ ಮಕ್ಕಳಾಗುತ್ತವೆ ಎಂಬ ಪ್ರಯತ್ನವೂ ಫಲಿಸದಿದ್ದಾಗ, ಇದಕ್ಕೆ ಇನ್ನೊಂದು ಮದುವೆಯೇ ಪರಿಹಾರವೆಂದು ತಿಳಿದ ಸೋಮಕ್ಕ, ಮತ್ತೊಬ್ಬ ಸವತಿಯನ್ನು ತಾನೇ ಕರೆದುಕೊಳ್ಳುತ್ತಾಳೆ. ಇದರಿಂದ ಸೋಮಕ್ಕನ ಸ್ವಭಾವ ಎಂತಹ ಸರಳ ಹಾಗೂ ತ್ಯಾಗದಿಂದ ಕೂಡಿದ್ದು ಎಂದು ತಿಳಿದುಬರುತ್ತದೆ.

ಮುಂದೆ ಕೆಲವೇ ದಿನಗಳಲ್ಲಿ ಪತಿ ತೀರಿಕೊಳ್ಳುತ್ತಾನೆ ನಂತರ, ಸೋಮಕ್ಕ ಮಾಡಿದ ಸಹಾಯಕ್ಕೆ ಪ್ರತಿಯಾಗಿ ಎಂಬಂತೆ ಸವತಿ, ಸೋಮಕ್ಕಳನ್ನೇ ಪುಸಲಾಯಿಸಿ ಔಷಧಿ ಹಾಕಿಸಿ ಹುಚ್ಚಳನ್ನಾಗಿ ಮಾಡುವುದರೊಂದಿಗೆ ಸವತಿಯ ಗುಣ ಎಂತಹದು ಎಂದು ತೋರಿಸಿಕೊಟ್ಟಿದ್ದಾಳೆ. ಹೀಗೆ ಅಂಬೆಸಂಗೆಯವರು ಸೋಮಕ್ಕಳನ್ನು ಒಂದು ಒಳ್ಳೆಯ ಪಾತ್ರವೆಂದು ತಿಳಿಸಿ, ಆಕೆಯಲ್ಲಿ ಹುದುಗಿದ ಒಳ್ಳೆಯ ಗುಣಗಳನ್ನು ತಿಳಿಸುವ ಪಾತ್ರವಾಗಿ ಜೀವಂತಿಕೆಯಿಂದ ಚಿತ್ರಿಸಿದ್ದಾರೆ.

೭) ಸಣ್ಣಿ :

'ಮೂಡಲದಾಗ ಕೆಂಪ ರಾಶಿ ಮೂಡಿತ್ತು' ಕಥೆಯ ಕೇಂದ್ರ ಪಾತ್ರ ಸಣ್ಣಿಯಾಗಿದ್ದಾಳೆ. ಈಕೆ ಕಲ್ಲಿಗೂ ಮಾತಾಡ್ಸಿ ಊರಿಗೆ ನಗೆಸುವಂಥ ಸ್ವಭಾವದವಳು. ಬಸಪ್ಪಜ್ಜನ ಏಳು ಜನ ಗಂಡು ಮಕ್ಕಳಲ್ಲಿ ಕೊನೆಯವನಾದ ಶಾಂತಪ್ಪನ ಹೆಂಡತಿ ಸಣ್ಣಿ. ಈಕೆಯ ಮೊದಲಿನ ಹೆಸರು ಶಾಂತಾಬಾಯಿ. ಆದರೆ ಮುಂದೆ ಬಸಪ್ಪಜ್ಜನ ಸಣ್ಣ ಸೊಸೆಯಾಗಿದ್ದರಿಂದ 'ಸಣ್ಣಿ' ಎಂದು ಕರೆಯುತ್ತಿದ್ದರು. ಮದುವೆಯಾದ ಕೆಲವು ದಿನಗಳಲ್ಲಿ ಗಂಡ ಶಾಂತಪ್ಪ ಸಾಯುತ್ತಾನೆ. ಅಂದಿನಿಂದ ಕುಟುಂಬದ ಜವಾಬ್ದಾರಿ ಇವಲ ಮೇಲೆ ಬೀಳುತ್ತದೆ. ತನ್ನ ಪಾಲಿನ ಹೊಲವನ್ನು ಅಳಿಯನಿಗೆ (ತನ್ನ ಮಗಳ ಗಂಡ) ಕೊಡುವುದಾಗಿ ಹೇಳಿ ಮಗಳ ಬಸವ್ವನ ವಿವಾಹ ಕೂಡ ಮಾಡುತ್ತಾಳೆ. ಆದರೆ ಆಕೆಯ ಗಂಡ ಸತ್ತ ಮೇಲೆ ದಾಯಾದಿಗಳ ಮನಸ್ಸು ಬದಲಾಗಿ ಇವಳ ಭೂಮಿಯ ಮೇಲೆ ಕಬ್ಜಾ ಹಾಕಿ ಅಳಿಯನನ್ನು ಓಡಿಸಿ ಬಿಡುತ್ತಾನೆ. ಊರಿನ ಗೌಡ, ಕುಲಕರ್ಣಿಗಳ ಮಾತನ್ನು ಒಪ್ಪದ ದಾಯಾದಿಗಳಿಗೆ, ಸಣ್ಣಿ ಧೈರ್ಯವಾಗಿ ಹೋಲದಲ್ಲಿ ನಿಂತು ನೇಗಿಲು ಹೊಡೆಯುತ್ತಾಳೆ. ಪದಮಣ್ಣ ಬಂದು ಹಲವು ಕಷ್ಟಗಳಿಗೆ ಎದೆ ಒಡ್ಡಿ ನಿಂತು ಹೋರಾಡಿ ಜಯಶಾಲಿಯಾಗುತ್ತಾಳೆ. ಇಲ್ಲಿಯ ಸಣ್ಣಿಯ ಪಾತ್ರವನ್ನು ಶ್ರೀಕಾಂತ ಪಾಟೀಲರು ಓದುಗರ ಮೆಚ್ಚುಗೆಯನ್ನು ಗಳಿಸುವಂತೆ ಶಕ್ತಿಯುತವಾಗಿ ಚಿತ್ರಿಸಿದ್ದಾರೆ.

೮) ಬಾಬಮ್ಮ :

ಶಿವಕುಮಾರ ನಾಗವಾರರ 'ಬಾಬಡಿ' ಕಥೆಯ ಕೇಂದ್ರ ಪಾತ್ರ ಇವಳದು. ಕಥೆಯನ್ನು ಓದುವಾಗ ಓದುಗರಿಗೆ ಈ ಪಾತ್ರದ ಮೇಲೆ ಪ್ರೀತಿ, ಮರುಕು ಹುಟ್ಟುತ್ತದೆ. ಮಧ್ಯಮ ವಯಸ್ಸಿನ ಮಹಿಳೆಯಾದ ಬಾಬಮ್ಮ ಸನ್ಮುಕಯ್ಯನ ಮೊದಲನೆಯ ಹೆಂಡತಿ. ಮಕ್ಕಳಿಲ್ಲದ ಕಾರಣ ಇವಳು ಮಾನಸಿಕವಾಗಿ ನೋವನ್ನು ಅನುಭವಿಸುತ್ತಾ ಸತತವಾಗಿ ಮಲಗಿದ್ದು ಕಂಡು ಬರುತ್ತದೆ. ಒಮ್ಮೆ ಇದ್ದಕ್ಕಿದ್ದ ಹಾಗೆ ಹೊಲಕ್ಕೆ ಹೋಗಿ ಕಳೆಯನ್ನು ಕಟಾವು ಮಾಡಲು ಮುಂದಾಗುತ್ತಾಳೆ. ಹೊಲದಲ್ಲಿ ಸಮೃದ್ಧ ಬೆಳೆಯ ಸಾಲುಗಳು ಬಂದರೂ ಸಹ, ಮಳೆ ಹೆಚ್ಚಾಗಿದ್ದರಿಂದ (ಅತೀ ವೃಷ್ಟಿ) ಹೆಚ್ಚಿನ ಕಾಳುಗಳು ಬಾಬಡಿ ಕಾಳುಗಳೇ ಬಂದಿದ್ದರಿಂದ ಜನರು ಆಕೆಯನ್ನು ಹಾಸ್ಯವಾಗಿ 'ಬಾಬಡಿ' ಎಂದು ಕರೆಯುತ್ತಾರೆ. ಅದೇ ಮುಂದೆ ಶಾಪವೆಂಬಂತೆ ಬದುಕಿನುದ್ದಕ್ಕೂ ಬಂಜೆಯಾಗಿಯೇ ಇರುತ್ತಾಳೆ. ಅಂದರೆ ಇಲ್ಲಿ ಬಂಜೆತನ ಎಂಬುದರ ಅರ್ಥವನ್ನು ಒಂದು ಕಾಳಿಗೆ ಹೊಲಿಸಿ, ಬಾಬಮ್ಮಳ ಬಂಜೆತನವನ್ನು ತಿಳಿಸಿದ್ದಾರೆ. ಸಮಾಜದಲ್ಲಿ ಒಂದು ಹೆಣ್ಣು ಬಂಜೆಯಾಗಿದ್ದರೆ ಆಕೆಯನ್ನು ಯಾವ ರೀತಿ ಕೀಳಾಗಿ ಕಾಣುತ್ತಾರೆ ಎಂಬ ತತ್ವವನ್ನು ಅಡಗಿಸಿಟ್ಟಿದ್ದಾರೆ.

೯) ರಾಮಿ :

'ಲೂಟಿ' ಕಥೆಯ ದುರಂತ ನಾಯಕಿ. ಈಕೆ ಆರಂಭದಲ್ಲೇ ಗಂಡ ಅಪಘಾತಕ್ಕೀಡಾಗಿ ಹಾಸಿಗೆ ಹಿಡಿದಿದ್ದಾನೆ. ಮನೆ ಮತ್ತು ಮಕ್ಕಳ ಒಡಲಿನ ಜವಾಬ್ದಾರಿಯನ್ನು ನಿಭಾಯಿಸಲು ಕಾಡಿಗೆ

ಕಟ್ಟಿಗೆ ತರಲು ಹೋದ ಈಕೆ ಕಟ್ಟಿಗೆ ಕಡಿದಿದ್ದೇ ಅಪರಾಧ ಎನ್ನುವ ಕಾಮುಕರಿಂದ ತನ್ನ ಮಾನ ಮತ್ತು ಬೆಳ್ಳಿ ಗೆಜ್ಜೆಗಳನ್ನೂ ಕಳೆದುಕೊಳ್ಳುತ್ತಾಳೆ.

ಕಾಡು ಮೇಡು ಅಲೆದು ಕಟ್ಟಿಗೆ ಕಡೆದು ಕಷ್ಟಪಟ್ಟು ಜೀವನ ಸಾಗಿಸುವ ಲಂಬಾಣಿ ಹೆಚ್ಚು ಮಕ್ಕಳ ಬದುಕು, ಅರಣ್ಯದಲ್ಲಿ ಕಾಡು ಪ್ರಾಣಿಗಳಲ್ಲದೆ ಕಾಮುಕ ಪುರುಷರಿಂದ ಸಂಕಷ್ಟಕ್ಕೀಡಾಗುವ ನಗ್ನ ಸತ್ಯದ ಪ್ರತೀಕವಾಗಿ 'ರಾಮಿ' ಚಿತ್ರಿತಗೊಂಡಿದ್ದಾಳೆ. ಆದರೆ ತನಗಾದ ಅತ್ಯಾಚಾರಕ್ಕೆ ಪ್ರತಿಯಾಗಿ ಬದುಕಿಗೆ ವಿಮುಖವಾಗದೆ ಪ್ರತಿಕಾರದ ಗುರುತು ಹಾಕುತ್ತಾಳೆ. "ನೀವು ಯಾವ ಗವಿಯಾಗ ಹೋಗಿ ಅವಿತುಕೊಂಡ್ರು ಬಿಡಂಗಿಲ್ರೋ."[೫೦] ಎಂದು ಗರ್ಜಿಸುವ ಈಕೆ ಬಂಡೇಳುವ ಸ್ವಭಾವದವಳಾಗಿದ್ದಾಳೆ. ಹೀಗೆ ಸಿಡಿದೆದ್ದಾಗ ಮಾತ್ರ ಹೆಣ್ಣಿನ ಮೇಲಾಗುತ್ತಿರುವ ಸರ್ವ ವಿಧದ ಶೋಷಣೆ ಕಡಿಮೆಯಾಗಬಲ್ಲವು ಎಂಬ ಸಂದೇಶದ ಪ್ರತೀಕವಾಗಿದ್ದಾಳೆ.

೧೦) ದೇವಿ :

'ಹಬ್ಬ ಮತ್ತು ಬಲಿ' ಕಥಾ ಸಂಕಲನದ 'ಕೊಲೆ' ಕಥೆಯಲ್ಲಿ ತನ್ನ ಕುಟುಂಬಕ್ಕೆ ಕಂಡಕ ಪ್ರಾಯನಾಗಿದ್ದ ಶೆಟ್ಟಿಯ ಕಿರುಕುಳ ಸಹಿಸದೆ ಅವನನ್ನು ಕೊಂದು ಬಾಲಾಪರಾಧಿಯಾಗಿ ಜೈಲು ಶಿಕ್ಷೆ ಅನುಭವಿಸುತ್ತಿರುವ ಹುಡುಗಿ ದೇವಿ. ತನ್ನ ತಂದೆಯ ಸಾವಿಗೆ ಕಾರಣನಾದ ಜಾಲಶೆಟ್ಟಿಯ ದೌರ್ಜನ್ಯದ ಪ್ರತಿಭಟಿಸುವ ಬಾಲಕಿ ಗಿರಣಿಯಲ್ಲಿ ಹಿಟ್ಟು ಹಾಕಿಸಿಕೊಳ್ಳಲು ಸರದಿಯಲ್ಲಿ ನಿಂತಾಗ ಶೆಟ್ಟಿ ನೇರವಾಗಿ ಒಳನುಗ್ಗಿದ್ದನ್ನು ವಿರೋಧಿಸುವ ಮತ್ತು ಅವನ ದೌರ್ಜನ್ಯದ ವಿರುದ್ಧ ಪೋಲಿಸ ಕಾಂಪ್ಲೆಂಟ್ ಕೊಡಲು ಹೋಗುವ ದೇವಿ, ಧೈರ್ಯದಿಂದ ಶೋಷಣೆಯನ್ನು ವಿರೋಧಿಸುತ್ತಾಳೆ. ಇನ್ನು ಮುಂದುವರೆದು ತನ್ನ ರಾಗಿಯನ್ನು ಮೋರಿಗೆ ಚೆಲ್ಲಿದ ಶೆಟ್ಟಿಗೆ "ನೀವು ಚೆಲ್ಲಿದಷ್ಟು ರಾಗಿ ಕೊಡ್ರಿ"[೫೧] ಎಂದು ದಿಟ್ಟತನದಿಂದ ಕೇಳುತ್ತಾಳೆ. ಕೊನೆಗೆ ತನಗೆ ನ್ಯಾಯ ಸಿಗದಿದ್ದಾಗ ಮಾನಸಿಕವಾಗಿ ನೊಂದಿದ್ದ ಇವಳು ಚಾಕುವಿನಿಂದ ಶೆಟ್ಟಿಯನ್ನು ಇರಿದು ಕೊಲ್ಲುತ್ತಾಳೆ. "ರಕ್ತ ಬೀಜಾಸುರನ ಸಂತತಿಯನ್ನೇ ನಿರ್ಮೂಲನ ಮಾಡಿದೆನೆಂಬ ಭಾಸವಾಗುವುದು ಕಂಡುಬರುತ್ತದೆ. ಲಲಿತಾ ನಾಯಕರು ಈಕೆಯ ಪಾತ್ರವನ್ನು ಓದುವಾಗ ಮೈನವಿರೇಳುವಂತೆ ಚಿತ್ರಿಸಿದ್ದಾರೆ.

೧೧) ಮಂಜವ್ವ

ಇವಳು ಚಿತ್ರಶೇಖರ ಕಂಠಿಯವರ 'ಮಂಜವ್ವ ನಂಜು ಕಾರಿದಾಗ' ಕಥೆಯ ವೀರ ಮಹಿಳೆಯಾಗಿ ಎದ್ದು ಕಾಣುತ್ತಾಳೆ. ಸಾಹುಕಾರನನ್ನು ಚೂರಿಯಿಂದ ಹೊಡೆಯುವುದರ ಮೂಲಕ ಇಡೀ ವ್ಯವಸ್ಥೆಗೆ ಸವಾಲೆಸೆಯುತ್ತಾಳೆ. ಇಲ್ಲಿ ಈ ಸಿಟ್ಟು ಮಂಜಮ್ಮಳದು ಮಾತ್ರ ಆಗಿರದೇ ನೋವುಂಡವರ ಶೋಷಣೆಗೆ ಒಳಗಾಗಿ ಅಸಹಾಯಕರಾದವರ ಸಿಟ್ಟೇ ಇಲ್ಲಿ ಒಟ್ಟಾಗಿ ಮಂಜಮ್ಮಳ

ಸಿಟ್ಟಿನ ರೂಪದಲ್ಲಿ ಸ್ಫೋಟಿಸುತ್ತದೆ. ನೊಂದ, ಬೆಂದ, ಹಸಿದ ಜನ ಕೊನೆಗೆ ಏನನ್ನಾದರೂ ಮಾಡಬಲ್ಲರು ಎನ್ನುವುದಕ್ಕೆ ಮಂಜಮ್ಮನ ಈ ಕೊನೆಯ ಗಳಿಗೆಯ ನಿಲುವುಗಳು ಮನದಟ್ಟು ಮಾಡಬಲ್ಲವು. ಏಕೆಂದರೆ ಪ್ರತಿಯೊಬ್ಬರ ಸಹನೆಗೂ ಒಂದು ಮಿತಿಯನ್ನುವಂತಹದು ಇದೆ. ಮಿತಿಯನ್ನು ಕಳೆದುಕೊಂಡರೆ ಮನುಷ್ಯ ಅಸಮಾನತೆ ವಿರುದ್ಧ ಪ್ರತಿಭಟಿಸೋದು ಸಹಜ. ಲೇಖಕರು ಮಂಜಮ್ಮಳ ಪಾತ್ರವನ್ನು ಸೃಷ್ಟಿಸುವುದರ ಮೂಲಕ ಹೋರಾಟದ ಮನೋಭಾವನೆಯನ್ನು ಓದುಗರ ಮನದಲ್ಲಿ ತುಂಬಲು ಪ್ರಯತ್ನಿಸುತ್ತಾರೆ. ಮಂಜಮ್ಮ ಮೊದಲು ಇಲ್ಲಿ ಅನುಕಂಪಕ್ಕೆ ಪಾತ್ರಳಾದರೆ ಕೊನೆಯ ಗಳಿಗೆಯಲ್ಲಿ ವೀರ ಮಹಿಳೆಯಾಗಿ ಕಾಣುತ್ತಾಳೆ. ಉಳಿದ ಮಹಿಳೆಯರಿಗೆ ಆದರ್ಶಳಾಗಿ ನಿಲ್ಲುತ್ತಾಳೆ.

**೧೨) ಅಕ್ಕಮ್ಮ**

ಅಮರೇಶ ನುಗಡೋಣಿ ಅವರ 'ಮಣ್ಣು ಸೇರಿತು ಬೀಜ' ಕಥಾ ಸಂಕಲನದ ಹೊತ್ತು 'ಮೂಡುವ ಸಮಯ' ಕತೆಯ ಅಕ್ಕಮ್ಮ ಗಂಡನನ್ನೇ ದಿಕ್ಕರಿಸುತ್ತಾಳೆ. ಮೇಲ್ವರ್ಗದ ಸ್ತ್ರೀಪಾತ್ರವೊಂದು ಪುರುಷ ಪ್ರಧಾನ ವ್ಯವಸ್ಥೆಯನ್ನು ತನ್ನದೆ ಆದ ರೀತಿಯಲ್ಲಿ ಪ್ರತಿಫಲಿಸುವುದು ಬೆಚ್ಚಿಬೀಳಿಸುವಂತಹದು. ಗಂಡನ ನಡತೆಯಿಂದ ಬೇಸತ್ತ ಅಕ್ಕಮ್ಮ ಮಾದಿಗ ಕುಲದ ಲಿಂಗನನ್ನು ಮೋಹಿಸುತ್ತಾಳೆ ಮತ್ತು ಮನೆಯ ಆಳು ಭೀಮನನ್ನು ಸೆಳೆಯಲು ಯತ್ನಿಸುತ್ತಾಳೆ. ಕೊನೆಗೆ ಲಿಂಗನ ಮಗನ ಜೊತೆ ಲೈಂಗಿಕ ಸಂಬಂಧವನ್ನು ಹೊಂದುವುದರ ಮೂಲಕ ಸೇಡು ತೀರಿಸಿಕೊಳ್ಳುತ್ತಾಳೆ. ಲೈಂಗಿಕ ಸಂಬಂಧದ ವಿಚಾರದಲ್ಲಿ ಮೇಲ್ವರ್ಗದ ಪುರುಷ ಪಾತ್ರಗಳು ಕೆಳಜಾತಿಯ ಸ್ತ್ರೀಯರತ್ತ ಚಲಿಸುವುದು ಸಹಜ ಆದರೆ ಮೇಲ್ಜಾತಿಯ ಸ್ತ್ರೀ ಪಾತ್ರವು ಕೆಳಜಾತಿಯ ಪುರುಷರತ್ತ ಚಲಿಸುವುದು ಪ್ರತಿಭಟನೆಯ ಸಂಕೇತವಾಗಿದೆ.

**೧೩) ದೇವಿ**

'ಕುಡಿಬಂದ ದೀಪಗಳು' ಕಥೆಯಲ್ಲಿ ದೇವಿಯ ಪಾತ್ರ ಮನೋರೋಗಿಯಂತೆ ಕಂಡರು ಕೊನೆಯಲ್ಲಿ ಮತಂಗಬೆಟ್ಟ ಹತ್ತಿ ಗವಿಯನ್ನು ಹೊಕ್ಕು ಪರಿಪೂರ್ಣತೆಯತ್ತ ಸಾಗುವುದು ವಿಶೇಷವೆನಿಸುತ್ತದೆ.

**೧೪) ಮಲ್ಲವ್ವ**

ಚಿತ್ರಶೇಖರ ಕಂಠಿ ಅವರ 'ಬೆಳ್ಳಿ ಚುಕ್ಕೆ' ಕಥೆಯಲ್ಲಿ ಕಾರ್ಮಿಕ ಕುಟುಂಬಕ್ಕೆ ಸೇರಿದ ಮಲ್ಲವ್ವ ಬೇರೆ ಜಾತಿಯ ಸಿದ್ದಪ್ಪನಲ್ಲಿ ಅನುರಕ್ತಳಾಗುತ್ತಾಳೆ. "ಹೀಂಗೇ ಏಸ್ ದಿನ ನಡ್ಯಾಂಗದಾ? ನೀ ಏನರ ಇಚಾರ ಮಾಡಿದ್ಯಾ ಹ್ಯಾಂಗ್ ನಮ್ಮಪ್ಪ ನನಗ ಗಂಡ ನೋಡ್ಯಾನ. ನನಗರ ತಟಕನೂ ಮನಸ್ಸಿಲ್ಲ. ನಾನರ ನಿನ್ನ ಮ್ಯಾಗೆ ಥ್ಯಾಸ್ ಇಟ್ಟೇನಿ"[೨೨] ಎಂದಾಗ ಸಿದ್ಧಪ್ಪ ಇಬ್ಬರೂ ಕೂಡಿ

ಮುಂಬೈಗೆ ಓಡಿ ಹೋಗುವ ವಿಚಾರ ಹೇಳುತ್ತಾನೆ. "ನೀ ಖಾತ್ರಿ ಬರ್ತೀನಂದ್ರ ನಾನೂ ತಯಾರಾತೀನಿ"[೫೩] ಎಂದು ಒಪ್ಪಿಗೆ ನೀಡುತ್ತಾಳೆ. ಬೆಳ್ಳಿಚುಕ್ಕಿ ಮೂಡುವ ಸಮಯಕ್ಕೆ ಬರುವ ಸೂಚನೆ ನೀಡಿದ್ದ ಸಿದ್ಧಪ್ಪ ಇವಳು ತಯ್ಯಾರಾಗಿ ಹೋದರೂ ಬೆಳ್ಳಿ ಚುಕ್ಕಿ ಮೂಡಿ ಮಿಂಚಿ ಮರೆಯಾಗುವುದು. ನೋಡಿದಳೇ ವಿನಃ ತನ್ನ ಬಾಳ ಚಂದಿರ ಬರಲೇ ಇಲ್ಲ. ಸಿದ್ಧಪ್ಪನಿಗೆ ಹಿಡಿ ಶಾಪ ಹಾಕಿ ತನ್ನ ತಂದೆ ನೋಡಿದ ಗಂಡಿನೊಂದಿಗೆ ಮದುವೆಯಾಗಲು ಸಿದ್ಧಳಾಗುತ್ತಾಳೆ. ಇಲ್ಲಿ ಮಲ್ಲವ್ವ ಇನ್ನೂ ಮಾಡಬೇಕಿದ್ದ ತಪ್ಪನ್ನು ಸಿದ್ಧಪ್ಪನ ಅನುಪಸ್ಥಿತಿಯಿಂದ ತಪ್ಪಿ ಹೋಗುತ್ತದೆ.

**೧೫) ಸರಳಾ**

ಇವಳು ಚಿತ್ರಶೇಖರ ಕಂಠಿ ಅವರ 'ಅತೃಪ್ತ' ಕಥೆಯ ದುರಂತ ನಾಯಕಿ ದಾಂಪತ್ಯದಲ್ಲಿ ನೆಮ್ಮದಿ ಕಾಣದೆ ಮನಸಿಕವಾಗಿ ಕೊರಗುತ್ತಾಳೆ. ಇವಳ ಪತಿಯಾದ ಸೋಮಣ್ಣ ದುಶ್ಚಟಗಳಿಗೆ ಬಲಿಯಾಗಿ ಇವಳ ಸಂಬಳಕ್ಕೆ ಕೈ ಹಾಕುತ್ತಾನೆ. ಇದರಿಂದ ಇಬ್ಬರ ನಡುವೆ ಜಗಳ, ಮನಸ್ತಾಪಗಳು ಬರುವುದು ಸಾಮಾನ್ಯವಾಗಿ ಬಿಡುತ್ತದೆ. ಗಂಡನ ದುರ್ನಡತೆಯಿಂದ ಹಾಗೂ ಸಂಸಾರದ ಜವಾಬ್ದಾರಿಯ ಹೊರೆ ತನ್ನ ಮೇಲೆ ಬಿದ್ದುದಕ್ಕೆ ಅವನಿಗೆ ದುಡ್ಡು ಕೊಡುವುದನ್ನು ಬಿಡುತ್ತಾಳೆ. ಇದರಿಂದ ರೊಚ್ಚಿಗೆದ್ದು ಅವಳಿಗೆ ಮಾನಸಿಕ ಹಿಂಸೆ ಕೊಡಲು ಸುರು ಮಾಡುತ್ತಾನೆ. ಆಫೀಸಿನಿಂದ ಲೇಟಾಗಿ ಬಂದ ಹೆಂಡತಿಯನ್ನು ಕಂಡು ಕೆಂಡ ಮಂಡಲನಾಗಿ ಇಷ್ಟೊತ್ತು ಯಾವನ ಜೊತೆಗೆ ಹೋಗಿದ್ದೆ? ಎಂದು ಕೇಳುತ್ತಾನೆ. ಅವಳ ಶೀಲವನ್ನು ಶಂಕಿಸುತ್ತಾನೆ. ನರಸತ್ತ ಕುದುರೆಯೊಂದಿಗೆ ಬಾಳುತ್ತಿರುವುದಕ್ಕೆ ಅರ್ಥವೇ ಇಲ್ಲ ಎಂದು ತಿಳಿದುಕೊಂಡು ತನ್ನ ಗೆಳೆಯ ರಾಜನ್ ಜೊತೆಗೆ ಇರಲು ನಿಶ್ಚಯಿಸುತ್ತಾಳೆ.

**೧೬) ಕವಿತಾ**

ಚಿತ್ರಶೇಖರ ಕಂಠಿ ಅವರ 'ಪಶ್ಚಾತ್ತಾಪ' ಕತೆಯ ನಾಯಕಿ ಹಣಕ್ಕಾಗಿ ತನ್ನ ಜೀವನವನ್ನು ತಾನೇ ಹಾಳು ಮಾಡಿಕೊಳ್ಳುತ್ತಾಳೆ ಸಾಧಾರಣ ಹುದ್ದೆಯಲ್ಲಿರುವ ಕಾರ್ತಿಕನನ್ನು ನಿರಾಕರಿಸಿ ಶ್ರೀಮಂತ ಯುವಕನಾದ ರವಿಶಂಕರನನ್ನು ಮದುವೆಯಾಗಿ ಮಾನಸಿಕವಾಗಿ ಹಿಂಸೆ ಅನುಭವಿಸುತ್ತಾಳೆ. ಅವಳ ಹತ್ತಿರ ಕಾರು, ಬಂಗಲೆ, ಎಲ್ಲಾ ಇದ್ದರೂ ಗಂಡನ ಪ್ರೀತಿ ಇರುವುದಿಲ್ಲ. ತನ್ನ ಗೆಳತಿ ಸೌಮ್ಯ ಅಷ್ಟು ಶ್ರೀಮಂತಳಿಲ್ಲದಿದ್ದರೂ ಎಷ್ಟು ಚೆನ್ನಾಗಿ ಇದ್ದಾಳಲ್ಲ ಎಂದು ಯೋಚಿಸುತ್ತಾಳೆ. ಆಕೆಗೆ ತಾನು ನಿರಾಕರಿಸಿದ ಕಾರ್ತಿಕ ಸೌಮ್ಯಳ ಗಂಡ ಎಂದು ತಿಳಿದಾಗ ಪಶ್ಚಾತ್ತಾಪ ಪಡುತ್ತಾಳೆ.

**೧೭) ಸುನಂದಾ**

ಚಿತ್ರಶೇಖರ ಕಂಠಿ ಅವರ 'ತನ್ನದಲ್ಲದ ಬದುಕಿಗಾಗಿ' ಕಥೆಯ ನಾಯಕಿ ಸುನಂದಾ ಒಂದು ಪತಂಗವಿದ್ದಂತೆ, ಪತಂಗ ದೀಪಕ್ಕಾಗಿ ತನ್ನ ತಾನೇ ಸುಟ್ಟುಕೊಂಡು ಸಾಯುವಂತೆ ಸುನಂದ

ಕುಟುಂಬ ಎಂಬ ಬೆಂಕಿಯೊಂದಿಗೆ ಇರಬಯಸಿ ಅಣ್ಣ ಅತ್ತಿಗೆ, ತಮ್ಮ ತಂಗಿ ಚಿಕ್ಕಪ್ಪ ಎಂಬ ಕುಲುಮೆಯಲ್ಲಿ ಬಿದ್ದು ಒದ್ದಾಡಿ ಸಾಯುವ ದುರ್ದೈವಿ ಮಹಿಳೆಯಾಗಿ ಮೂಡಿಬಂದಿದ್ದಾಳೆ. ಅವಳ ದುಡಿಮೆಯ ಮೇಲೆ ಅಷ್ಟೇ ಅಲ್ಲ, ಹೆಣದ ಮೇಲೆಯೂ ಸೌಧೆ ಕಟ್ಟಿಕೊಳ್ಳಲು ಹೆಣಗಾಡುವ ರಣಹದ್ದುಗಳ ಮಧ್ಯ ಸುನಂದಾ ನಿಸ್ಸಹಾಯಕಳಾಗಿ ಬಿಟ್ಟಿದ್ದಾಳೆ. ಅಣ್ಣ ಅತ್ತಿಗೆಯರಿಗಾಗಿಯೇ ತನ್ನ ದುಡಿಮೆ ಅಣ್ಣನ ಸ್ನೇಹಿತನಿಗಾಗಿಯೇ ತನ್ನ ದೇಹ ಮುಡುಪಾಗಿಟ್ಟಂತಾಯಿತಲ್ಲ ಎಂದು ಆತ್ಮಹತ್ಯೆ ಮಾಡಿಕೊಂಡ ಸುನಂದಾಳ ಬದುಕಿನ ಧಾರಣ ಚಿತ್ರಣ ಮನ ಮಿಡಿಯುವಂತಿದೆ.

೧೮) **ಶಾಮಲಾ**

ರಾಜಶೇಖರ ಹತಗುಂದಿಯವರ 'ಮರೀಚಿಕೆ' ಕಥೆಯ ಶಾಮಲಾ ಜೀವನ ಪೂರ್ತಿ ಏಕಾಂಗಿಯಾಗಿಯೇ ಬದುಕುವ ಚಿತ್ರಣ ಮನಕರಗುವಂತಿದೆ. ಇದಕ್ಕೆ ಕಾರಣ ಹೈಸ್ಕೂಲ್ ಶಿಕ್ಷಕನೊಂದಿಗೆ ಆಕೆಯ ತಂದೆ ಮಾಡಿದ ಮದುವೆಯೇ ಎನಿಸುತ್ತದೆ. ಮುಲ್ಕಿ ಪರೀಕ್ಷೆ ಮುಗಿಸಿದ ಚಿಕ್ಕ ಹುಡುಗಿ ವಿಧವೆಯಾಗಿ ಮುಂದೆ ಓದಿ ವಿಶ್ವವಿದ್ಯಾಲಯದ ಅಧ್ಯಾಪಕಿಯಾಗಿ ಸಹ ಜೋಡಿ ಆರಿಸಿಕೊಂಡ ಶಾಮಲಾಗೆ ವಿಧಿ ಮತ್ತೆ ದಾರಿ ತಪ್ಪಿಸುವ ನಾಟಕ ಆಡಿದ್ದು ಆಕೆಯ ದುರಂತವಾಗಿದೆ. ಟಿ.ಬಿ.ಯಿಂದಾಗಿ ಆಕಸ್ಮಿಕವಾಗಿ ಆಕೆಯ ಗಂಡ ಸಾವಿಗೀಡಾಗುತ್ತಾನೆ. ಆಗ ಶಾಮಲಾ ಜೀವಂತ ಶವವಾಗುತ್ತಾಳೆ. ಈ ದಾರುಣ ಚಿತ್ರಣವೇ ಈ ಕಥೆಯ ವಸ್ತುವಾಗಿದೆ.

೧೯) ಬಾಲ ಚಂದ್ರ ಜಯಶೆಟ್ಟಿ ಅವರು ಬರೆದ 'ಕೋಡ್ಗಲ್ಲಿನ ಕೂಗು' ಮತ್ತು 'ಮಿರ್ಚಿ ಬಾಬಾ ಮತ್ತು ಇತರ ಕಥೆಗಳು' ಈ ಎರಡು ಸಂಕಲನ ಕಥೆಗಳಲ್ಲಿ ನಮಗೆ ಪ್ರಮುಖವಾಗಿ ಕಂಡುಬರುವ ಪಾತ್ರಗಳು ಮಹಿಳಾ ಪಾತ್ರಗಳೇ ಆಗಿವೆ. 'ಕೋಡ್ಗಲ್ಲಿನ ಕೂಗು'ವಿನ 'ಎಲ್ಲಮ್ಮನ ಸೇವೆ' ಕಥೆಯಲ್ಲಿ ಚೆನ್ನಿ, 'ರಾಚಿ' ಕಥೆಯ ಕಪಿಲಾ, 'ಸೋಬಾನ' ಕಥೆಯ ದಾನವ್ವ ಮತ್ತು ಮಿರ್ಚಿಬಾಬಾ ಮತ್ತು ಇತರ ಕಥೆಗಳು ಕಥಾ ಸಂಕಲನದಲ್ಲಿಯ 'ಚಾಳೀಸು' ಕಥೆಯ ಹರಿಣಾಬಾಯಿ ತನ್ನ ಮೈದುನಾದ ರಂಗನಾಥನ ಜೊತೆಗೆ ಅನೈತಿಕ ಸಂಬಂಧ ಮಾಡುವುದು ಇಲ್ಲಿದೆ. 'ಉಡುಕಿ' ಕಥೆಯ ಒಂದು ಪ್ರಮುಖ ಸ್ತ್ರೀ ಪಾತ್ರ ಶಿವಮ್ಮಾ ಗಟ್ಟಿ ಎದೆಯ ಪಾತ್ರವಾಗಿದ್ದಾಳೆ. ಉಡುಕಿ ಮಾಡಿಕೊಂಡ ಶಿವಮ್ಮ ತನ್ನ ಸದ್ಯದ ಗಂಡನನ್ನೂ ಸಮಾಧಾನ ಪಡಿಸಲು ಸ್ವತಂತ್ರವಾಗಿ ಬದುಕು ಕಟ್ಟಲು ತನ್ನ ಮೊದಲ ಗಂಡನಾದ ಶಿವಮೂರ್ತಿಯಿಂದ ಹುಟ್ಟಿದ ರಾಚೋಟಿಯನ್ನು ತ್ಯಾಗ ಮಾಡಲು ಸಿದ್ಧಳಿದ್ದಾಳೆ. ತಾಯಿ ತನ್ನಗಿಂತ ತನ್ನ ಬದುಕಿನ ಪತಿಯ ಪ್ರೀತಿಯೇ ಮುಖ್ಯ ಎಂಬ ತತ್ವವನ್ನು ಕಥೆಗಾರರಾದ ಜಯಶೆಟ್ಟಿಯವರು ತಿಳಿಸಿದ್ದಾರೆ.

ಕೆಳವರ್ಗದ ಜನರು ತಮ್ಮ ಹೊಟ್ಟೆ ಬಟ್ಟೆಗಾಗಿ ಬಡಿದಾಡಿದರೆ ಮಧ್ಯಮವರ್ಗದವರು ಎಲ್ಲ ಇದ್ದು ಇಲ್ಲದವರಂತೆ ಬದುಕುವುದು ಅವರ ದೊಡ್ಡ ದುರಂತವೆನಿಸುತ್ತದೆ. ಸುನಂದಾ, ಶಾಮಲಾ

ಪಾತ್ರಗಳು ನಿದರ್ಶನವಾಗಿವೆ. ಇಲ್ಲಿ ಗಂಡ ಮನೆ ಮತ್ತು ನೌಕರಿ ಎಲ್ಲವೂ ಇದ್ದು ಅತೃಪ್ತಿಯಿಂದ ಜೀವಿಸುವುದು ಸರಳ ಪಾತ್ರದ ಮೂಲಕ ಕಥೆಗಾರರು ಸಶಕ್ತವಾಗಿ ಪ್ರತಿಬಿಂಬಿಸಿದ್ದಾರೆ.

ಇಲ್ಲಿ ಬಂದಿರುವ ಪಾತ್ರಗಳ ಮುಖಾಂತರವೇ ಕಥೆಯ ವಸ್ತು, ಉದ್ದೇಶಗಳನ್ನು ನೆನಪಿಸುವ ಪಾತ್ರಗಳ ಸ್ವಭಾವವನ್ನು ಕಥೆಗಳ ಮೂಲಕ ಚಿತ್ರಿಸಲಾಗಿದೆ. ಹೀಗೆ ಪಾತ್ರಗಳ ಸೃಷ್ಟಿಯನ್ನು ವಿಶಿಷ್ಟವಾಗಿ ಮೂಡಿಸಿದ್ದಾರೆ.

## ಟಿಪ್ಪಣಿಗಳು

೧. ಮಹಿಳಾ ಚಳುವಳಿಗಳು ಮತ್ತು ವಿಷಯಗಳು: ಎಂ.ಉಷಾ ೨೦೦೪, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು ೧೪೮

೨. ಕಡಲ ಒಡಲು ಬಗೆದಷ್ಟು: ಸಂಧ್ಯಾ ಹೊನುಗುಂಠಿಕರ ೨೦೦೨, ಸಿದ್ಧಲಿಂಗೇಶ್ವರ ಪ್ರಕಾಶನ, ಬೆಂಗಳೂರು, ಪು. ೫೬

೩. ಮಹಿಳಾ ಅಧ್ಯಯನ ಸಂಚಿಕೆ: ೨೦೦೧, ಪು. ೬೪

೪. ಮಣ್ಣು ಸೇರಿತು ಬೀಜ, ಅಮರೇಶ ನುಗಡೋಣಿ (ದ್ವಿಮೂ. ೧೯೯೭) ನಮ್ಮ ಪ್ರಕಾಶನ, ತಿಪಟೂರು, ಪು. ೯

೫. ರೋಹಿಣಿ ಜಯತೀರ್ಥ ರಾಜಪುರೋಹಿತ: ೧೯೬೯ ಪ್ರಕಾಶ, ಪ್ರಕಾಶ,ನ ರಾಯಚೂರು, ಪು. ೬೨

೬. ಬೆಂಕಿ ಮರೆಯ ತಂಪು: ಶ್ರೀಕಾಂತ ಪಾಟೀಲ್ ೧೯೯೭, ಶಶಿ ಪ್ರಕಾಶನ, ಬೆಟಗೇರಿ, ಪು. ೨೫

೭. ಹಂಗಿನರಮನೆಯ ಹೊರಗೆ: ರಾಜಶೇಖರ ನೀರಮಾನ್ವಿ ೧೯೯೮, , ಲೋಹಿಯಾ ಪ್ರಕಾಶನ, ಬಳ್ಳಾರಿ, ಪು. ೨

೮. ಅದೆ ಪು. ೨೦

೯. ಮಣ್ಣು ಸೇರಿತು ಬೀಜ: ಅಮರೇಶ ನುಗಡೋಣಿ (ದ್ವಿಮೂ. ೧೯೯೭) ನಮ್ಮ ಪ್ರಕಾಶನ, ತಿಪಟೂರು, ಪು. ೩೬

೧೦. ಬೆಂಕಿ ಮರೆಯ ತಪ್ಪು" ಶ್ರೀಕಾಂತ ಪಾಟೀಲ್ ೧೯೯೭, ಶಶಿಪ್ರಕಾಶನ, ಬೆಟಗೇರಿ, ಪು. ೩೮–೩೯

೧೧. ಮಹಿಳೆ ಸಮಾಜ ಸಂಸ್ಕೃತಿ: ಇಂದಿರಾ ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು. ೩೬

೧೨. ಬಿಸಿಲ ಹನಿಗಳು: ಎಚ್.ಪಂಪಯ್ಯ ಶೆಟ್ಟಿ ೧೯೯೫, ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು, ಪು ೨

೧೩. ರೋಹಿಣಿ: ಜಯತೀರ್ಥರಾಜ ಪುರೋಹಿತ ೧೯೬೯, ಪ್ರಕಾಶನ, ರಾಯಚೂರು, ಪು. ೪

೧೪. ಅದೆ, ಪು. ೪

೧೫. ಶಾಂತರಸರ ಸಮಗ್ರ ಕಥೆಗಳು: ಶಾಂತರಸ ೧೯೯೭, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ಪು. ೨೪೩

೧೬. ಅದೆ, ಪು. ೨೪೫

೧೭. ಹಣದಿ: ಲೋಹಿಯಾ ಪ್ರಕಾಶನ ಶಿವಕುಮಾರ ನಾಗವಾರ ೨೦೦೦,', ಬಳ್ಳಾರಿ, ಪು. ೪೯

೧೮. ಅದೆ, ಪು. ೫೧

೧೯. ಅದೆ, ಪು. ೫೨

೨೦. ಹಬ್ಬ ಮತ್ತು ಬಲಿ: ಬಿ.ಟಿ.ಲಲಿತಾನಾಯಕ ೧೯೮೯, ಲಂಬಾಣಿ ಒಕ್ಕೂಟ ಪ್ರಕಾಶನ, ಬೆಂಗಳೂರು, ಪು. ೭೫

೨೧. ಅದೆ, ಪು. ೬೯

೨೨. ಕಾಳ ಬೆಳದಿಂಗಳ ಸಿರಿ; ರಾಜಶೇಖರ ಹತಗುಂದಿ ೧೯೯೯, ಪು. ೭೫

೨೩. ಅದೆ, ಪು. ೭೫

೨೪. ಮಣ್ಣು ಸೇರಿತು ಬೀಜ: ಅಮರೇಶ ನುಗಡೋಣಿ ೧೯೯೭ ನಮ್ಮ ಪ್ರಕಾಶನ, ತಿಪಟೂರು, ಪು. ೧೨೮

೨೫. ಮಾತಂಗಿ ಮತ್ತು ಇತರ ಕಥೆಗಳು, ಲೇ, ಲಲಿತಾ ದೇಮಶೆಟ್ಟಿ, ಪು. ೬

೨೬. ಮಹಿಳಾ ಅಧ್ಯಯನ ಸಂಚಿಕೆ, ೨೦೦೨, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೫೪

೨೭, ಅದೆ, ಪು. ೫೫

೨೮, ಮಿರ್ಚಿಬಾಬಾ ಮತ್ತು ಇತರ ಕಥೆಗಳು: ಬಾಲಚಂದ್ರ ಜಯಶೆಟ್ಟಿ ೧೯೯೩, ಬಸವ ಪ್ರಕಾಶನ, ಗುಲಬರ್ಗಾ, ಪು. ೭೦

೨೯, ಅದೆ, ಪು. ೬೮

೩೦. ಕಡಲ ಒಡಲು ಬಗೆದಷ್ಟು: ಸಂಧ್ಯಾ ಹೊನಗುಂಟಿಕರ ೨೦೦೨, ಸಿದ್ಧಲಿಂಗ ಪ್ರಕಾಶನ, ಗುಲಬರ್ಗಾ, ಪು. ೧೦೪

೩೧. ಅದೆ, ಪು. ೬೭-೬೮

೩೨. ಮಾತಂಗಿ ಮತ್ತು ಇತರ ಕಥೆಗಳು, ಲಲಿತಾ ದೇಮಶೆಟ್ಟಿ ೧೯೯೭, ಮಮತಾ ಪ್ರಕಾಶನ, ಕೊಪ್ಪಳ, ಪು.೬

೩೩. ಮಿರ್ಚಿಬಾಬಾ ಮತ್ತು ಇತರ ಕಥೆಗಳು, ಬಾಲಚಂದ್ರ ಜಯಶೆಟ್ಟಿ ೧೯೯೩, ಬಸವ ಪ್ರಕಾಶನ, ಗುಲಬರ್ಗಾ, ಪು. ೭೦

೩೪. ಅದೆ, ಪು. ೭೧

೩೫. ಅದೆ, ಪು. ೭೮

೩೬. ಅದೆ, ಪು. ೮೬

೩೭ ಮಣ್ಣು ಸೇರಿತು ಬೀಜ,ಅಮರೇಶ ನುಗಡೋಣಿ ೧೯೯೭ ನಮ್ಮ ಪ್ರಕಾಶನ, ತಿಪಟೂರು, ಪು. ೧೦೬

೩೮ ಅದೆ, ಪು. ೧೦೬

೩೯. ಜ್ವಲಂತ: ಲೇ, ಗೀತಾನಾಗಭೂಷಣ, ಪು. ೯೫

೪೦. ಅದೆ, ಪು. ೧೦೩

೪೧. ಕಾಡು ಪ್ರೀತಿ ಮತ್ತು ನಾನು: ಲೇ, ಚಿತ್ರಶೇಖರ ಕಂಠಿ, ಪು. ೭೪

೪೨. ಅದೆ, ಪು. ೭೪-೭೫

೪೩. ಅದೆ, ಪು. ೭೫

೪೪ ನೇಪಥ್ಯ, ಲೇ, ಚಿತ್ರಶೇಖರ ಕಂಠಿ, ಪು. ೪೪

೪೫. ಹಬ್ಬ ಮತ್ತು ಬಲಿ: ಲೇ, ಬಿ.ಟಿ.ಲಲಿತಾ ನಾಯಕ, ಪು. ೨೭

೪೬. ಸಾಹಿತ್ಯ ಪ್ರಕಾರಗಳು, ಲೇ, ಪಿ.ವಿ.ಶಾಸ್ತ್ರೀ, ಪು. ೨೨

೪೭. ಕುತ್ತದಲ್ಲಿ ಕುದ್ದವರ ಕದ್ದವರ ಕಥೆಗಳು, ಚೆನ್ನಣ್ಣ ವಾಲೀಕಾರ, ಪು. ೧೦೦

೪೮. ಅವ್ವ ಮತ್ತು ಇತರ ಕಥೆಗಳು, ಲೇ, ಗೀತಾನಾಗಭೂಷಣ, ಪು. ೩೬

೪೯. ಅದೆ, ಪು. ೪೨

೩೦. ಹಬ್ಬ ಮತ್ತು ಬಲಿ, ಲೇ, ಬಿ.ಟಿ.ಲಲಿತಾ ನಾಯಕ ಪು. ೧೯

೩೧. ಅದೆ, ಪು. ೨೭

೩೨. ಕಾಡು ಪ್ರೀತಿ ಮತ್ತು ನಾನು: ಲೇ, ಚಿತ್ರಶೇಖರ ಕಂಠಿ, ಪು. ೧೯

೩೩. ಅದೆ, ಪು. ೨೦

♦ ♦ ♦

## ಅಧ್ಯಾಯ : ಆರು

# ಕಥಾ ಸಾಹಿತ್ಯದ ಭಾಷಾ ವೈಶಿಷ್ಟ್ಯತೆ

ಒಂದು ಕೃತಿಯು ಪರಿಪೂರ್ಣತೆ ಸಾರ್ಥಕತೆ ಪಡೆಯಲು ಲೇಖಕರು ಬಳಸಿರುವ ಭಾಷೆ, ಶೈಲಿ ಮಹತ್ವದ ಪಾತ್ರವಹಿಸುತ್ತದೆ. ಭಾಷೆಯು ಲೇಖಕನ ಅನುಭವಗಳನ್ನು ಅಭಿವ್ಯಕ್ತಗೊಳಿಸುವ ಮಾಧ್ಯಮವಾಗಿದೆ. ಸೃಜನಶೀಲ ಬರಹಗಳಲ್ಲಿ ಭಾಷೆ, ಕಲಾತ್ಮಕವಾಗಿ ಉಪಯೋಗಿಸಲ್ಪಡುತ್ತದೆ. ಸಾಹಿತಿಯ ಭಾಷಾ ಶೈಲಿಯು ಅವರವರ ವ್ಯಕ್ತಿತ್ವಕ್ಕೆ ಜೀವನ ದೃಷ್ಟಿಗೆ ಅನುಗುಣವಾಗಿ ರೂಪುಗೊಳ್ಳುತ್ತದೆ. ಭಾಷೆ, ಶೈಲಿ ಮತ್ತು ತಂತ್ರಗಳು ಲೇಖಕನ ಜೀವನ ದರ್ಶನದೊಂದಿಗೆ ನಿಕಟ ಸಂಬಂಧ ಹೊಂದಿರುತ್ತವೆ. ಲೇಖಕ ತನ್ನ ಕಥಾ ವಸ್ತುವಿನಗುಣವಾಗಿ ಭಾಷೆಯನ್ನು ಬಳಸುತ್ತಾನೆ. ನಿಜವಾದ ಸಾಹಿತ್ಯ ಕೃತಿಯು ತನ್ನ ಚೌಕಟ್ಟಿನೊಳಗೆ ವಸ್ತು ಬೇರೆ, ಭಾಷೆ ಬೇರೆ, ತಂತ್ರಗಳೊಡನೆ ನಿಕಟ ಸಂಬಂಧವನ್ನು ಸಾಧಿಸುತ್ತವೆ. ಶೈಲಿಯೆಂಬುದು ಒಬ್ಬ ಸೃಜನಶೀಲ ಲೇಖಕ ತನ್ನ ಅಂತರಾಳದ ಅನುಭವವನ್ನು ಕಲಾತ್ಮಕವಾಗಿ ಕಟ್ಟಿಕೊಡುವಾಗ ವ್ಯಕ್ತವಾಗುತ್ತದೆ. ಇದು ಲೇಖಕನ ಬದುಕಿನ ಸಾಚಾ ಅನುಭವಗಳನ್ನು ತನ್ನ ವ್ಯಕ್ತಿಗತ ನೆಲೆಯಲ್ಲಿ ಅಭಿವ್ಯಕ್ತಿಸುವ ತಂತ್ರವೂ ಹೌದು ಹಾಗೇ ಬರಹದ ವಿಧಾನ ಕ್ರಮವೂ ಹೌದು. ಇದು ಎಲ್ಲಾ ಲೇಖಕರಲ್ಲಿ ಒಂದೇ ಬಗೆಯಾಗಿರುವುದಿಲ್ಲ.

"ಒಂದು ಸಾಹಿತ್ಯ ಕೃತಿಯ ವಸ್ತು, ಭಾಷೆ, ತಂತ್ರದ ನಿಜವಾದ ಅಧ್ಯಯನವೆಂದರೇ ಆ ಸಮಾಜದ ಒಟ್ಟು ಸಂಸ್ಕೃತಿಯ ಅಧ್ಯಯನ ಎಂದರ್ಥ"[೧]

"ಭಾಷೆ ಸಾಹಿತ್ಯ ಎರಡೂ ಒಂದೇ ನಾಣ್ಯದ ಎರಡು ಮುಖಗಳಂತೆ, ಭಾಷೆಯಲ್ಲೇ ಸಾಹಿತ್ಯ ಉಗಮವಾಗುವುದು. ಭಾಷೆಯಿಂದ ಕಥೆಗಳ ಸನ್ನಿವೇಶ ಪಾತ್ರಗಳು ಓದುಗರ ಅರಿವಿಗೆ ಬರುವುದು".[೨]

"ಶೈಲಿ ಪ್ರಧಾನವಾಗಿ ವಸ್ತು ನಿಷ್ಠವಾಗಿರುವುದರಿಂದ ಸಮಷ್ಟಿಯ ಮೇಲೆ ಪ್ರಭಾವ ಬೀರುವುದಲ್ಲದೇ ಅದರಿಂದ ಪ್ರಭಾವಿತರಾಗುವವರೂ ಇದ್ದಾರೆ. ಆದ್ದರಿಂದ ಶೈಲಿ ಬರಹಗಾರನ ವ್ಯಕ್ತಿತ್ವವನ್ನು

ಪ್ರತಿಬಿಂಬಿಸುವ ಸಾಧನವೂ ಹೌದು. ಒಂದು ಸಮಾಜದ ಸಂಸ್ಕೃತಿಯನ್ನು ಬಿಂಬಿಸುವ ದರ್ಶನವೂ ಹೌದು.”[೩]

ಭಾಷೆಯು ಸಾಮಾಜಿಕ ಸೃಷ್ಟಿಯಾದುದರಿಂದ ಪ್ರತಿಯೊಬ್ಬರ ನಡುವೆ ಸಂಪರ್ಕ, ಸಂವಹನ ಮಾಧ್ಯಮವಾಗಿ ಕಾರ್ಯನಿರ್ವಹಿಸುವಂತಹ ಶಕ್ತಿ ಪಡೆದಿದೆ. ಭಾಷೆ ಸಂಸ್ಕೃತಿಯ ವಾಹಕ, ಅದು ಜನತೆಯ ನಡೆ ನುಡಿ ಆಚಾರ-ವಿಚಾರ, ಜನ-ಜೀವನ ಇತ್ಯಾದಿಗಳನ್ನು ಗರ್ಭಿಕರಿಸಿಕೊಂಡು ರೂಪುಗೊಂಡಿರುತ್ತದೆ. ಹೈದರಾಬಾದ್ ಕರ್ನಾಟಕದ ಕಥೆಗಾರರು ಬಳಸಿದ ಭಾಷೆಯನ್ನು ಅಭ್ಯಸಿಸುವುದೆಂದರೆ, ಆ ಪ್ರದೇಶದ ಚರಿತ್ರೆಯನ್ನು ಮತ್ತು ಸಂಸ್ಕೃತಿಯನ್ನು ಅಭ್ಯಸಿಸಿದಂತೆಯೇ.

ಭಾಷೆಯಲ್ಲಿ ಶಿಷ್ಟ ಮತ್ತು ಆಡುಭಾಷೆ ಎಂಬ ಎರಡು ಬೇದಗಳಿವೆ. ಜನರು ಹಳ್ಳಿಗಳಲ್ಲಿ ಮನೆಯಲ್ಲಿ ಆಡುವ ಭಾಷೆಯನ್ನು ಕೇವಲ ವ್ಯವಹಾರಿಕವಾಗಿ ಬಳಸದೆ ಸಾಹಿತ್ಯದ ವಿಶಿಷ್ಟ ಅಭಿವ್ಯಕ್ತಿಯೂ ಆಗಿರುವುದರಿಂದ ಹೈದರಾಬಾದ್ ಕರ್ನಾಟಕದ ಕಥಾ ಸಾಹಿತ್ಯ ಸಂಪೂರ್ಣವಾಗಿ ಬಳಸಿಕೊಂಡಿದೆ. ಇಲ್ಲಿಯ ಕಥೆಗಾರರು ಕನ್ನಡದ ಶಿಷ್ಟ ಸಾಹಿತ್ಯದಿಂದ ತಿರಸ್ಕೃತವಾದ ಜಾನಪದಿಯ ಅಪ್ಪಟ ದೇಶೀಯ ಕನ್ನಡವನ್ನು ತಮ್ಮ ಬದುಕಿನ ಅನುಭವಗಳ ಮುಖಾಂತರವೇ ದಾಕಖಲಿಸಿದ್ದು ಒಂದು ಸಾಧನೆಯೇ ಸರಿ.

ಮೇಲ್ವರ್ಗದ ಪಾತ್ರಗಳು ಕೆಳವರ್ಗದ ಪಾತ್ರಗಳು, ಮುಸ್ಲಿಂ ಪಾತ್ರಗಳು, ಮಧ್ಯಮವರ್ಗದ ಪಾತ್ರಗಳು, ಮಹಿಳಾ ಪಾತ್ರಗಳು ಹೀಗೆ ಅನೇಕ ನಮೂನೆಯ ಪಾತ್ರಗಳು ಹೈದರಾಬಾದ್ ಕರ್ನಾಟಕದ ಕಥೆಗಳಲ್ಲಿ ಬರುತ್ತವೆ. ಆಯಾ ಪಾತ್ರಗಳು ಆಯಾ ವರ್ಗದ ಭಾಷೆಯನ್ನು ಮಾತನಾಡುತ್ತವೆ.

ಪಾತ್ರಗಳು ಆಡುವ ಭಾಷೆಯಲ್ಲಿ ಈ ಪ್ರದೇಶದ ಭಾಷಾ ಜೀವಂತಿಕೆಯನ್ನು ಕಾಣಬಹುದು. ಹಳ್ಳಿಗರ ಜಾಣತನ, ಹುಂಬತನ, ಸಾಚಾತನ, ನೀಚತನ ಅಷ್ಟೇ ಅಲ್ಲ, ಅವರ ಇಡೀ ಬದುಕು, ಅವರಾಡುವ ಭಾಷೆಯೊಡನೆ ಇವು ಹುದುಗಿರುತ್ತವೆ. ಹಳ್ಳಿಗರು ಅದರಲ್ಲಿಯೂ ಸ್ತ್ರಿಯರು ಭಾಷೆಯನ್ನು ಶ್ಲೀಲ-ಅಶ್ಲೀಲವೆಂದು ಭಾವಿಸುವುದೇ ಇಲ್ಲ. ಅವರ ದಿನನಿತ್ಯದ ಬದುಕಿನ ಎಲ್ಲ ಕ್ರಿಯೆಗಳಿಗೆ, ಚಟುವಟಿಕೆಗಳಿಗೆ ಭಾಷೆ ಅಭಿವ್ಯಕ್ತಿ ಕೊಡುತ್ತದೆ. ಮುಚ್ಚುಮರೆ ಇಲ್ಲದೆ ಮನಬಿಚ್ಚಿ ಮಾತನಾಡುತ್ತಾರೆ. ಹೀಗಾಗಿ ಗ್ರಾಮೀಣ ಭಾಷೆ ಯಾವಾಗಲೂ ಅದು ತನ್ನ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿರುತ್ತದೆ. ಇಂತಹ ಜೀವಂತ ಭಾಷೆಯನ್ನು ಹೈದರಾಬಾದ್ ಕರ್ನಾಟಕದ ಕಥೆಗಾರರು ಸಮರ್ಥವಾಗಿ ತಮ್ಮ ತಮ್ಮ ಕಥೆಗಳಲ್ಲಿ ಬಳಸಿಕೊಂಡಿದ್ದಾರೆ. ಅವರು ಬಹಳ ನಿರರ್ಗಳವಾಗಿ ಅಷ್ಟೇ ಸರಳವಾಗಿ ಯಾವ ಕಸರತ್ತು ಇಲ್ಲದೆ, ಗ್ರಾಮೀಣ ಸೊಗಡು, ಅಪ್ಪಟ ಹಳ್ಳಿತನ, ಅಭಿವ್ಯಕ್ತಿ ಉಳಿಸಿಕೊಂಡಿದ್ದಾರೆ.

ಈ ಭಾಗದ ಕಥೆಗಾರರು ಪ್ರಾದೇಶಿಕ ಭಾಷೆಯನ್ನು ಸಮರ್ಥವಾಗಿ ದುಡಿಸಿಕೊಂಡಿದ್ದಾರೆಂದು ಹೇಳುವುದಕ್ಕಿಂತ, ಆ ಭಾಷೆಯೇ ಅವರಲ್ಲಿ ದುಡಿದಿದೆ ಎಂದು ಹೇಳಬಹುದೇನೋ, ಇವರ

ಸಾಮಾಜಿಕ ಕಾಳಜಿ, ಸಾಹಿತ್ಯಕ ಕಾಳಜಿಕ್ಕಿಂತ ಹೆಚ್ಚು ಕ್ರಿಯಾಶೀಲವಾಗಿರುವ ಕಾರಣ, ಗ್ರಾಮೀಣ ಸಮಾಜದ ಸ್ವರೂಪ ವಿವರಣೆಯನ್ನು ನೀಡುವುದಕ್ಕೆ ಗ್ರಾಮೀಣ ಭಾಷೆ ತಾನೇ ತಾನಾಗಿ ದುಡಿದಿದೆ. ಇವರ ಕಥೆಗಳಲ್ಲಿ ವಸ್ತುವೇ ಭಾಷೆಯನ್ನು ದುಡಿಸಿಕೊಂಡಿದೆ. ಕಥೆಗಾರರ ಬರವಣಿಗೆ ಕೌಶಲ್ಯ ಇರುವುದು ಇಲ್ಲಿಯೇ.

"ಪ್ರಾದೇಶಿಕ ಭಾಷೆಯ ವಿಶೇಷತೆ, ಆಡುನುಡಿ. ನಿರರ್ಗಳ ಬಳಕೆಯಲ್ಲಿ, ಮಾತುಮಾತಿಗೆ ಹೇಳುವ" ನುಡಿಗಟ್ಟುಗಳು, ಯಮಳ ಶಬ್ದಗಳು, ದ್ವಿರುಕ್ತಿ ಪದಗಳು, ಪ್ರತಿಧ್ವನಿ ಶಬ್ದಗಳು, ಭಾಷೆಯ ಸೊಗಡನ್ನು ಹೆಚ್ಚಿಸುವವು. ಆ ಪ್ರದೇಶದಲ್ಲಿ ಬದುಕಿನ, ಬಾಳಿ ಬೆಳಗಿದ ಶರಣರ ವಚನಗಳ ಸಾಲುಗಳು, ಅನುಭಾವಿಗಳ ಪದಗಳು, ಗಾದೆ ಮಾತುಗಳು ಸಹಜವಾಗಿ ಬಳಕೆಯಾಗಿವೆ."

ಭಾಷೆಯಲ್ಲಿ ಕ್ಲಿಷ್ಟತೆಯಾಗಲಿ, ದ್ವಂದ್ವಗಳಾಗಲಿ ಇಲ್ಲ. ಇಲ್ಲಿ ಭಾಷಾ ಕಸರತ್ತಿಗೆ ಅವಕಾಶವೇ ಇಲ್ಲ. ಕೃತಕತೆ ತಲೆ ಹಾಕುವುದಿಲ್ಲ. ಸಹಜತೆ ಅದರ ಮುಖ್ಯ ಲಕ್ಷಣ. ಪ್ರಾದೇಶಿಕ ಭಾಷೆಯಲ್ಲಿ ಶ್ಲೀಲ–ಅಶ್ಲೀಲ ಪದಗಳಲ್ಲಿ ವ್ಯತ್ಯಾಸವಿಲ್ಲ. ಬದುಕನ್ನು ಸ್ವೀಕರಿಸುವ ರೀತಿಯಲ್ಲಿ ಭಾಷೆಯನ್ನು ಸ್ವೀಕರಿಸುತ್ತಾರೆ. ಬದುಕಿಗೆ ಪೂರಕವಾದ ಭಾಷೆ ಶ್ಲೀಲ–ಅಶ್ಲೀಲದ ಹಣೆಪಟ್ಟಿ ಕಟ್ಟಿಕೊಳ್ಳುವುದಿಲ್ಲ. ಅಶ್ಲೀಲವೆಂದು ಭಾವಿಸಿದರೂ ಕೂಡ ಭಾಷೆಯಲ್ಲಿ ಸಹಜವಾಗಿ ಬಳಸುತ್ತಾರೆ. ಈ ಎಲ್ಲ ಅಂಶಗಳು ಹೆಚ್ಚಿನ ಕಥೆಗಾರರ ಭಾಷೆಯಲ್ಲಿ ಅಪಾರವಾದ ಸಂಖ್ಯೆಯಲ್ಲಿ ದೊರೆಯುತ್ತವೆ. ಪ್ರಾದೇಶಿಕ ಭಾಷೆ ಈ ಅಂಶಗಳನ್ನು ಅದ್ಭುತವಾಗಿ ಬಳಸಿ ತಮ್ಮ ಶೈಲಿಯಲ್ಲಿ ವೈವಿಧ್ಯತೆಯನ್ನು ಸಾಧಿಸಿದ್ದಾರೆ.

ವಚನ ಸಾಹಿತ್ಯ ಮತ್ತು ಅನುಭವ ಸಾಹಿತ್ಯದ ಆಳವಾದ ಅಭ್ಯಾಸ, ಹರಿಹರ ಕವಿಯ ಭಾಷಾ ಪ್ರಭಾವ, ವೇದಾಂತ ಚರ್ಚೆಯ ಪರಿಸರ, ಪ್ರತಿಭಟನಾ ಮನೋಭಾವ, ಪ್ರಗತಿಪರ ವಿಚಾರಗಳು, ಕಥೆಗಾರರ ಶೈಲಿಯ ಗಾಢವಾದ ಪ್ರಭಾವ ಬೀರಿವೆ. ಆಡು ನುಡಿಗಳು. ಯಮಳ ಶಬ್ದಗಳು, ನುಡಿ ಗಟ್ಟುಗಳು, ಪ್ರತಿಧ್ವನಿ ಶಬ್ದಗಳು, ದ್ವಿರುಕ್ತಿಗಳು, ಗಾದೆ ಮಾತುಗಳು ಕಥೆಗಾರರ ಶೈಲಿಗೆ ವಿಶೇಷ ಮೆರಗು ತಂದಿವೆ. ಸಂಭಾಷಣೆ, ಎಲ್ಲ ತಂತ್ರದ ಬಳಕೆಯಿಂದ ಅವರ ಶೈಲಿಗೆ ಹೆಚ್ಚಿನ ಸಾಮರ್ಥ್ಯ ಒದಗಿದೆ.

**ಆಡುನುಡಿ**

ಚೆನ್ನಣ್ಣ ವಾಲೀಕಾರರು ಬಳಸಿರುವ ಪ್ರಾದೇಶಿಕ ಭಾಷೆಯನ್ನು ಇಲ್ಲಿ ನೋಡಬಹುದು. "ಗೌಡ್ರ ತಿಪ್ಪೆಯಲ್ಲಿ ಕುಳಿತು ಉಚ್ಚೆ ಹೊಯ್ದ ತಪ್ಪಿಗೆ, ತಮ್ಮ ಕೇರಿಯ ಶಿವರಾಯ ಮಾಸ್ತರನಿಗೆ ಮ್ಯಾಗೇರಿ ಜನ ಸುತ್ತುಗಟ್ಟಿ ಹೊಡೆಯುವುದನ್ನು ತಪ್ಪಿಸಲಾಗದಕ್ಕೆ ರಾಯ ಕೈ ಕೈ ಹಿಚುಕಿಕೊಂಡ, ಮುಡ್ಸಗಾತೇನ್ಲೆ ಹೊಲಿಸೂಳಿ ಮಗನಾ, ಕಣ್ ಕಾಣ್ಸಂಗಿಲ್ಲೇನ್"?[೪]

"ಏನ್ಲೆ ಬದ್ಮಾಸಿ ನಿಮ್ಮವ್ ನಮ್ಮಪ್ಪನ ಜೋಡಿ ಇದ್ದಾಗ್, ನೀ ಯಾಕ್ ಒಲ್ಲಂತೆಲೆ ಚೋದೀಕೆ ಸುಮ್ ಬಿಳ್."[೫]

"ಯಾರ್‍ಯಾರ್ ಹಣೆಬರದಲ್ಲೇನದಾ ಅದು ಆಗೇ ಆಗ್ತಾದ್, ನಮ್ಗ ತಪ್ಪಾಕ್ ಬರ್‍ತಾದಾ? ಕೊಡ್ತಿನೇಳ ಯಾಕ್ ಚಿಂತಿ ಮಾಡ್ತಿ."[೬]

"ಗೌಡಾ ನಿನ್ ಕಾಲ್ ಬೀಳ್ತಿನ್ಯಾ ಹಿಂಥಾ ದಂದಾ ಮಾಡಬ್ಯಾಡಪೋ ನೀ ನನ್ಗ ಮಗಳಂತ ಬಿಟ್ ಬಿಡಪೊ ನೌಕಾರಾ"[೭]

ಹೀಗೆ ವಾಲೀಕಾರರು ತಮ್ಮ ಕಥೆಗಳಲ್ಲಿ ಕೆಳವರ್ಗದ ಜನರಾಡುವ ಸಹಜ ಮಾತುಗಳನ್ನು ಬಳಸಿಕೊಂಡಿದ್ದಾರೆ. ಸಾಹಿತ್ಯಕ್ಕೆ ಸಂದರ್ಭೋಚಿತವಾದ ಭಾಷೆಯನ್ನು ಬಳಸಿಕೊಳ್ಳುವುದರಿಂದ ಆ ಕೃತಿಗೆ ಹೆಚ್ಚಿನ ಸ್ಥಾನ ದೊರೆಯುತ್ತದೆಂಬ ಅಂಶ ಗೊತ್ತಿರುವುದರಿಂದ ಈ ರೀತಿಯ ಅಶ್ಲೀಲ ಪದಗಳನ್ನು ಬಳಸುವುದು ಅನಿವಾರ್ಯವಾಗುತ್ತದೆ.

ಖಿಚಡಿ ಭಾಷೆಯೆಂದೇ ಪ್ರಸಿದ್ಧಿ ಪಡೆದ ಗುಲಬರ್ಗಾ ಕನ್ನಡವನ್ನು ಚಾಚು ತಪ್ಪದೆ ತಮ್ಮ ಕಥೆಗಳೂದ್ದಕ್ಕೂ ಬಳಸಿಕೊಂಡು ಬಂದವರಲ್ಲಿ ಗೀತಾ ನಾಗಭೂಷಣ ಮತ್ತು ಚಿತ್ರಶೇಖರ ಕಂಠಿಯವರು ಪ್ರಮುಖರಾಗಿದ್ದಾರೆ. ಗೀತಾ ನಾಗಭೂಷಣರು ತಮ್ಮ ಸುತ್ತಲಿನ ಆಡು ಭಾಷೆಯಾದ ಮರಾಠಿ, ಉರ್ದು, ಇಂಗ್ಲೀಷ್ ಹೀಗೆ ಇವೆಲ್ಲವುಗಳ ಮಿಶ್ರಣ ಮಾಡಿಕೊಂಡು ಕಥೆಗಳನ್ನು ರಚಿಸಿರುವುದು ಕಂಡುಬರುತ್ತದೆ.

"ಇಪ್ಪತ್ತು ಸಾವಿರಂದ್ರ ತೋಲಾಯ್ತು (ಬಹಳ) ಪಾಚ್ ಪನ್ನಾಸಂದ್ರ ಅಡ್ಡಿ ಇಲ್ಲ. ಒಮ್ಮೆ ದೋನ್ ಅಡಿಸೆ ಅಂದ್ರ ಒಜ್ಜೆ ಆತನೋ ಏನೋ"[೮]

"ಯಾವನೋ ಸೂ. . . . . ಮಗ ಖಂಡ (ಮಾಂಸ) ತಂದು ಗುಡ್ಯಾಗ ಹಾಕ್ಯಾನ"[೯]

"ಇಲ್ಲೀಟು ರೋಮ ರೋಮ ದುಡಿದು ದೂಸರಾ ಮಾತಾಡಲಾರ್ದಂಗ ಇದ್ದರನಾ ದೊಡ್ಡವ್ವ ಹೊಟ್ಟಿ ತುಂಬ ಉಳ್ಳಕ ಕುಡಲ್ಲ."[೧೦]

"ಅಡ್ಡಕಸಬಿ, ಹೊಂಬ ಲೌಡಿಮಗ ಭಿಕನಾಸಿ, ಭಾಡಕಾವ್, ಹಳ್ಳುಗ" ಹೀಗೆ ಗ್ರಾಮೀಣ ಪರಿಸರದ ಆಡು ಭಾಷೆಯನ್ನು ಬಳಸಿಕೊಂಡಿರುವುದು ಕಂಡು ಬರುತ್ತದೆ. ಇದಕ್ಕೆ ಸೂಗಯ್ಯ ಹಿರೇಮಠರೂ ಹೊರತಾಗ್ಗಿಲ್ಲೆನ್ನುವುದಕ್ಕೆ ಅವರು ಬಳಸಿರುವ ಕೆಲವು ಪದಗಳೇ ಸಾಕ್ಷಿಯಾಗಿವೆ.

"ಎಲೆ ಹುಸೇನಿ ಇಷ್ಟು ದಿನ ನೀ ಮಾಡಿದ ಕೆಲಸನ ನಾ ಮುಚ್ಚಿಕೊಂಡಿನಿ, ಯಾಕ ಗೆಳೆಯಂತ ನನಗೆ ಬಿಟ್ಟು ಹ್ವಾದೆಂದ್ರ ನಿನ್ನ ಸುದ್ದಿ ಬೇರೆನೇ ಆಗ್ತಾದ ತಿಳಿದು ನೋಡು"[೧೧]

"ಬರ್ತೀನಿ ಮುತ್ತ್ಯಾ ನಿಮ್ಗ ಭೇಟ್ಟಿಯಾಗ್ತಿನ್ರಿ"[೧೨]

ಹೀಗೆ ಹಲವಾರು ಪದಗಳು ಈ ಭಾಗದ ಕಥೆಗಾರರ ಕಥೆಗಳಲ್ಲಿ ಪ್ರಾದೇಶಿಕ ಭಾಷಾ ಬಳಕೆಗೊಂಡಿರುವುದು ಕಂಡು ಬರುತ್ತದೆ.

ಸಿದ್ಧರಾಮ ಹೊನಕಲರು ಕೂಡ ಗುಲಬರ್ಗಾ ಜಿಲ್ಲೆಯ ಸಾಮಾನ್ಯ ಜನರಾಡುವ ತೀರಾ ಹಳ್ಳಿ ಭಾಷೆಯನ್ನೇ ತಮ್ಮ ಕಥೆಗಳುದ್ದಕ್ಕೂ ಬಳಸಿಕೊಂಡಿರುವುದು ಒಂದು ರೀತಿಯಲ್ಲಿ ಕಥೆಗಳಿಗೆ ಮೆರಗು ಬಂದಂತಾಗಿದೆ. ಅವರ 'ಕತ್ತಲ ನೆಲದ ಕಪ್ಪು ಕಥೆ' ಯಲ್ಲಿಯ ಕೆಲ ಸಾಲುಗಳನ್ನು ನೋಡಬಹುದು.

"ಹೇಳಿಲ್ಲ ಅಂದೀರಿ, ಕೇಳಿಲ್ಲ ಅಂದೀರಿ, ಇವೊತ್ತು ಚಂಜಿ ಮುಂದ ಊರ್ ಹಣಮಂ ದೇವರ ಗುಡಿ ಮುಂದ ಕೆಳಗೇರಿ ಸಿದ್ಲಿಂಗಣ್ಣನನ್ನು ಮಲ್ಲಪ್ಪ ಸರಪಂಚ ಬೆಂಕಿ ಹಚ್ಚಿಸುಡ ಸ್ತಾನಂತ ನೋಡ್ಲಾಕ ಬರಬೇಕಂತ್ರಪ್ಪೊ"[೧೩] ಹೀಗೆ ಕಥೆಯ ಉದ್ದಕ್ಕೂ ಒಂದೇ ರೀತಿಯ ಭಾಷೆಯನ್ನು ಉಪಯೋಗಿಸಿಕೊಂಡಿರುವುದು ಕಂಡುಬರುತ್ತದೆ.

ಭಾಲಚಂದ್ರ ಜಯಶೆಟ್ಟಿಯವರು ತಮ್ಮ ಮೊದಲನೆಯ ಕಥಾ ಸಂಕಲನದಲ್ಲಿ ಮಾತ್ರ ಆಡು ನುಡಿಯನ್ನು ಸಾಕಷ್ಟು ಬಳಸಿಕೊಂಡಿದ್ದಾರೆ. ಇದು ಇಲ್ಲಿನ ಕಥೆಗಳಿಗೆ ವಿಶೇಷತೆಯನ್ನು ಒದಗಿಸಿಕೊಟ್ಟಿದೆ.

"ಯವ್ವಾ ಜಲ್ದಿ ಬಾ, ಇಲ್ಲಿ ಮಜಾ ನೋಡಬಾ," ಬೇಟಾ ಮಂದಿ ಏಟ ಬುಡ್ಡ ಕಾಣಿಸ್ತಾರ ನೋಡು"[೧೪]

"ನಿಂಗ. . . ನಿನಗ ಜೀತದಿಂದ ಬಿಡಸ್ತೇನಿ. ನೀನು ಧಣೇರ ಹಾಂಗ ಕಾಲಮ್ಯಾಲ ಕಾಲ ಹಾಕ್ಕೊಂಡು, ಲೋಡಿಗಿ ಅತ್ಕೊಂಡು, ಚುಟ್ಟಾ ಸೇದ್ತಾ. ಇಲ್ಲ. ಬೀಡಿ ಸೇದ್ತಾ ಊಹೂಂ ಸಿಗರೇಟ ಸೇದ್ತಾ ಕೂಡಬೇಕು. ಧನ್ಯಾರು ಬ್ಯಾಂಗಡಿ ಡಬ್ಯಾನ ಸಿಗರೇಟ ಸೇದ್ತಾರಲ್ಲ, ನಿಂಗೂ ಅಂಥಾ ಸಿಗರೇಟೇ ತಂದು ಕೊಡ್ತಿನಿ"[೧೫]

"ನಿವ್ಯಾಕ ಚಿಂತಿ ಮಾಡ್ತಿರಿ? ಈಗ ಆ ಲೌಡೀ ಸೊಕ್ಕೆಲ್ಲ ಅಡಗಿ ಹೋಗ್ಯಾದ. ಹಿಂದಕ್ಕ ಏನೇನಾಯ್ತು ಅದರಿಂದ ಆಕೀಗೆ ತೋಬಾ ತೋಬಾ ಅನಸ್ಯಾದ. ಈಗ ಕುಂಇ ಕುಂಇ ಅನ್ನಾಂಗಿಲ್ಲ. ನಮ್ಮ ಹಳ್ಳೀಗ ಬಂದು ನಮಗೇ ಮ್ಯಾಂವ ಅನ್ನೋಟು ಧೈರ್ಯ ಆದ ಏನ್ ಧೊರಿ! ನೀನೇನೂ ಕಾಳಜಿ ಮಾಡಬ್ಯಾಡ್ರಿ, ನಾವೆಲ್ಲ ಬಂದೋಬಸ್ತ ಮಾಡ್ತೇವಿ"[೧೬]

"ಅಂವಾ ಪೈಲಾದ ಹೆಡ್ಮಾಸ್ತರ ಎಲ್ಲಿ ಹ್ವಾದ? ದಮ್ ದಬಾಕೆ ಭಾಗ ಗಯಾ."[೧೭]

"ಸರಕಾರದಿಂದ ಪಗಾರ ತೊಗೋತಾರ ಅಂದ ಮ್ಯಾಲ ಹಕ್ ಹಲಾಲ ಆಗಿ ದುಡಿಬೇಕು. ತಮ್ಮ ಕೆಲ್ಸಾ ಏನು, ಬಗ್ಗಿ ಏನು ಅಂಬೋದರ ಖಬರ ಇರ್ಬೇಕು. ನಮ್ಮ ರಾಸೂರಾಗ ಅಂತಹದೆಲ್ಲಾ ಹಲ್ಕಟಗಿರಿ ನಡಿಯಾಂಗಿಲ್ಲ"[೧೮]

"ಸಾಬ್ರೆ, ನನ್ನ ಬಾಯಾಗ ಮಾತು ನಿಂದರವಲ್ಲದು, ನಿಮ್ಮ ಎಂಜಲ ತಿನ್ನೊ ಬಾಯ್ಲಿ ಸುಳ್ಳ ಹೇಳಾಂಗಿಲ್ರೀ ಸಾಬ್ರೆ, ಆ ಹೆಂಗ್ಸು ನೀಲವ್ವಾವ್ರೇ ಇದ್ದರ್ರೀ, ಸಾಬ್ರೆ"[೧೯]

ರಾಜಶೇಖರ ಹತಗುಂದಿಯವರೂ ಸಹ ಪ್ರಾದೇಶಿಕತೆಯನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡಿದ್ದಾರೆ. ಶಿಷ್ಟ ಭಾಷೆಯಲ್ಲಿ ರಚಿತಗೊಂಡ ಕಥೆಗಳಿಗಿಂತಲೂ ಜನರಾಡುವ ಪ್ರಾದೇಶಿಕ ಭಾಷೆಯಲ್ಲಿ ಬರೆದ ಕಥೆಗಳು ಹೆಚ್ಚು ಜನ ಮನ್ನಣೆ ಪಡೆಯುತ್ತವೆ. ತಮ್ಮ ಕಥೆಗಳನ್ನು ಆಡು ಭಾಷೆಗೆ ಚಾಲನೆ ನೀಡಿದ್ದಾರೆ. ಇವರ ಕಾಳ ಬೆಳದಿಂಗಳ ಸಿರಿ" ಕಥಾ ಸಂಕಲನದಲ್ಲಿ ಬಳಕೆಗೊಂಡ ಭಾಷಾ ಪ್ರಯೋಗ ಈ ರೀತಿಯಿದೆ.

"ಏಯ್ ಮಗನಾ ಹೆಂಗಸರಂಗ್ ಹಂಗ್ಯಾಕ್ ಅಳ್ತಿಯಲೆ. ಮಾಡದೆಲ್ಲಾ ಮಾಡಿ ಅಳ ಬಿಡ್ತಿಯೇನು. ಈ ನಿಮ್ಮ ಗೌಡ್ರು ಅತ್ತರ, ಕರದ್ರ ಕರಗ್ತಾರಂತ ತಿಳ್ಕೊಬ್ಯಾಡ. ಸಣ್ಣೂರಿಂದ ಗೂಳ್ಯಾ ಕಟ್ಟಗೊಂಡು ಬರಾಗ ನೀ ಹ್ಯಾಂಗ್ ಇದ್ದೆಲೆ, ಪಾಪ ಬಡು ಮನಶ್ಯಾ, ಸಂಭಾಯಿತ ಮನಶ್ಯಾ ಅಂತ ತಿಳಿದು, ನಿಮ್ಮ ತಂಗಿ ಶಾಣಿ ಮದಿಗಿ ಬಡ್ಡಿ ಇರಲಾರದೇನೇ ಯಾಡ್ ಸಾವಿರ ರೂಪಾಯಿ ಕೊಟ್ನೆಲ್ಲಲ್ಲೇ. ಮಂಡಲ ಪಂಚಾಯ್ತಿ ಕಡೀಲಿಂದ ಜಾಗ ಮಂಜೂರ ಮಾಡ್ಸಿ. ಪುರಕಲ್ಲು ಹಾಕ್ಕೊಂಡು ಇರಲಿಕ್ಕೆ ಅಸ್ರಾ ಮಾಡಿ ಕೊಟ್ನೆಲ್ಲಲ್ಲೇ. ಇಷ್ಟೇಲ್ಲಾ ಮದ್ದತ್ ಆದ್ರೂ ಖೂನ ಗೇಡಿ ಸೂಳ್ಯಾಮಗಾ ಎಲ್ಲಾ ಡ್ರೆಸ್ಸರಿಗಿ ಬೋನಸ್ ಕೇಳ್ರಿ ಅಂತ ಕಿಂವಿ ಊದ್ಯಾನ. ಮತ್ತ ಮ್ಯಾಲ ಪಗಾರನೂ ವಾರ ಮಾಡಬೇಕಂತ, ಯಾರಪ್ಪನ ಮನಿ ಗಂಟಂಲ್ ಕೇಳ್ತಿರೋ, ಮೈಮುರಿದು ದುಡಿಬೇಕರೋ, ದುಡಿಬೇಕು. ಹರಾಮಿ ಬಾ ಅಂದ್ರ ಹ್ಯಾಂಗ ಬರ್ತಾದ. ಉಂಡ ಮನಿ ಜಂತಿ ಎಣಿಸೊ ಜಾತಿರೋ ನಿಮ್ಮದು, ಮದಲ ಇಲ್ಲಿಂದ ಹೊರಟಹೋಗು. ನನಗ ನಿನ್ನ ಮಾರಿ ತೋರಸ್ ಬ್ಯಾಡ್"೨೦ ಇಲ್ಲಿ ರಾಜಶೇಖರ ಹತಗುಂದಿಯವರು ಹಳ್ಳಿಯ ಗಡಸುತನದ ಭಾಷೆಯನ್ನು ಬಳಸಿಕೊಂಡರೂ ಒಂದು ರೀತಿಯ ಸಮತೋಲನವನ್ನು ಕಾಪಾಡಿಕೊಂಡು ಬಂದಿದ್ದಾರೆ.

ಗುರುನಾಥ ಅಕ್ಕಣ್ಣನವರು ಬೀದರ ಜಿಲ್ಲೆಯ ಪ್ರದೇಶಿಕವಾದ ವಿಶಿಷ್ಟ ಭಾಷೆಯನ್ನು ಬಳಸಿಕೊಂಡಿದ್ದಾರೆ. ಇತರ ಭಾಗಗಳಲ್ಲಿಯ ಕಥೆಗಾರರ ಭಾಷೆಗಿಂತ ಬೇರೆಯಾದ ಸಂಕೀರ್ಣ ಭಾಷೆಯನ್ನು ನಾವಿಲ್ಲಿ ಕಾಣುತ್ತೇವೆ.

"ಈ ವರ್ಷ ನೀ ಮದುವೆಯಾಗದಿದ್ದರೆ ದೇಶವೇನು ಹಾಳು ಬೀಳುವುದಿಲ್ಲವಲ್ಲಾ? ನೋಡಿ. ದೇಶ ಹಾಳು ಬೀಳಲಿ. ಹಾಗೆ ಇರಲಿ ನಿಮ್ಮ ಗೌರವ. ಘನತೆ ಮಾತ್ರ ಖಂಡಿತ ಹಾಳು ಬೀಳುತ್ತೆ ಅಂತ ನನಗೆ ಚೆನ್ನಾಗಿ ಗೊತ್ತು. ಆದ್ದರಿಂದಲೇ ನಾ ಈ ನಿರ್ಧಾರಕ್ಕೆ ಬಂದಿರುವುದು."೨೧

ನೀವೇ ಏನ್ರೀ ಸರ್! ನಮ್ಮ ಸಪ್ಲೆ ಹುಡುಗರಿಗೆ ಹಣಕೊಟ್ಟು, ಬಿಲ್ಲಿನಲ್ಲಿ ಕಡಿಮೆ ಹೇಳಿಸಿ ಕೊಂಡು ಊಟ ಮಾಡುತ್ತಿರುವವರು! ನೋಡಿದರೆ, ಸಾಹೇಬನ ಹಾಗೆ ಕಾಣ್ತಿರಾ? ಥತ್! ಉಂಡದಕ್ಕೂ ರೊಕ್ಕ ಕೊಡದಕ್ಕ ಆಗದಿದ್ದರೆ ಯಾಕ್ರಿ ಬರ್ತಿರಾ? ಉಂಡಿದ್ದು ನಿಮ್ಮ ಹೊಟ್ಯಾಗ ಹೊನ್ನು ಆಗುವುದಿಲ್ಲ. ಎಷ್ಟು ದಿನದಿಂದ ನಡಿತಾ ಇದೇರಿ ಈ ದಂಧಾ?"೨೨

"ಏನ್ರೀ ಒಮ್ಮಾರ ಹೋಗಿ ಮಗಳಿಗಿ ನೋಡಿ ಬರ್ರೀ , ಹೀಂಗ ಕುಂತರ ಏನು ತಿಳಿಕೋತಾರ ಬೀಗರು! ಪೋರಿಗಿ ಏನೇನೋ ಕಿಟಿಕಿಟಿ ಕೊಡಪ್ಪ ಹತ್ಯಾರೋ ಏನೋ! ನಮ್ಮ ಪೋರಿ ಪಯಲೇನೇ ಅಂಜು ಬುರುಕಿ, ಏನಾರ ಹೆಚ್ಚು ಕಮ್ಮಿ ಮಾಡಿಕೊಂಡ್ರ, ಊರನ ಮಂದಿ ಎಲ್ಲ ನಮ್ಮ ಮ್ಯಾಲೆ ಮಾತಾಡತಾರ. ಎಂಥಾ ತಾಯಿತಂದಿಯವ್ವ ಇವು! ಕುಡಾದು ತಗೋಳಾದು ಯಾರಿಗಿ ಇರಲ್ಲ ಎಂತಹ ಖಟುಕರು ಇವರು ಅಂದಾರು"[೨೩]

ಲಲಿತಾ ನಾಯಕರು ದಕ್ಷಿಣ ಕರ್ನಾಟಕದ ತಂಗಲಿ ತಾಂಡಾದ ಕನ್ನಡ ಪ್ರಭಾವದಲ್ಲಿ ಬೆಳೆದರೂ, ಹೈದ್ರಾಬಾದ್ ಕರ್ನಾಟಕದ ಕನ್ನಡ ಭಾಷೆಯ ಒಳಹುಗಳನ್ನು ಚೆನ್ನಾಗಿ ಅರಿತುಕೊಂಡಿರುವ ಇವರು ಈ ಎರಡು ಪ್ರಾಂತ್ಯ ಬೇಧವುಳ್ಳ ಭಾಷಾ ಪ್ರಭಾವಗಳ ಮಧ್ಯೆಯೂ ರಾಯಚೂರು ಭಾಗದ ಭಾಷೆಯನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ.

ರಾಯಚೂರು ಕನ್ನಡಕ್ಕೆ ತೆಲುಗು ಮತ್ತು ಸ್ವಲ್ಪ ಪ್ರಮಾಣದ ಮರಾಠಿ ಭಾಷೆಗಳ ಒತ್ತಡ ಒಂದು ಕಡೆಯಾದರೆ, ದಕ್ಷಿಣ ಉರ್ದುವಿನ ಪ್ರಭಾವದಿಂದಾಗಿ ಮೊಗಲಾಯಿ ಕನ್ನಡದ ಅಂಶವನ್ನು ಮೈಗೂಡಿಸಿಕೊಂಡಿದೆ. ಡಾ॥ ಸವದತ್ತಿಮಠರು ಹೇಳುವಂತೆ "ರಾಯಚೂರು ಜಿಲ್ಲೆಯ ಕನ್ನಡ ಉತ್ತರ ಕರ್ನಾಟಕದ ಧಾರವಾಡ, ವಿಜಾಪುರ ಕನ್ನಡ ಹಾಗೂ ಬೀದರ ಕನ್ನಡ ಇವುಗಳ ಮಿಶ್ರಣ ಭಾಷೆಯಂತಿದೆ"[೨೪] ಮತ್ತು ಬಂಜಾರಾ ಭಾಷೆಯ ಅಂಶಗಳೊಂದಿಗೆ ಚಿಕ್ಕ ಮಂಗಳೂರು ಕನ್ನಡವೂ ಇಣುಕಿರುವುದರಿಂದ ಲಲಿತಾ ನಾಯಕರು ಬಳಸುವ ಭಾಷೆ ವೈವಿಧ್ಯಮಯವಾಗಿದೆ.

"ಏನ್ಮಾಡಲಣ್ಣ ನನ್ನ ನಸೀಬು ಅಗದಿ ಖೊಟ್ಟಿ ಐತಿ"[೨೫]

"ಅವರ ದೇಖರೇಖ ಮಾಡೋದು ರಗಡಾಗ್ತಾದ"[೨೬]

ಮುಂತಾದ ಸಾಲುಗಳಲ್ಲಿ ರಾಯಚೂರು ಭಾಗದ :ಮೊಗಲಾಯಿ ಕನ್ನಡ" ವನ್ನು ಕಾಣುತ್ತೇವೆ.

"ದುನಿಯಾದೊಳಗೆ ಯಾರೂ ಬಂಡಿಯಿಂದ ಬೀಳಂಗೇ ಇಲ್ಲೇನು, ಬಾಯಿ"[೨೭]

"ಸೇವಾಲಾಲನ ಗುಡಿಗ್ ಹೋಗಿ ಬೀರುಗ ಒಂದಿಷ್ಟು ಧುಳ್ತಾ(ಬೂದಿ) ಪರಸಾದ ಕೊಡ್ಸು"

"ಬರೋ ಅಮಾಸಿಗ್ ಗದ್ಯಮ್ಮಗ ಒಂದ್ ಹುಂಜ ಕೊಡ್ತಿನಿ ಅಂತ ಬೇಡಿಕೊಂಡೀನಿ"

"ಬಾಬಣ್ಣನ ಹತ್ರ ಒಂದಿಷ್ಟು ಮಂತ್ರ ಹಾಕ್ಸಿ ಬಿಡು ಬಾಯಿ, ಗಾಳಿ-ಗೀಳಿ ಮೆಚ್ಚಿಕೊಡ್ಯೆತೋ ಏನೋ?"[೨೮]

"ಆ ನಮ್ಮವ್ವನ ದಯಾ. . . . ಇಲ್ದಿದ್ರೆ ನನ್ನಂಥ ನರ ಮನ್ಸನ್ ಕೈಯಾಗ ಏನಾದೀತ"[೨೯]

ಈ ಮಾತುಗಳಲ್ಲಿ ಬಂಜಾರ ಭಾಷೆಯ ಪ್ರಭಾವವನ್ನು ಗುರುತಿಸಬಹುದು.

ಶ್ರೀಕಾಂತ ಪಾಟೀಲರು ತಮ್ಮ ಕಥೆಗಳಲ್ಲಿ ಅನುಭವದ ತೀವ್ರತೆಯಿಂದ ಅನುಸರಣನ ಹಾಗೂ ಅನುಕರಣ ಶಬ್ದಗಳನ್ನು ಬಳಸಿದ್ದಲ್ಲದೆ ಸಹಜವಾಗಿ ಅನೇಕ ಬೈಗಳು ಪದಗಳನ್ನು ಬಳಸಿದ್ದಾರೆ. ಆದ್ದರಿಂದ ಎಲ್ಲ ಓದುಗರಿಗು ಇನ್ನಷ್ಟು ಹತ್ತಿರವಾಗುತ್ತಾರೆ.

"ಐ ಬಾರೇ ನೀಲಾ ಈ ರಂಡಿ ತೆಲ್ಯಾಗ ಏನ್ ಥೂಂಬ್ಯಾವ ನೋಡು ಘೋರಿ ಗೋಳ್‌ದಾಗ ಆಡಬ್ಯಾಡ್ಗೇ ಅಂದ್ರ ಕೇಳಾಲ, ಎಡ್ಡು ಕೈಲಿ ಕರಾಕರಾ ತೆಲೆ ಹರಕೋಗತಾದ, ನಾಕು ಹೇನರೆ ಆಯಾಮಂತ ಕಂತೀನಿ ಬಾ ಕೂಡು"[೩೦]

"ಯಾಕ ಚಿಂತಿ ಮಾಡ್ತೇ ನೀಲಾ, ಕಷ್ಟ ಎಲ್ಲಾರಿಗದಾ, ನಮಗೇನ್ ಕಮ್ಮಿ ಅದಾನಾ. ನೀ ಇಟೂಕೇ ಏಟ್ ಎದಿ ಒಡ್ಡಿ. ನಮ್ದ ನೋಡು; ನಿನಕಾ ಎಡ್ಡು ಮಕ್ಳ ಹೆಚ್ಚು ಅವಾ. ನಮ್ಮ ಕಾಮ್ಯಾ ದುಡುದರೇ ಏನಾತು? ನಮ್ಮ ಸಣ್ಣ ನಾದಿನಿ ಮದ್ವಿಗ ಮಾಡಿದ ಸಾಲಾ ಹಿನಾ ಚುಕ್ತಾ ಆಗಿಲ್ಲ. ಇಂಥಾ ಪಿರ್ರ್ಯಾ ದಿವಸದಾಗ ನಮ್ಮಂಥಾ ಬಡೂರು ಬದುಕೋದ ಭಾಳ ತ್ರಾಸ್ ಆಗ್ಯಾದ. ಯಾವೂದು ಅಗ್ಗಾ ಅದಾ ಹೇಳು?"[೩೧]

"ಯಣ್ಣಾನಿಂಗ್ ಏಟೂ ತಿಳ್ಯಾದಿಲ್ಲ ನೋಡು. ಅವಳಿಗೆ ಯಾಕ ಕೊಡ್ಬೇಕು ರುಪೈ, ನಂಗ ನಮ್ಮ ತಮ್ಮ ಕೊಟ್ಟಾನ. ಅವನೀಗ ಗಂಡಿಲ್ಲ ಅವನ ಹೊಲ್ದಮ್ಯಾಲ ನಮ್ಮೆಲ್ಲರ ಹಕ್ಕ ಅದಾ ನೀವೆಲ್ಲಾ ಹೂಂ ಅಂದ್ರ ಅವಳೇನ್ ಮಾಡ್ತಾಳ ಹೆಣ್ಣ ಭಾರಗಿ"[೩೨] ಇಲ್ಲಿ ಪ್ರಾದೇಶಿಕ ಆಡುನುಡಿಯು ಬಳಕೆಯಾಗಿದ್ದು ಕಥೆಯ ಪರಿಣಾಮಕ್ಕೆ ಸಹಾಯಕಾರಿಯಾಗಿದೆ.

ಸಹಜವಾದ ಆಡುನುಡಿಯ ಮೂಲಕವೇ ಕಥೆಯ ವೈವಿಧ್ಯತೆಯನ್ನು ಹೆಚ್ಚಿಸುವ ಕೆಲಸ ಇಲ್ಲಿ ನಾಗವಾರರು " ಹರಿದ ಕಾಗದದ ಚೂರುಗಳು " ಕಥೆಯ ಮೂಲಕ ಮಾಡಿದ್ದಾರೆ.

"ನೀವೂ ಯಾರೂ ಅಂಜಬೇಕಾಗಿಲ್ಲ, ಲಾಟಿಗ್ ಬಿ ತಯ್ಯಾರಿರಬೇಕು, ಶಾಂತಿ ಅಂದರ ಶಾಂತಿ, ಲಾಟಿ ಅಂದರ ಲಾಟಿ. ಎಲೆಕ್ಷನದಾಗ ಏನ್ ಮಾಡುದುರಣ ಮಾಫ್ ಇರ್ತಾದ. ಅದು ಏನ್ಯಾಕ ಆಗಲ್ದು ಎಲ್ಲದಕು ನಾವು ನಿಮ್ಮ ಹಿಂದ್ ಇರ್ತೀವಿ. ಅಂಜಬ್ಯಾಡ್ರಿ, ನಮಗೆ ಗೆಲ್ಲೋದು ಮುಖ್ಯ ಉಳಿದೆಲ್ಲಾ ಆಮ್ಯಾಲ."[೩೩]

"ಏ ಸೂಳೀ ಮಗನೇ ನಮಗೇನು ಬದುಕು ಅಂತೇ ಬ್ಯಾಡಂತೋ? ನಿನ್ಗ ನಿನ್ನ ತಮ್ಮ ತಂಗಿದೇರಿಗಿ ಹ್ಯಾಂಗ ಸಲು ಅಂತಿ?

ನೀ ದನ ಕಾಯಲ್ದ ಹೋದುರ ಮನಿ ಬಿಟ್ಟು ಹೋಗು ನಿನ್ಗ ಯಾಂವ ಅನ್ನ ಹಾಕ್ತಾನ ? ಎಲ್ಲರಾ ದುಡಿ, ಎಲ್ಲರಾ ಉಣ್ಣು, ನೀ ಏನ್ ಲಕಪತಿ ಮಗ ಅಂತ ತಿಳಿದಿಯೇನು? ಇನ್ ಮ್ಯಾಲ ಇವ್ನಿಗ ಅನ್ನ ಹಾಕ್ ಬ್ಯಾಡೇ. . . ."[೩೪]

ಎಂ.ಜಿ ದೇಶಪಾಂಡೆಯವರು ಬಳಸಿರುವ ಭಾಷೆ ಸರಳವಾಗಿದೆ. ಇಲ್ಲಿ ಆಡುನುಡಿಗಳಾಗಲಿ. ಗ್ರಾಮ್ಯಾ ಭಾಷೆಯನ್ನಾಗಲಿ ಬಳಸಿರುವುದು ಕಂಡು ಬರುವುದಿಲ್ಲ. ಹಾಗೂ ಅಲಂಕಾರಗಳನ್ನು, ವರ್ಣನೆಗಳನ್ನು ಕಥೆಗಳಲ್ಲಿ ತರದೇ ಇರುವುದು ಇವರ ವೈಶಿಷ್ಟ್ಯವಾಗಿದೆ.

"ಏ ನಿನ್ನ ಹೆಸರೇನೇ ವೈಯಾರಿ!

ಮತ್ತೇ . . . . ಯಾಕೆ ನನ್ನ ಹೆಸರಿನಿಂದ ನಿನಗೇನಾಗಬೇಕು. . . .?

ಪಾಪ ಒಬ್ಬಂಟಿಗಳಾಗಿದ್ದಿ, ಸ್ವಲ್ಪ ಮನರಂಜಿಸುವಾ ಎಂದಿದ್ದ. ಆದರೆ

ನೀನೇಕೋ . . . . ಹೀಗೆ . . . . ಗಂಟು ಬಿದ್ದೆ!

ಮತ್ತೇ . . . . ಹೇಗೆ. . . .!

ಪಾಪ ಸುಂದರವಾಗಿದ್ದಿ. . ಲವ್ ಮಾಡೋಣವೆಂದರೆ . . . . .!

ಹಾಗಾದರೆ ನಿನ್ ಲವಗೆ ಇನ್ನೂ ಶಿಕಾರಿ ಸಿಕ್ಕಿಲ್ಲೊ!

ಲೌಗೆ ಹೊಡಿ ಗೋಲಿ. . . . ಸಿಕ್ಕಾಗ ಚಾನ್ಸಗಿಟ್ಟಿಸು. . . . ."[೨೫]

ಇದು 'ಪ್ರತಿಜ್ಞೆ' ಕಥೆಯಲ್ಲಿನ ಶೇಖರನ ಮದುವೆಗೆ ಬಂದಿದ್ದ ತರುಣಿ ಸಹಜವಾಗಿ ಆಡಿದ ಮಾತು ಈ ರೀತಿ ನಿರೂಪಿತವಾಗಿದೆ.

**ಸಂಭಾಷಣೆ**

ಕಥೆಗಳ ಅಂತರಾಳವನ್ನು ಬಿಂಬಿಸುವಲ್ಲಿ ಕೆಲ ಕಥೆಗಾರರು ಪ್ರಾದೇಶಿಕ ಭಾಷೆಯನ್ನು ಸಂಭಾಷಣೆ ರೀತಿಯಲ್ಲಿ, ನಿರೂಪಣಾ ವಿಧಾನದಲ್ಲಿ ಬಳಸಿಕೊಂಡಿದ್ದಾರೆ. ಅವರಲ್ಲಿ ಶಿವರಾಜ ಪಾಟೀಲ, ಸರಿತಾ ಕುಸುಮಾಕರ ದೇಸಾಯಿ, ಸಗರ ಕೃಷ್ಣಾಚಾರ್ಯ, ದೇವೇಂದ್ರ ಕುಮಾರ ಹಕಾರಿ, ಶಾಂತರಸ ಮುಂದಾದವರು ಗ್ರಾಂಥಿಕ ಭಾಷೆಯನ್ನು ಸಹ ಹೆಚ್ಚು-ಕಮ್ಮಿ ಬಳಸಿಕೊಂಡು ತಮ್ಮ ಕಥೆಗಳನ್ನು ಹೆಣೆದಿದ್ದಾರೆ.

ಶಿವರಾಜ ಪಾಟೀಲರ ಕೆಲವು ಸಾಲುಗಳನ್ನಿಲ್ಲಿ ಅವಲೋಕಿಸಬಹುದು." ಫೋನು ರಿಂಗ್ ಮಾಡಿತು, ಸಾವಿತ್ರಮ್ಮ ಪೋನ ಎತ್ತಿ ಕೊಂಡರು.

ಹಲೋ .. . . . . ಯಾರದು?

ನಾನು ರಾಜು ಅತ್ತೆ.

ಏನ್ ವಿಷಯ?

ಜಯಾ ಇದ್ದಾಳೆಯೇ?

ಇದ್ದಾಳೆ, ಇರು ಒಂದ್ನಿಮಿಷ ಕರೀತೇನೆ

ಹಲೋ . . . . ರೀ . . . . ಏನು ವಿಷಯ

ಏನಿಲ್ಲ, ನಿನ್ನ ನೆನಪಾಯಿತು, ಪೋನ ಮಾಡಿದೆಯಷ್ಟೇ"[೬]

ಇವರಂತೆ ಸರಿತಾ ಕುಸುಮಾಕರ ದೇಸಾಯಿಯವರು ಸಹ ಶಿಷ್ಟ ಭಾಷೆಯಲ್ಲಿಯೇ ಕಥೆ ಹೆಣೆದಿರುವುದು ಗಮನಾರ್ಹ.

"ಎಂಥಾ ಮಾತಾಡತೀರಿ ನಾಯಕರೆ . . . . ಭೀಮಶೇನರಾಯರ ಹೆಸರು ಯಾರು ಕೇಳಿಲ್ಲ. ತಾನು ಹಾರ್ಟ್ ಪೇಶಂಟ್ ಇದ್ದೂ ಎಮರ್ಜನ್ಸಿದಾಗ ಎದೆ ಸೆಟೆಸಿ ನಿಂತ ಹುಲಿ ಜಿಗಿದ್ಹಾಂಗ ಜಿಗಿದು ಬಿಟ್ರ ಜೇಲಿನಾಗ.

ಹೌದು ಜೇಲಿನಾಗ ಅವರಿಗೆ . . . . . .

ಹೌದು . . . ಹೌದು . . . . ನನಗ್ಗೊತ್ತದೇಳ್ಳಿ ನಾಯಕರೇ

ಅದಕ್ಕೆ . . . . . ಅವರು . . . .

ನನಗ್ಗೋತ್ತದೇಳ್ರೀ . . . ನನಗೊತ್ತದ . . . .ಪಾಪ . . . ಹೊರಗೆ

ಬಂದ ಮಾರನೇ ದಿವಸನಾ ಹೋದ್ರು . . .ನನಗೊತ್ತದೆ"[೭]

ಶ್ರೀಮತಿ ದೇಸಾಯಿಯವರು ಭಾಷಾ ನಿರೂಪಣೆಯಲ್ಲಿ ಮೇಲುಗೈ ಸಾಧಿಸಿರುವುದರೊಂದಿಗೆ, ಭಾಷೆ ಸಾರ್ಥಕತೆಯನ್ನು ಕಂಡುಕೊಳ್ಳುವಂತೆ ಮಾಡಿದ್ದಾರೆ.

ದೇವೇಂದ್ರ ಕುಮಾರ ಹಕಾರಿಯವರು ಕಥೆಗಳಲ್ಲಿ ಹೆಚ್ಚು ಹಿಂದಿ-ಇಂಗ್ಲೀಷ್ ಪದಗಳನ್ನು ಬಳಸಿ ಇತರರಿಗಿಂತ ಭಿನ್ನ ಎನಿಸಿಕೊಂಡಿದ್ದಾರೆ.

ಇಬ್ಬರು ಸಹಪಾಠಿಗಳ ನಡುವಿನ ಸಂಭಾಷಣೆ ಇಲ್ಲಿದೆ.

"ಆ ಹುಡುಗಿ ಯಾರು ಗೊತ್ತಾಯ್ತೇನು?

ಯಾರು?

ಅರೇ ಅವಳು ಭಾವನಾ . . . . .

ಭಾವನಾ?

ಹೂಂ . . . . ಹೂಂ, ಭಾವನಾ. ನಿನ್ನ 'ಸಫೇದ್ ಹಾಥೀ'. ಅಂದರೆ ನಿಮ್ಮ ಮಾಮಾ. ಡಾಕ್ಟರ ಶಿವರಾಜರ ಮಗಳು?

ಹೂಂ. ಹೂಂ.

ಅಂದರೆ ನೀನು ಎಲ್ಲಾ ಮರ್ತೀದಿ. ಈಗ ಅವರಿಗೆ ಹೈದ್ರಾಬಾದನಿಂದ ಇಲ್ಲಿಗೇ ವರ್ಗ ಆಗಿರೋದು; ಇವೊತ್ತು ರೇಡಿಯೋ ಸ್ಟೇಶನದೊಳಗ ಅವಳ ರಿಕಾರ್ಡಿಂಗ್. ಅದಕ್ಕೆ ಹೋದಳು".[೩೮]

ಇವರ ಜೊತೆಯಾಗಿಯೇ ನಡೆದ ಸಗರ ಕೃಷ್ಣಾಚಾರ್ಯರು ಕೂಡ ಶಿಷ್ಟ ಭಾಷಾ ವಾಹಿನಿಯಲ್ಲಿ ತಮ್ಮ ಕಥಾ ನೌಕೆಯನ್ನು ಸರಾಗವಾಗಿ ಸಾಗಿಸಿಕೊಂಡು ಬಂದಿದ್ದಾರೆ.

ಅಮರೇಶ ನುಗಡೋಣಿ ಅವರು ದಲಿತ ಜಗತ್ತನ್ನು ಇದ್ದಂತೆಯೇ ಕರಾರುವಕ್ಕಾಗಿ ತೋರಿಸುವ ಬಳಸಿಕೊಂಡ ಭಾಷೆಯ ಅಭಿವ್ಯಕ್ತಿ ಕ್ರಮ ಅನನ್ಯವಾದುದ್ದು.

"ನನ್ನ ತಾತಂದಿರಿಗೆ ನೀನು ಕೊಟ್ಟಿದ್ದು ಅಂಗೈ ಅಗಲದ ರೊಟ್ಟಿ ಹಿಡಿಜೋಳದ ಅನ್ನ, ನೀರು ಮಜ್ಜಿಗೆ ಅಷ್ಟೇ, ಅಂಗೈ ಅಗಲದ ರೊಟ್ಟಿಕೊಟ್ಟಿರಿ, ಆ ರೊಟ್ಟಿ ಬೆಳೆವ ಭೂಮಿನ್ನ ನೀವು ಇಟ್ಟಗೊಂಡಿರಿ. ಈಗ ಭೂಮಿನ ಕೊಟ್ಟು ಬಿಡ್ರಿ! ಗೌಡ್ರೆ ರೊಟ್ಟಿ ಬೆಳಕಂಡು ತಿಂತಾರ ಕೇರಿ ಮಂದಿ"[೩೯] ಎಂದ ಚಂದ್ರಪ್ಪ.

"ಚೆನ್ನಮಲ್ಲಯ್ಯ ನಾ ಊರಿಗೆ ಹೋಗ್ತೀನಿ ನೀನು ತಣ್ಣಕಾರು, ನನ್ಗ ಆ ಊರು, ಆ ತುಂಗಮ್ಮನ ನೀರು, ಶಾಂತಗೌಡರ ಬಿಟ್ಟಿರಾಕ ನನಗ ಒಲ್ಲೆ ಅನಿಸ್ತದೆ ಅಂತ ಅಂದು ಮರುದಿನವೇ ಓಡಿ ಬಂದು ಬಿಟ್ಟಿದ್ದ",[೪೦] ರಕ್ತ ಸಂಬಂಧಕ್ಕಿಂತಲೂ ಧಣಿಯೊಡನೆ ಇರುವ ಬಾಂಧವ್ಯದ ಸೆಳೆತ ಹೆಚ್ಚು ಎಂಬುದು ಇಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.

**ಗಾದೆಗಳು**

ಬಂದಾಗ ಹೋದ್ರ ಬಂಧನ ಇಲ್ಲ (ತಮಂಧದ ಕೇಡು)

ಎಲ್ಲಿ ಉರಿವ ಕೊಳ್ಳಿ ಅಲ್ಲೇ ಉರಿದ್ರ ಚೆಂದ!

ಒಲ್ಯಾಗ ಉರಿವ ಕೊಳ್ಳಿ ಒಲೆ ಬಿಟ್ಟು ಬ್ಯಾರೆ ಕಡೆ ಉರ್‍ಯಾಕ

ಹತ್ತಿತಂದ್ರೆ ಏನಾದೀತು? (ತಮಂಧದ ಕೇಡು)

**ಪ್ರಾದೇಶಿಕ ಪದಗಳು**

ದುಮುದರಿ, ಗಳೇವು, ಕ್ಯಾಲ, ಗುಡಾಣಿ, ಕಳ್ಳು ಕಕ್ಕಲತಿ, ಬಾಚಾಪ್ತ, ಕೂನ, ಕಬರು,

ಹೀಗೆ ನುಗಡೋಣಿಯವರು ಕಥೆಗಳಲ್ಲಿ ಪ್ರಾದೇಶಿಕತೆಯ ಸೊಗಸನ್ನು ಹದವರಿತು ಬಳಸುತ್ತಾರೆ. ಪ್ರಾದೇಶಿಕ ದಿನಬಳಕೆಯ ವಸ್ತು, ಕೃಷಿ ಸಾಮಾಗ್ರಿಗಳು, ಪಡೆನುಡಿಗಳು, ಗಾದೆಗಳು, ಸಂದರ್ಭಕ್ಕೆ ತಕ್ಕಂತೆ ಬಳಸುವಿಕೆಯ ಜೀವಂತಿಗೆ ಸಾಕ್ಷಿಯಾಗಿದೆ.

ಚಿತ್ರಶೇಖರ ಕಂಠಿಯವರು ಹೈದರಾಬಾದ್ ಕರ್ನಾಟಕದ ಖಿಚಡಿ ಭಾಷೆಯೆಂದೆ ಪ್ರಸಿದ್ಧಿಯಾದ ಗುಲಬರ್ಗಾ ಕನ್ನಡವನ್ನು ತಮ್ಮ ಸುತ್ತಮುತ್ತಲಿನ ಜನರಾಡುವ ಪ್ರಾದೇಶಿಕ ಭಾಷೆಯನ್ನು ಬಳಸಿದ್ದಾರೆ.

“ಇಪ್ಪತ್ತ ಸಾವಿರಂದ್ರ ತೋಲಾಯ್ತು (ಬಹಳ) ಪಾಚ್ ಪನ್ನಾಸಂದ್ರ ಅಡ್ಡಿ ಇಲ್ಲ. ಒಮ್ಮೆ ದೋನ್ ಅಡಿಸೆ ಅಂದ್ರ ಒಜ್ಜಿ ಆತದೋ ಏನೋ”[೪೧]

“ಯಾವನೋ ಸೂ .. ಮಗ ಖಂಡ (ಮಾಂಸ) ತಂದು ಗುಡ್ಯಾಗ ಹಾಕ್ಯಾನ”.[೪೨]

“ಇಲ್ಲೀಟು ರೋಮ ದುಡಿದು ದೂಸರಾ ಮಾತಾಡಲ್ದಾಂಗ ಇದ್ದರನೂ ದೊಡ್ಡವ್ವ ಹೊಟ್ಟೆ ತುಂಬ ಉಳ್ಳಕ ಕುಡಲ್ಲ”[೪೩]

“ಹೊಟ್ಟೆ ಹಸಿವು ಅನ್ನದೇ ಇರ್ತಿರಲಿಲ್ಲಂದ್ರ ಮನುಷ್ಯ ಹ್ಯಾಂಗಿರತಿದ್ದನೊ ಯಾರಿಗಿ ಗೊತ್ತು”[೪೪]

“ಮಹಿಳೆಯೊಳಗ ನೆನೆದ ಹಕ್ಕಿ ಮುದಡಕೊಂಡು ಕುಂತಂಗ ಕುಂತಿದ್ದಳು ಸಿದ್ಧಮಾಯಿ”[೪೫]

“ಓಡಾಮುಂದೆ ಎಡ್ಡಗಜ ಎತ್ತರದ ಕಟ್ಟೆಮ್ಯಾಲಿಂದ ಬಟಕಿನ ಮ್ಯಾಲ ಬಿದ್ದು ಗಟಬಾಯಿ ಒಡ್ಕೊಂಡು ಮೈ ತುಂಬಾ ರಗತಾ ರೌಮಂಡಳ ಮಾಡ್ಕೊಂಡು...”[೪೬]

“ಹಳೇ ಮಂದಿ ಅಂದ್ರೆ, ಒಂದು ನಮೂನಿ ಹುಣ್ಣಿದ್ದಂಗ ಜಲ್ದಿ ಮಾಯಂಗಿಲ್ಲ, ತ್ರಾಸ ಕೊಡದನೂ ಬಿಡಂಗಿಲ್ಲ.”[೪೭]

“ಕಾಲಿಗಿ ಬಡದ ಕಲ್ಲು ಕರಿಗಿ ಹೋಗಿ, ಅಂಗಾಲಿಗೆ ಚುಚ್ಚಿ ಮುಳ್ಳು ಬಯಲಾದ್ದು”[೪೮]

ಅಡ್ಡಕಸಬಿ, ಹೊಂಬ, ಲೌಡಿಮಗ, ಬಿಕನಾಸಿ, ಬಾಡಕಾವ್, ಹಳ್ಳುಗ ಹೀಗೆ ಸಂಕಲನಗಳ ಪುಟಪುಟದಲ್ಲೂ ಕಾಣುವ ಭಾಷಾ ಬಳಕೆಯಲ್ಲಿ ದೇಶೀಯ ಸತ್ವ ತುಂಬಿ ತೊನೆಯುತ್ತದೆ.

ಇವರ ಕಥೆಗಳಲ್ಲಿ ಅನ್ಯಾಭಾಷೆಯ ಪದಗಳ ಗಾದೆಗಳು, ದ್ವಿರುಕ್ತಿ, ಜೋಡುನುಡಿ, ಸಂದರ್ಭೋಚಿತವಾಗಿ ಬಳಕೆಗೊಂಡು ಕಥಾ ಮೌಲ್ಯ ಹೆಚ್ಚಿಸುವಲ್ಲಿ ತುಂಬಾ ಉಪಯುಕ್ತವಾಗಿವೆ.

ಅನ್ಯಭಾಷಾ ಪ್ರಭಾವಃ ಭಾಷೆಯ ಸಾಂಸ್ಕೃತಿಕ ಸ್ವೀಕರಣದಲ್ಲಿ ಕೊಡು ಕೊಳ್ಳುವಿಕೆಯು ನಿರಂತರವಾದದ್ದು ಭಾಷಾ ಸ್ವೀಕರಣ ಕಾರ್ಯವೂ ಯಾವುದೇ ಎರಡು ಭಾಷೆಗಳು ಸಂಪರ್ಕಕ್ಕೆ ಬಂದಾಗ ನಡೆಯುವ ಕ್ರಿಯೆ, ಇದು ಭಾಷಾ ದೌರ್ಬಲ್ಯವಲ್ಲ ಪಾಶ್ಚಾತ್ಯ, ಪೌರಾತ್ಯ ಭಾಷೆಗಳ ನಿಕಟ ಪರಿಚಯವಿರುವ ಕಂಠಿಯವರಲ್ಲಿ ಹಿಂದಿ-ಮರಾಠಿ, ಇಂಗ್ಲೀಷ ಪದಗಳು ಹೇರಳವಾಗಿ ದೊರೆಯುತ್ತವೆ.

**ಆಂಗ್ಲ**

ಹ್ಯಾಂಡ್ ಪಂಪ್, ಫಿಕ್ಸ್ ಡೆಪಾಸಿಟ್, ಗ್ಯಾರೇಜ, ಪೇಮೆಂಟ್, ರಿಪೋರ್ಟ್, ಕಾಫಿ, ವೇಟರ್ಸ್, ಟಿಪ್ಸ್, ಬ್ಲಾಕ್ ನಂಬರ್, ಐಯಾಮ್ ವೇರಿ ಸಾರಿ ಟು ಸೇ ಮಿಸ್ಟರ ಎಕ್ಸಕ್ಯೂಸ್ಮಿ ಮೀ, ಟೇಬಲ್ ಲ್ಯಾಂಪ್

**ಗಾದೆ**

ಗಾದೆ ಮಾತುಗಳು ಸಂದರ್ಭೋಚಿತವಾಗಿ ಪ್ರಯೋಗಗೊಂಡಿದ್ದು ಸನ್ನಿವೇಶಗಳನ್ನು ಪರಿಣಾಮಕಾರಿಯನ್ನಾಗಿ ಮಾಡಿದೆ.

'ಎತ್ತು ಎರಿಗೆಳದರ ಕ್ವಾಣ ಕೆರೆಗೆಳಿತು'

'ಕೈಗಿ ಬಂದದ್ದು ಬಾಯಿಗಿಲ್ಲದಂಗಾಗಿ'

'ಹಸಿ ಹುಣ್ಣಿಗಿ ನೊಣ ಮುಕರಿದಂಗ'

'ಹೊಳ್ಯಾಗ ಹುಣಚಿ ಹಣ್ಣು ತೊಳದಾಂಗಾಯ್ತು'

'ಇಲ್ಲದ್ದು ಮಾಡದಕ ಹೋಗಿ ಮಾರಿಗಿ ಇಲ್ಲಣ ಬಡಕೊಂಡೆಲ್ಲ'

'ಮಾಡಿದಾಂವ ಉಣತಾನ ಮಣಿ ಹಂತ ಕಡಬು'

'ರಂಡಮುಂಡೇರ ಮದಿವ್ಯಾಗ ಉಂಡೋನೆ ಜಾಣ

'ಊರಬಲ್ಲಿಂದ ಉಹೊಲ ಅಲ್ಲ ಅಡ್ಯಾಗಿಂದು ಮನಿ ಅಲ್ಲ'

'ಕುಳಿತುಂಡರೆ ಕುಡಿಕೆ ಹೊನ್ನೂ ಸಾಕಾಗಲ್ಲ.'

'ದೋಬಿ ಕಾ ಕುತ್ತಾ ನ ಘರ ಕಾ ನಾ ಘಾಟ್ ಕಾ'

'ಹಾಸಿಗಿ ಇದ್ದೋಟು ಕಾಲು ಚಾಚು'

'ಹೆತ್ತೋರಿಗೆ ಹೆಗ್ಗಣ ಮುದ್ದು'

'ಉರದಾಂವ ಊರಾಗಿರಲ್ಲ ಮೆರದಾಂವ ಕೇರ್‍ಯಾಗಿರಲ್ಲ'

**ದ್ವಿರುಕ್ತಿ–ಜೋಡು–ನುಡಿ**

ಫದಿ–ಫದಿ, ವಚ ವಚಾ, ಮಿಣಿ ಮಿಣಿ, ಗಟ್ ಗಟ್, ಸುರು ಸುರು, ಬಿಸಿ ಬಿಸಿ, ದುಬು ದುಬು, ಚಿಲಿ ಪಿಲಿ, ಜಿಟಿ ಜಿಟಿ, ಮಿರಿ ಮಿರಿ, ಗುಸು ಗುಸು, ಸುಡ ಸುಡಾ, ಮಣ ಮಣ, ಕಿಟಿ ಕಿಟಿ, ಬೋರ ಬೋರ ಸಳ್–ಫಳ್, ಈಗೋ–ಆಗೋ, ಕೂಲಿ–ನಾಲಿ, ಹಕ್ಕಿ–ರೆಕ್ಕಿ, ಚಿಟಿ–ಪಿಟಿ, ದಡ್–ಬಡಂ ತರಾತುರಿ, ಹರಕಿ–ಪರಕಿ

ಒಟ್ಟಾರೆ ಹೇಳಬೇಕೆಂದರೆ ಸಣ್ಣ ಕಥಾ ಸಾಹಿತ್ಯದಲ್ಲಿ ಚಿತ್ರಶೇಖರ ಕಂಠಿಯವರು ಪ್ರಾದೇಶಿಕ ಭಾಷೆಯ ಉಜ್ವಲತೆಯನ್ನು ಮೈಗೂಡಿಸಿಕೊಂಡಿದ್ದಾರೆ ಕಥೆ ಹೇಳುತ್ತ ಹೋದಂತೆ ಅವರಿಗೆ ಭಾಷೆ ಶೈಲಿ ಒಲಿದು ಬಿಟ್ಟಿದೆ ಅದು ತೀರ ಸಪ್ಪೆಯಾಗಿ ಎಲ್ಲೂ ಕಂಡೂ ಬರದೆ ಅದರದೇ ಆದ ಅವರ ಧೋರಣೆ ಒಳಗೊಂಡಿದೆ.

ಚಿತ್ರಶೇಖರ ಕಂಠಿಯವರ "ತಂತ್ರ ಹೊರಗಿನಿಂದ ತಂದು ಹೇರಿದ ಒಂದು ವಸ್ತುವಾಗಿರದೇ ಅವರ ಅನುಭವದ ಸೂಕ್ಷ್ಮಾತಿಶಯಗಳನ್ನೆಲ್ಲ ಪ್ರಭಾವಪೂರ್ಣವಾಗಿ ಪ್ರಕಟಿಸುವ ಸಾಧನವಾಗಿದೆ."[೫೯] ಇವರ ತಮ್ಮ ಅನುಭವದ ಒಂದೊಂದು ಮುಖದ ಅಭಿವ್ಯಕ್ತಿಗೂ ಒಂದೊಂದು ಮಾಧ್ಯಮವನ್ನು ಬಳಸಿಕೊಂಡಿದ್ದಾರೆ.

ಕಥೆಯ ಪಠಿಣಾಮಕಾರಿಯಾದ ಅಭಿವ್ಯಕ್ತಿಗೆ ನಿರೂಪಕ ಪಾತ್ರಗಳು ತಂತ್ರಗಳು, ಸ್ವಗತ ತಂತ್ರ, ಕಾಲ್ಪನಿಕ ತಂತ್ರ, ವರ್ಣನಾತಂತ್ರ, ಸಂಭಾಷಣಾ ತಂತ್ರ, ಪತ್ರ ತಂತ್ರ, ಪ್ಲ್ಯಾಶ್ ಬ್ಯಾಕ್ ತಂತ್ರ, ಈ ಎಲ್ಲಾ ವಿಧಾನಗಳನ್ನು ಪ್ರಸ್ತುತ ಇವರ ಕಥೆಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಒಳಗೊಳ್ಳುತ್ತವೆ. ವಾಚಕರಲ್ಲಿ ಕುತೂಹಲ ಕೆರಳಿಸಿಕೊಂಡು ಹೋಗುವ ತಂತ್ರವೊಂದು ವಸ್ತುವಿನಿಂದ ಹೊರಗುಳಿದು ಮೋಹಕವೆನಿಸಿ ವಸ್ತುವನ್ನು ಗೌಣಗೊಳಿಸುವ ಸಾಧ್ಯತೆಗಳು ಇವರ ಕಥೆಗಳಲ್ಲಿ ಇಲ್ಲ. ಇಲ್ಲಿನ ತಂತ್ರವು ವಸ್ತು ಅರಳುವ ರೀತಿಯಿಂದ ನಿರ್ಧಾರವಾಗುತ್ತವೆ.

ವರ್ಣನಾ ತಂತ್ರ ಚಿತ್ರಶೇಖರ ಕಂಠಿಯವರ ಅನೇಕ ಕಥೆಗಳಲ್ಲಿ ಪರಿಣಾಮಕಾರಿಯಾಗಿ ಬಳಕೆಯಾಗಿದೆ. "ಮುಂಬೆಳಗಿನ ಇಬ್ಬನಿ ಹನಿ ಮೆತ್ತಿಕೊಂಡ ಮೊಗ್ಗು ಅರಳುವಂತೆ ಹೆಡ್ಮಾಸ್ತರರ ಕಣ್ಣರೆಪ್ಪೆ ತೆರೆದುಕೊಡವು"[೬೦] ಇಂತಹ ವರ್ಣನಾ ತಂತ್ರವನ್ನು ಅನೇಕ ಕಥೆಗಳಲ್ಲಿ ಬಳಸಿಕೊಂಡಿರುವುದು ಸ್ಪಷ್ಟವಾಗಿ ತೋರುತ್ತದೆ.

'ವಾಸ್ತವ ಮತ್ತು ಮುಗಿಲ ಮಾರಿಗೆ', 'ಏಣಿ ಇಟ್ಟು' ಕಥೆಯಲ್ಲಿ ಪತ್ರ ತಂತ್ರದ ಸಾಧ್ಯತೆಯನ್ನು ತೋರಿಸಿದ್ದಾರೆ.

"ಎಷ್ಟು ದಿವಸ ನಾನು ಟ್ರೇಟಮೆಂಟ್ ತಗೋಬೇಕಾಗುತ್ತೆ ಡಾಕ್ಟ್ರೆ.

ಒಂದು ವರ್ಷವಾದರೂ ಆಗಬಹುದು.

ಅಂದ್ರೆ ಒಂದು ವರ್ಷ ನಾನು ಇಲ್ಲೇ.."[೬೧] ಎನ್ನುವ ಸಂಭಾಷಣ ತಂತ್ರವನ್ನು ಇವರು ಅನೇಕ ಕಥೆಗಳಲ್ಲಿ ಬಳಸಿಕೊಂಡಿದ್ದಾರೆ.

"ಅವನಾಗ ಮೂರು ವರ್ಷದ ಮಗು ಮಲೇರಿಯಾದಿಂದ ನರಳುತ್ತಿದ್ದಾಗ ಹಗಲಿರುಳೂ ನನ್ನ ಎದೆಯ ಮೇಲೆ ಮಲಗಿಸಿಕೊಂಡಿರುತ್ತಿದ್ದೆ"[೬೨] ಎನ್ನುವ ಪ್ಲಾಶ್ ಬ್ಯಾಕ್ ತಂತ್ರವನ್ನು ಬಳಸಿಕೊಂಡಿದ್ದಾರೆ.

ನಿರೂಪಣಾ ತಂತ್ರವೂ ಕಥೆಯ ಪರಿಣಾಮಕಾರಿ ಅಭಿವ್ಯಕ್ತಿಗೆ ಕಾರಣವಾಗುತ್ತದೆ. "ಆಗಿನ್ನೂ ಸುಖದ ಕಾಲ, ಮಳಿ, ಬೆಳಿ, ಗಾಳಿ, ಬಿಸಿಲು ಎಲ್ಲಾ ಸರಿಯಾಗಿದ್ದು ಹಳ್ಳಿಗಳಿಗಿನ್ನೂ ಶಹರದ ಗಾಳಿ ಬಡಿದಿರಲಿಲ್ಲ. ಮನಿ-ಮನಿ, ಕೇರಿಕೇರಿಯೊಳಗೆ ರಾಜಕೀಯ ಬಂದಿರಲಿಲ್ಲ. ಜಾತಿ ಧರ್ಮದ ಬೆಂಕಿ ಹತ್ತಿರಲಿಲ್ಲ ಮಂದಿ ಕೆಲಸ ಇತ್ತು, ನೀತಿ-ನೀಯತ್ತಿತ್ತು."[೬೩]

ಚಿತ್ರಶೇಖರ ಕಂಠಿಯವರು ಪಾತ್ರ ತಂತ್ರವನ್ನು ತಮ್ಮ ಅನೇಕ ಕಥೆಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಊರಬೀದಿಯಲ್ಲಿ ಕಳಸಪ್ಪನ ಶವ ಸಾಗಿಸುತ್ತಿರುವಾಗ ಕಂಬನಿ ಮಿಡಿಯದವರೇ ಇಲ್ಲ ಹಳ್ಳಿಯ ಹಾದಿಯುದ್ದಕ್ಕೂ ಹೂವಿನ ಹಾಸುಗೆ ಹಾಸಿದಂತಿತ್ತಾದರೂ ಇಡೀ ಊರಿಗೇ ಸುಮಧುರ ಪರಿಮಳ ಬೀರಿದ ಹೂವೊಂದು ಬಾಡಿ ಹೋಗಿತ್ತು ಅದೆಷ್ಟೋ ಜೀವಿಗಳ ಹೃದಯ ಭಾರಗೊಳಿಸಿತ್ತು.

ಮಾನವೀಯ ಅನುಭವವೇ ಮೂಲ ದ್ರವ್ಯವಾದ ಸಾಹಿತ್ಯದ ಮಟ್ಟಿಗೆ ಹೇಳುವುದಾದರೆ ತಂತ್ರ ಇದು ಕಾಲವನ್ನು ಭಾಷೆಯಲ್ಲಿ ಹಿಡಿದು ನಿಲ್ಲಿಸುವ ವಿಧಾನ, ಅನುಭವಕ್ಕೆ ಶಿಲ್ಪ ಮೂಡಿಸುವ ಕ್ರಮ ಇದರ ಮಹತ್ವವನ್ನು ಕವಿ ಗೋಪಾಲಕೃಷ್ಣ ಅಡಿಗರು ತಮ್ಮ ಸಮಗ್ರ ಕಾವ್ಯದ ಮುನ್ನುಡಿಯಲ್ಲಿ ಹೀಗೆ ತಿಳಿಸುತ್ತಾರೆ. ಒಂದು ಕಲೆ ಅಥವಾ ಕವನ ಸಫಲವಾಗುವುದು ಅದರಲ್ಲಿ ಕಥೆಗಾರ ಕಾಲವನ್ನು ತಡೆ ಹಿಡಿದು ನಿಲ್ಲಿಸಿದಾಗ ಹೀಗೆ ನಿಲ್ಲಿಸುವುದು ಸಾಧ್ಯವಾಗುವದು ಭೂತ ಭವಿಷತ್ತು ವರ್ತಮಾನಗಳನ್ನು ಒಂದೇ ಬಿಂದುವಿನಲ್ಲಿ ತಂದು ಕೇಂದ್ರಿಕರಿಸಿದಂಗ ಕಥೆಗಾರ ಇದರ ಜೊತೆಗೆ ತಾನು ಹೇಳುವ ವಿಷಯವನ್ನು ನೇರವಾಗಿ ಹೆಳದೆ ಹೋಲಿಕೆ ಮುಖಾಂತರ ಹೆಳುವುದು ಕೂಡ ಕಥೆಯ ತಂತ್ರಕ್ಕೆ ಸಹಾಯಕವಾಗುತ್ತದೆ. ಇವರ ಪಲಾಯನ ಕಥೆಯಲ್ಲಿ ಧಾರ್ಮಿಕ ನಂಬಿಕೆಗೆ ಹುಡುಗನ ಪಲಾಯನ ಮಾಡಿಸಿರುವುದು ಕಥೆಗಾರ ಪಾತ್ರ ಚಿತ್ರಣದಲ್ಲಿಯ ತಂತ್ರವಾಗಿದೆ.

ಶಾಂತರಸರು ಕಥೆಗಳಲ್ಲಿ ಸಂಭಾಷಣೆಯನ್ನು ಅದ್ಭುತವಾಗಿ ತರುತ್ತಾರೆ. ಕಥೆಗಳಲ್ಲಿರುವ ನಾಟಕೀಯ ಗುಣ ಅವರ ಶೈಲಿಗೆ ವಿಶಿಷ್ಟ ಕಳೆ ತುಂಬುತ್ತದೆ. ಅವರ ಎಲ್ಲ ಕಥೆಗಳನ್ನು ನಾಟಕ ರೂಪಾಂತರಕ್ಕೆ ಅಳವಡಿಸಬಹುದಾಗಿದೆ. ಈಗಾಗಲೇ "ಕಂಬಳಿ ನಾಗದೇವ, ನಾಯಿ ಮತ್ತು ಪಿಂಚಣಿ, ಮಲೀನ ಮಜ್ಜನ ನ್ಯಾಯಕ್ಕೇಳಸಿ ಮತ್ತು ಬೆಸ್ತು" ಕಥೆಗಳನ್ನು ರಂಗರೂಪಾಂತರಕ್ಕೆ ಅಳವಡಿಸಿ ಯಶಸ್ವಿ ಪ್ರಯೋಗವನ್ನು ಕಂಡಿವೆ. ಇವು ಕಥೆಗಳೋ? ಪ್ರಹಸನಗಳೋ? ಎನ್ನುವಷ್ಟರ ಮಟ್ಟಿಗೆ ಇವುಗಳಲ್ಲಿ ನಾಟಕೀಯತನ ಮೈಗೂಡಿಸಿಕೊಂಡಿದೆ. ಹಾವಮ್ಮ, ರೋಗಿ. ಮಲ್ಲಮ್ಮ, ಕಿಡಿ, ಬಡೇಸಾಬು ಪುರಾಣ, ಗೋದಾನ ಮುಂತಾದ ಕಥೆಗಳಲ್ಲಿ ಸಮೃದ್ಧ ಸಂಭಾಷಣೆ ಬರುತ್ತದೆ. "ಹಾವಮ್ಮ ಮತ್ತು ರೋಗಿ" ಇಡೀ ಕತೆ ಸಂಭಾಷಣೆಯಲ್ಲಿ ರಚನೆಗೊಂಡಿದೆ.

೧) 'ರೋಗಿ' ಕಥೆಯಲ್ಲಿ ಡಾ.ಸಾಂಬಣ್ಣ ಮತ್ತು ಸಾವಿತ್ರಿಯ ಮಧ್ಯೆ ನಡೆಯುವ ಸಂಭಾಷಣೆ ಇದು. "ನಾನೆಷ್ಟೋ ಸಲ ಹೇಳಿದ್ದೇನಲ್ಲ, ಅದೇ ಮಾತು ಈಗ"

ಹೇಳ್ತಿನಿ ನಿಮ್ ಮೈಯಾಗ ಏನೇನು ಜಡ್ಡಿಲ್ಲ". ಜಡ್ಡಿಲಂದ್ರ ಹಂಗ್ಯಾಕಾಗ್ತದ?"

"ಏನೂ ಆಗಾದಿಲ್ಲ ಅದೆಲ್ಲ ನಿಮ್ಮ ಭ್ರಮೆ. ನನಗೇನೂ ಆಗಿಲ್ಲಂತೆ ಖುಷಿಯಾಗಿ ಇರ್ರಿ, ಏನು ಆಗಾದಿಲ್ಲ"

"ಹ್ಯಾಂಗ ಖುಷಿಯಾಗಿ ಇರ್ ಬೇಕು ಡಾಕ್ತ್ರೆ?"

"ಖುಷಿಯಾಗಿ ಇರ್‌ದಿದ್ರ ನಿಮಗೇನು ಅಂತಾ ಕಷ್ಟಗಳಾವ ? ಚಿಂತಿಲ್ದ ಜೀವನಾ ನಿಮ್ದು".

"ಅದೇನು ಖರೇ . . . . . ."

ಮತ್ತೇ ಬ್ಯಾರೇನು ಚಿಂತಿ ?"

"ಏನೂ ಇಲ್ಲ"

"ಹಂಗೇನ್ರಿ, ಏನೂ ಇಲ್ಲ ಅಂದ್ ಕತ ಇದ್ರೆ ಯಾವ ಯಾವ್ ಬ್ಯಾನೀನೂ ಬರಂಗಿಲ್ಲ"

"ಹಂಗೇ ಆಗ್ಲಿ ಡಾಕ್ಟ್ರೇ, ಈಗ ನಾ ಹೋಗ್ಲಾ ?"

"ಹೋಗ್ರೀ"[೩೪]

೨) "ಹಾವಮ್ಮ" ಕಥೆಯಲ್ಲಿ ನಾಯಕ ದಣಿಯ ಜೊತೆಗೆ ಹಾವಮ್ಮ."

"ದಣೀ, ನನ್ನ ಬುಟ್ ಬುಡ್ ದಣೀ" ಅಂದ್ಲು

"ಯಾಕ ?" ಅಂದೆ

"ಯಾಕಿಲ್ಲ ದಣೀ ಬುಟ್ ಬುಡ್ರಿ"

"ನನ್ನಿಂದ ಬ್ಯಾಸ್ರ ಬಂತೇನು ?"

" ಇಲ್ಲ"

"ಮತ್ತೆ ರೊಕ್ಕಾಗಿಕ್ಕ ಬೇಕೇನು ?"

" ಬ್ಯಾಡ್"

"ಮತ್ತೆ ಯಾಕ್ ಬುಡಂತಿದ್ದಿ. ಯಾರಾದ್ರು ಸಿಕ್ಕಿರಬೇಕು ಚೆಲೋರು ?"

"ಅದ್ಕಾ ನನ್ನ ಬುಡಂತಿದ್ದ"

" ಇಲ್ಲ ದಣೀ, ಯಾರು ಸಿಕ್ಕಿಲ್ಲ, ನಾನಂತವಳಲ್ಲ"

"ಹಂಗಾರ ಯಾಕ್ ಬುಡಂತಿದ್ದಿ? ಯಾರಾ ಇನ್ನೊಬ್ರು ಸಿಕ್ಕಿರ್‌ಬೇಕು"

" ಇಲ್ಲಂದಿನೆಲ್ಲ ದಣೀ, ಮತ್ತೇ ಅದೇ ಮಾತಂತೀರಿ ?"[೩೫]

೩) ಮಲ್ಲಮ್ಮ ಕಥೆಯಲ್ಲಿ ಮಲ್ಲಮ್ಮ ಮತ್ತು ಬೂದೆಣ್ಣನ ನಡುವೆ ಸಂಭಾಷಣೆ.

"ಕುಂದ್ರಣ್ಣ"

"ಏನೋ ಗುರಪ್ಪ ಗಲಾಟಿ ಮಾಡಿದ್ನಂತ ?"

"ಮನೆಮಾರಿ ರಜಿಸ್ಟ್ರಿ ಮಾಡಿಸ್ಯಾನಂತ, ಅದಕ್ಕಾಮನಿ ಬುಡು ಅಂತ ಬಂದಿದ್ದ"

"ಎಷ್ಟಕ್ ಮಾರ್‍ಯಾನಂತ"

'ಮೂರು ಸಾವಿರಕ'

"ಒಳಗೊಳಗೆ ತಿಮ್ಮಣ್ಣ ಏನೇನೋ ಮಾಡಿ ಹೋಗ್ಯಾನ? ಏನ್ ಮಾಡಿದ್ನೊ ಇಷ್ಟಾತ್‌ಗಂಡು".

"ದೇವ್ರಿಗೆ ಗೊತ್ತು"

"ನನ್ನಲ್ಯಾದ್ರೂ ಇದ್ದರ ಅಷ್ಟರೊಕ್ಕ ಕೊಟ್ಟಮನೆ ಬುಡಸ್ತಿದ್ದೆ"

"ನನ್ನ ಸಲುವಾಗಿ ನೀ ಇಷ್ಟ ಮಾಡತಿರೋದೆ ಹೆಚ್ಚಲ್ಲಣ್ಣಾ ನೀ ಇರದಿದ್ರೆ ನಾಸತ್ತೆ ಹೋಗ್ತಿದ್ದೆ"

" ನಾಳೇನೇ ಮನೆ ಬುಡ್‌ಬೇಕಂತೇನು ?"

"ಹೌದು ಹಂಗೆ ಏಳ್ಯಾನ, ಬುಡದಿದ್ರ ಕೇಳ್ಯಾನೇ; ಮೊದ್ಲೆ ಮಂಡ"

"ಮುಂದ"

"ಮುಂದ ಕೆರೆಬಾವಿ ಅಷ್ಟೇ, ನನ್ನ ಪಾಲಿಗುಳದದ್ದು"[೨೬]

ಹೀಗೆ ಶಾಂತರಸರು ನಿರರ್ಗಳವಾಗಿ ಅರ್ಥಪೂರ್ಣ ಸಂಭಾಷಣೆಯನ್ನು ತರುತ್ತಾರೆ. ಇವರ ಶೈಲಿಯ ಬೆರಗುಗೊಳಿಸುವ ಇನ್ನೊಂದು ಸಂಗತಿಯೆಂದರೆ ಸಂಭಾಷಣೆಯಿಂದಲೇ ಕಥೆಯನ್ನು ಪ್ರಾರಂಭಿಸುವುದು. "ಮಾಯೆ ಅಂದ್ರೆ ಮಾಯೆ" ಮತ್ತು "ರೋಗಿ" ಈ ಎರಡು ಕಥೆಗಳು ಸಂಭಾಷಣೆಯಿಂದಲೇ ಪ್ರಾರಂಭವಾಗುತ್ತವೆ.

**ಗಾದೆಮಾತುಗಳು**

ಗಾದೆಗಳು ಜನಸಾಮಾನ್ಯರ ಅನುಭವದಿಂದ ಹುಟ್ಟಿದವುಗಳಾಗಿವೆ. ಇವುಗಳು ಕಥೆ ಕಾದಂಬರಿಗಳಲ್ಲಿ ಹೆಚ್ಚಾಗಿ ಬಳಕೆಗೊಂಡು ಓದುಗರನ್ನು ಸೆಳೆದುಕೊಳ್ಳುತ್ತವೆ. ಇಲ್ಲಿ ಕೆಲ ಕಥೆಗಾರರು ತಮ್ಮ ಕಥೆಗಳಲ್ಲಿ ಗ್ರಾಮೀಣ ಭಾಷೆಯನ್ನು ಬಳಸಿಕೊಂಡಿರುವುದರಿಂದ ಇಲ್ಲಿಯ ಜನರ ನಾಲಿಗೆಯ ಮೇಲೆ ನಲಿದಾಡುವ ಗಾದೆ ಮಾತುಗಳನ್ನು ಹಾಗೆಯೇ ಬಳಸಿಕೊಂಡಿದ್ದಾರೆ. ಅವರಲ್ಲಿ ಮುಖ್ಯವಾಗಿ ಶಾಂತರಸ, ಭಾಲಚಂದ್ರ ಜಯಶೆಟ್ಟಿ, ಬಿ.ಟಿ.ಲಲಿತಾ ನಾಯಕ, ಗುರುನಾಥ ಅಕ್ಕಣ್ಣಾ, ಶ್ರೀಕಾಂತ ಪಾಟೀಲ. ಶಿವಕುಮಾರ ನಾಗವಾರ, ಸುಬ್ಬಣ್ಣ ಅಂಬೆಸಂಗೆ ಮುಂತಾದವರು.

೧) ಉಣಸೇ ಗಿಡಕ್ಕ ವಯಸಾದ್ರೆ ಹುಳಿ ಕಡಿಮ್ಯಾಗ್ತದೇನು.(ಮಾಯೆ ಅಂದ್ರೆ ಮಾಯೆ ಪುಟ–೧೪)

೨) 'ಇದ್ದದ್ದು ಆಡಿದರೆ ಸಿದ್ದಯ್ಯಗೆ ಸಿಡ್ಲು ಬಡಿಯಿತು'(ನಾಯಿ ಮತ್ತು ಪಿಂಣಿ ಪುಟ–೧೬)

೩) ಆಳೋ ಗಂಡ್ಸಿಗೆ ಸಾವಿರ ಹೆಂಗಸರು' (ಬಡೆಸಾಬ ಪುರಾಣ ಪುಟ– ೧೪೪)

೪) 'ಶಿವ ಪೂಜ್ಯಾಗ ಕರಡೀ ಬುಟ್ಟಂಗ'(ಬೆಸ್ತು ಪುಟ–೫೫)

೫) ಕುರುಬಗ ಹೂ ಕೊಟ್ರ, ಎಲ್ಲ್ಯೋ ಇಟಗಂಡನಂತ' (ಕಿಡಿ ಪುಟ–೭೯)

೬) ಕಬ್ಬು ಡೊಂಕಾದರೆ ಅದರ ಸಿಹಿ ಡೊಂಕೆ' (ನಾಯಿ ಮತ್ತು ಪಿಂಚಣಿ ಪುಟ–೧೦೦)

೭) "ಒಂದು ವಯಸ್ಸಿನಲ್ಲಿ ಹೆಣ್ಣು ಮಕ್ಕಳಿಗೆ ನಡೆದಾಗ ನೆಲವೇ ಕಾಣಿಸೋದಿಲ್ವಂತೆ" (ಹಬ್ಬ ಮತ್ತು ಬಲ ಪುಟ–೭೨)

೮) 'ಆಚಾರ ಕೆಟ್ರೂ, ಆಕರ ಕೆಡಬಾರ್ದು ಅಂತಾರ' (ಕೋಡ್ಗಲ್ಲಿನ ಕೂಗು ಪುಟ–೨೯)

೯) 'ಇನಾಶ ಕಾಲೇ ಇಪರೀತ ಬುದ್ದಿ' (ಕೋಡ್ಗಲ್ಲಿನ ಕೂಗು ಪುಟ–೩೭)

೧೦) "ಗುಬ್ಬಿ ಮ್ಯಾಲ ಬ್ರಹ್ಮಾಸ್ತ್ರ ಬಿಡ್ತಾರೇನು" (ಮಿರ್ಚಿಬಾಬಾ ಮತ್ತು ಕಥೆ ಪುಟ–೨೪)

೧೧) 'ಕೆಮ್ಮು ಹಾದರತನ ಎಂದೂ ಮುಚ್ಚುದಿಲ್ಲ" (ಶೋಧ ಪುಟ–೫೪)

೧೨) ಕೊಟ್ಟ ಹೆಣ್ಣು ಕುಲಕ್ಕ ಹೊರಗೆ' (ಇದು ಎಂಥ ಲೋಕವಯ್ಯ ಪುಟ–೨೭)

ಇವು ದೇಶಿ ಅಂಶಗಳಿಗೆ ಕೆಲವು ಉದಾಹರಣೆಗಳು.

**ನುಡಿಗಟ್ಟುಗಳು :**

ಮೂಗು ತೂರಿಸು, ಮನಸು ಜಾರು, ಕಾಲು ಕಿತ್ತು ತಲೆ ಬಿಸಿಯಾಯಿತು, ಕೈಮೀರು, ಲಗಾ ಹೊಡಿ, ಗಂಟು ಬಿದ್ದ, ಬೆನ್ನು ಬಿದ್ದ ಮುಂತಾದವು

**ದ್ವಿರುಕ್ತಿ ಪದಗಳು:**

ಗುಸುಗುಸು, ಮಿರೆಮಿರೆ, ಹಿಡಿಹಿಡಿ, ಬಿಸಿಬಿಸಿ, ಪುರ್‌ಪುರ್, ಪಟಾಪಟಾ, ಸರಸರ, ಪಿಳಿಪಿಳಿ, ನುಂಗಿನುಂಗಿ, ಕರಾಕರಾ, ಜುಳುಜುಳು, ನಡುನಡು, ಡುಕುಡುಕು, ಪದೆಪದೆ, ಜಲ್ದಿ ಜಲ್ದಿ, ಗಬಗಬ, ತಡಿತಡಿ, ಗಲಗಲ, ಬಿಕ್ಕಿಬಿಕ್ಕಿ, ಛಟಛಟ, ಪರಪರ, ಗಳಗಳ, ಲಬಲಬ, ಕಣಕಣ,

ಗದಗದ, ದಪದಪ, ಬಾರಬಾರ, ಗರಂಗರಂ, ತಮ್ಮತಮ್ಮ, ಕಿಲಕಿಲ, ಕಂಡಕಂಡ,ಮಿಣಿಮಿಣಿ, ಬೇರೆ ಬೇರೆ, ಗಡಗಡ, ಮುಸಿಮುಸಿ, ಗುಸುಗುಸು, ಹನಿಹನಿ, ಚುಮುಚುಮು, ವಟಾವಟಾ ಮುಂತಾದವು.

**ಪ್ರತಿಧ್ವನಿ ಶಬ್ದಗಳು:**

ಪ್ರೀತಿ–ಗೀತಿ ದೆವ್ವ–ಗಿವ್ವ, ಗೋಲಿ–ಗೀಲಿ, ಹುಚ್ಚು–ಗಿಚ್ಚು ಮೃತಾ–ಗಿತಾ. ಲಂಚಾ–ಗಿಂಚಾ, ಕತಿ–ಗಿತಿ, ಬಂದೂಕು–ಗಿಂದೂಕು, ಕಲಾ–ಗಿಲಾ ಸಾಕ್ಷಿ–ಗೀಕ್ಷಿ, ಜಾತಿ–ಪಾತಿ ಕಳ್ಳ–ಗಿಳ್ಳ, ಪ್ರೇಮಾ–ಗೀಮಾ, ಅಪ್ಪಿ–ತಪ್ಪಿ ಹೊಲ–ಮನಿ, ಬ್ಯಾನಿ–ಗೀನಿ, ಬಡ್ಡಿ–ಗಿಡ್ಡಿ , ಹಿಂದ–ಮುಂದ ಮುಂತಾದವು.

**ತಂತ್ರ ಶೈಲಿ:**

ತಂತ್ರ:

ಕಥೆಯ ರಚನೆಯಲ್ಲಿ ತಂತ್ರದ ಪಾತ್ರ ಮಹತ್ವದ್ದಾಗಿರುತ್ತದೆ. ಕಥೆ ಪರಿಣಾಮಕಾರಿಯಾಗುವಲ್ಲಿ ತಂತ್ರ ಅತ್ಯಂತ ಪ್ರಮುಖ ಪಾತ್ರವಹಿಸುತ್ತದೆ. ತಂತ್ರದ ಅಳವಡಿಕೆಯಿಲ್ಲದೆ ಕಥೆ ರಚಿಸಲು ಹೊರಟರೆ ಅದು ಕಥೆಯಾಗದೇ ಘಟನೆಯನ್ನು ವಿವರಿಸುವ ವರದಿಯಾಗುತ್ತದೆ.

ಅಭಿವ್ಯಕ್ತಿಸುವ ವಿಷಯ ಬಹುಕಾಲ ಬದುಕಬೇಕಾದರೆ ಅದು ವಿಷೇಶವಾದ ವಿಧಾನದಿಂದ ನಿರೂಪಿತವಾಗಿರಬೇಕು. ಕಥೆಗಾರ ತನ್ನ ಅಭಿವ್ಯಕ್ತಿಗೆ ಯಾವ ರೂಪ ಕೊಡಬೇಕು, ಕಥೆಯ ಆದಿ, ಮಧ್ಯ, ಅಂತ್ಯಗಳು ಹೇಗಿರಬೇಕೆಂದು ವಿವೇಚಿಸಿ, ನಿರ್ಧರಿಸಿ ಆ ದಾರಿಯಲ್ಲಿ ಸಾಗುವುದೇ ತಂತ್ರವೆನಿಸಿಕೊಳ್ಳುತ್ತದೆ. ನಿರ್ಧಾರಿತ ಉದ್ದೇಶಕ್ಕೆ ಸೋಲುಂಟಾಗುತ್ತದೆ. ಅಲ್ಲದೆ ಕಥೆಯಲ್ಲಿಯ ಪಾತ್ರ ಭಾಷೆಗಳು ತಮ್ಮ ಜೀವಂತುಕೆಯನ್ನು ಕಳೆದುಕೊಂಡುಬಿಡುತ್ತವೆ.

"ತಂತ್ರ ಹೊರಗಿನಿಂದ ತಂದು ಹೇರಿದ ಒಂದು ವಸ್ತುಗಿರದೆ, ಅನುಭವದ ಸೂಕ್ಷ್ಮತಿಶಯವನ್ನೆಲ್ಲ ಪ್ರಭಾವಪೂರ್ಣವಾಗಿ ಪ್ರಕಟಿಸುವ ಸಾಧನವಾಗಿದೆ. ಅಂತೆಯೇ ಸಂವೇದನೆಯ ಕ್ಷೇತ್ರ ಬದಲಾಗದೆ, ತಂತ್ರ ಮಾತ್ರ ಬದಲಾಗುವುದು:"[೫೭] ಎನ್ನುವ ಗಿರಿಡ್ಡಿ ಗೋವಿಂದರಾಜರ ಮಾತುಗಳು ಸತ್ವಪೂರ್ಣವಾಗಿದೆ.

ಕಥೆಯ ರಚನೆಯಲ್ಲಿ ತಂತ್ರದ ಪಾತ್ರ ಮಹತ್ವದ್ದಾಗಿರುತ್ತದೆ. ಕಥೆ ಪರಿಣಾಮಕಾರಿಯಾಗುವಲ್ಲಿ ತಂತ್ರ ಅತ್ಯಂತ ಪ್ರಮುಖ ಪಾತ್ರವಹಿಸುತ್ತದೆ. ವಸ್ತುವಿಗೆ ಅನುಗುಣವಾಗಿ ತಂತ್ರ ನಿರ್ಮಾಣವಾಗುತ್ತದೆ. ಅಂದರೆ ಒಬ್ಬ ಕಥೆಗಾರ ತಾನು ತೆಗೆದುಕೊಂಡ ವಸ್ತುವೇ ಒಂದು ತಂತ್ರವನ್ನು ನಿರ್ಮಿಸುತ್ತದೆ. ಕೃತಿಕಾರನು ತನ್ನ ಸೈದ್ಧಾಂತಿಕ ತಿಳುವಳಿಕೆಗೆ ಅನುಗುಣವಾಗಿ ಗ್ರಹಿಸಿಕೊಂಡು ಜೀವನಾನುಭವಕ್ಕೆ ಕಲಾ ಕೃತಿಯಲ್ಲಿ ಪುನರ್ ಶರೀರ ನೀಡುವ ವಿಧಾನವನ್ನು ಹೇಗೆ ಹೇಳಿದರೆ ಅದು ಉತ್ತಮ

ಕಥೆಯಾಗುತ್ತದೆ ಎಂಬುದನ್ನು ಯೋಚಿಸುವಲ್ಲಿಯೇ ತಂತ್ರವೂ ಜನ್ಮ ತಾಳುತ್ತದೆ ತಂತ್ರ ಅಳವಡಿಕೆಯಿಲ್ಲದೆ ಕಥೆ ಸಂರಚಿಸಲು ಹೊರಟರೆ ಅದು ಕಥೆಯಾಗದೇ ಘಟನೆಯನ್ನು ವಿವರಿಸುವ ವರದಿಯಾಗುತ್ತದೆ.

ಲೇಖಕನೊಬ್ಬ ತನ್ನ ಜೀವನಾನುಭವಗಳ ಹಿನ್ನಲೆಯಲ್ಲಿ ಕಥಾವಸ್ತುವನ್ನು ಕಟ್ಟಿಕೊಡುವ ಒಂದು ವಿಧಾನವೇ ತಂತ್ರ ಸಾಹಿತ್ಯ ಕೃತಿಯಲ್ಲಿ ತಂತ್ರ ಎನ್ನುವುದು ಕವಿಯ ಜೀವನಾನುಭವಕ್ಕೆ ಹೊಂದಿಕೊಂಡಿದೆ. ಆ ಅನುಭವ ಅಭಿವ್ಯಕ್ತಿಗೆ ಅನಿವಾರ್ಯವಾದ ಸಾಧನವಾಗುತ್ತಿದೆ. ಬರಿಯ ಚಮತ್ಕಾರಕ್ಕಾಗಿ ಕಣ್ಣಿಗೆ ಹೊಡೆಯುವ ತಂತ್ರವನ್ನು ಬಳಸಿದಾಗ ಕೃತಿ ಕರಡಿಯ ಚರ್ಮವನ್ನು ಹೊದ್ದ ಮನುಷ್ಯನಂತೆ ಕಾಣುತ್ತದೆ.

ಅಭಿವ್ಯಕ್ತಿಸುವ ವಿಷಯ ಬಹುಕಾಲ ಬದುಕಬೇಕಾದರೆ ಅದು ವಿಶೇಷವಾದ ವಿಧಾನದಿಂದ ನಿರೂಪಿತವಾಗಿರಬೇಕು. ತಂತ್ರ ಎನ್ನುವುದು ಬದುಕಿನ ಅನುಭವದ ಸೂಕ್ಷ್ಮತೆಗಳನ್ನು ಅತ್ಯಂತ ಪ್ರಭಾವಪೂರ್ಣವಾಗಿ ಅಭಿವ್ಯಕ್ತಪಡಿಸುವ ಕಲೆ, ಲೇಖಕ ಅನುಭವವನ್ನು ಅದರೆಲ್ಲಾ ಸಂಕೀರ್ಣತೆಯೊಂದಿಗೆ ಅಭಿವ್ಯಕ್ತ ಪಡಿಸುವ ಸಾಹಾಸಕ್ಕೆ ತೊಡಗಿ, ಹೊಸ ಹೊಸ ವಿಧಾನಗಳನ್ನು, ಮಾಧ್ಯಮಗಳನ್ನು ಹುಡುಕಿಕೊಂಡಿದ್ದೇ ತಂತ್ರ ಪರಿಣಮಿಸಿದೆ. ಕಥೆಗಾರ ತನ್ನ ಅಭಿವ್ಯಕ್ತಿಗೆ ಯಾವ ರೂಪ ಕೊಡಬೇಕು ಎಂದು ವಿವೇಚಿಸಿ ನಿರ್ಧರಿಸಿ ಆ ದಾರಿಯಲ್ಲಿ ಸಾಗುವುದೇ ತಂತ್ರವೆನಿಸುತ್ತದೆ.

ತಂತ್ರವೆನ್ನುವುದು ಸಾಹಿತ್ಯಾಭಿವ್ಯಕ್ತಿಯ ಒಂದು ಮಾಧ್ಯಮ ಕಥೆಯೊಂದನ್ನು ಯಾವ ರೀತಿಯಲ್ಲಿ ಬರೆಯಬೇಕು ಯಾವ ನಿಟ್ಟಿನಲ್ಲಿ ಕೊನೆ ಮುಟ್ಟಿಸಬೇಕೆಂಬುದಾಗಿದೆ. ಎಡ್ಗರ್ ಅಲೇನ್ ಪೋ ಹೇಳುವಂತೆ ಆಕರ್ಷಕ ಆರಂಭ ಕುತೂಹಲವನ್ನು ಕಾಯ್ದುಕೊಂಡು ಹೋಗುವ ಮಧ್ಯ ಅನಿರೀಕ್ಷಿತ ಅಂತ್ಯಗಳನ್ನೊಳಗೊಂಡ ಕಥಾವಳಿಗಳನ್ನು ಅದು ಹೊಂದಿರತಕ್ಕದ್ದು, ತಂತ್ರಕ್ಕೂ ಲೇಖನ ಉದ್ದೇಶ ಸಫಲತೆಗೂ ನಿಕಟವಾದ ಸಂಬಂಧವಿದೆ.

ತಂತ್ರ ಹೊರಗಿನಿಂದ ತಂದು ಹೇರಿದ ಒಂದು ವಸ್ತುವಾಗಿರದೆ ಅನುಭವದ ಸೂಕ್ಷ್ಮಾತಿಶಯವನ್ನೆಲ್ಲ ಪ್ರಭಾವ ಪೂರ್ಣವಾಗಿ ಪ್ರಕಟಿಸುವ ಸಾಧನವಾಗಿದೆ. ಅಂತೆಯೇ ಸಂವೇದನೆಯ ಕ್ಷೇತ್ರ ಬದಲಾಗದೆ ತಂತ್ರ ಮಾತ್ರ ಬದಲಾಗದು ಎನ್ನುವು ಮಾತು ಅರ್ಥಪೂರ್ಣವಾಗಿದೆ.

ಕಥೆಯ ಪರಿಣಾಮಕಾರಿಯಾದ ಅಭಿವ್ಯಕ್ತಿಗಾಗಿ ವರ್ಣನಾ ತಂತ್ರ ಮನೋವಿಶ್ಲೇಷಣಾತ್ಮಕ ತಂತ್ರ, ಸ್ವಗತ ತಂತ್ರ ನಿರೂಪಣಾ ತಂತ್ರ, ಹಿನೋಟ ತಂತ್ರ ಸಂಭಾಷಣ ತಂತ್ರಗಳನ್ನು ಹೈದರಾಬಾದ್ ಕರ್ನಾಟಕದ ಕಥೆಗಾರರು ಅಳವಡಿಸಿಕೊಂಡಿದ್ದಾರೆ.

**ಶೈಲಿ:**

ತಂತ್ರದ ಜೊತೆಗೆ ಶೈಲಿಯೂ ಕೂಡ ಕಥೆಯ ರಚನೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಸಾಹಿತ್ಯ ರಚನೆಯಲ್ಲಿ ಶೈಲಿಗೆ ಬಹಳ ಮಹತ್ವವಿದೆ. ಶೈಲಿಯಿಲ್ಲದೆ ಹೋದರೆ ಸಾಹಿತ್ಯ

ರಚನೆಯಾಗುವುದಿಲ್ಲ. ಅದು ಕೇವಲ ಇತಿಹಾಸವಾಗುತ್ತದೆ. ಆದ್ದರಿಂದ ಕಥೆಗಾರನ ಕಥೆಯು ಅವನ ಶೈಲಿ ಮತ್ತು ತಂತ್ರದ ಮೇಲೆ ನಿರ್ಧಾರವಾಗುತ್ತದೆ.

ಭಾಷೆ ಒಂದು ಮಾಧ್ಯಮ ಅದು ಅಭಿವ್ಯಕ್ತಿ ವಾಹಕ. ಸೃಜನಶೀಲ ಬರಹಗಾರರು ಈ ಮಾಧ್ಯಮವನ್ನು ಪರಿಣಾಮಕಾರಿಯಾಗಿ ಬಳಸಿಕೊಂಡು ತಮ್ಮ ಅನುಭವಗಳಿಗೆ ಅಭಿವ್ಯಕ್ತಿ ಕೊಡುತ್ತಾರೆ. ಪ್ರತಿಯೊಬ್ಬ ಬರಹಗಾರರು ತನ್ನದೆಯಾದ ಒಂದು ವಿಶಿಷ್ಟವಾದ ಅಭಿವ್ಯಕ್ತಿ ಕ್ರಮವನ್ನು ಸಿದ್ಧಿಸಿಕೊಂಡು ವಿಶೇಷತೆಯನ್ನು ಮೆರೆಯುತ್ತಾನೆ. ಅಭಿವ್ಯಕ್ತಿ ಕ್ರಮದಲ್ಲಿ ಸಿದ್ಧಿಸಿಕೊಂಡ ಈ ವಿಶೇಷತೆಗೆ ಶೈಲಿ ಎಂದು ಕರೆಯುತ್ತರೆ. ಭಾಷೆ ಶೈಲಿಯಲ್ಲಿ ಭಾಷಾ ಬಳಕೆಯ ರೀತಿಯೇ ಶೈಲಿ.

ಭಾಷೆಯನ್ನು ದುಡಿಸಿಕೊಂಡು ಅನುಭವಗಳನ್ನು ಸ್ಫೋಟಗೊಳಿಸುವ ವಿಶಿಷ್ಟ ಕೌಶಲ್ಯವೇ ಶೈಲಿ ಎನಿಸಿಕೊಳ್ಳುತ್ತದೆ. ವ್ಯಕ್ತಿ ಬೆಳೆದ ಪರಿಸರ, ಆಳವಾದ ಅಭ್ಯಾಸ, ಭಾಷಾ ಸಾಮರ್ಥ್ಯ ಅವನ ಬದುಕಿನ ರೀತಿ ಹಾಗೂ ಸಂಸ್ಕೃತಿ ಮುಂತಾದವುಗಳು ಅಭಿವ್ಯಕ್ತಿಗೆ ಜನ್ಮಕೊಡುತ್ತವೆ. ವ್ಯಕ್ತಿಯಲ್ಲಿರುವ ಈ ಅಭಿವ್ಯಕ್ತಿ ಸಾಮರ್ಥ್ಯವೇ ಶೈಲಿ ಈ ಅಭಿವ್ಯಕ್ತಿ ಸಾಮರ್ಥ್ಯ ಬೇರೆ ಬೇರೆ ವ್ಯಕ್ತಿಗಳಲ್ಲಿ ಬೇರೆ ಬೇರೆಯಾಗಿರುತ್ತದೆ. ಅದು ಒಬ್ಬರಲ್ಲಿದ್ದಂತೆ ಇನ್ನೊಬ್ಬರಲ್ಲಿರಲು ಸಾಧ್ಯವಿಲ್ಲ ವ್ಯಕ್ತಿಗಳೆಷ್ಟೋ ಶೈಲಿಗಳೆಷ್ಟೋ?

ವ್ಯಕ್ತಿಯ ಅನುಭವ ಮತ್ತು ಭಾಷೆ ಹಾಗೂ ಅವನ ಮಾತಿನ ಸಾಮರ್ಥ್ಯ ಅಭಿವ್ಯಕ್ತಿ ರೀತಿಯನ್ನು ಕಟ್ಟುತ್ತದೆ. ಇವು ಕಟ್ಟಿಕೊಡುವ ರೀತಿಯೇ ಶೈಲಿ.

ಇಲ್ಲಿಯ ಕಥೆಗಾರರು ತಾವು ಹುಟ್ಟಿಬೆಳೆದ ಪ್ರದೇಶಕ್ಕೆ ಮತ್ತು ಆ ಪ್ರದೇಶದ ಭಾಷೆಗೆ ತಮ್ಮ ಕಥೆಗಳ ಮೂಲಕ ನ್ಯಾಯ ಒದಗಿಸಿದ್ದಾರೆ. ಒಂದು ಪ್ರದೇಶದಲ್ಲಿ ವಾಸಿಸುವ ಜನರ ಬದುಕು, ಆಚರಣೆ ಸಂಪ್ರದಾಯ, ಸಂಸ್ಕೃತಿ, ಮತ್ತು ಪದ್ಧತಿಗಳು ಅವರಾಡುವ ಭಾಷೆಯ ಮೂಲಕ ಪ್ರತಿಬಿಂಬಿತವಾಗುತ್ತವೆ ಮತ್ತು ಪ್ರತಿನಿಧಿಸಲ್ಪಡುತ್ತವೆ. ಆಯ್ಕೆ ಮಾಡಿಕೊಂಡ ವಸ್ತುವೇ ಭಾಷೆಯನ್ನು ನಿರ್ಧರಿಸುತ್ತದೆ.

ಚಿತ್ರಶೇಖರ ಕಂಠಿ ಇವರು ಗುಲಬರ್ಗಾದ ಅದರಲ್ಲಿಯೂ ತನ್ನೂರಾದ ಹುಲ್ಸಗೂಡದ ಜನರ ಬದುಕಿನಿಂದ ವಸ್ತುವನ್ನು ಆಯ್ಕೆ ಮಾಡಿಕೊಂಡಿದ್ದರಿಂದ ಸಹಜವಾಗಿಯೇ ಜನರಾಡುವ ಭಾಷೆಯನ್ನು ಬಳಸಿಕೊಂಡಿದ್ದಾರೆ. ಮತ್ತು ಅವರ ಗ್ರಹಿಕೆಯ ಕ್ರಮವು ಕೂಡ ಬಳಸಿದ ಭಾಷೆ ತಕ್ಕದಾಗಿದೆ. ಅವರ ಕಥೆಗಳಲ್ಲಿ ಬಳಸಿದ ಭಾಷೆಯು ಜನಪದ ಹೀಗಾಗಿ ಅವರು ಪ್ರಾದೇಶಿಕ ಪ್ರಜ್ಞೆಯನ್ನು ಭಾಷೆಯಲ್ಲಿ ಉಳಿಸಿಕೊಳ್ಳಲು ಸಾಧ್ಯವಾಗಿದೆ.

ಸಿದ್ಧರಾಮ ಹೊನ್ಕಲರು "ಕಾದಿರುವರು ಶಂಕುಂತಲೆ ದುಷ್ಯಂತ ಬರುವನೆಂದು" ಎಂಬ ಕಥೆಯಲ್ಲಿ "ಪತ್ರ ತಂತ್ರವನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ. ಇದೇ ರೀತಿ ಶಿವರಾಜ ಪಾಟೀಲರ "ನನ್ನ ಪ್ರೀತಿಸಿದ ಹುಡುಗಿ" ಲಕ್ಷ್ಮೀದೇವಿ ಶಾಸ್ತ್ರಿಯವರ 'ತುಟ್ಟಿ' ಹಾಗೂ

ರಾಜಶೇಖರ ಹತಗುಂದಿಯವರ 'ಕ್ರಾಂತಿಗೊಂದು ಪತ್ರ' ಕಥೆಗಳಲ್ಲಿ ಪತ್ರ ತಂತ್ರದ ಸಾಧ್ಯತೆಯನ್ನು ತೋರಿಸಿದ್ದಾರೆ.

ಇಲ್ಲಿ ಕಥೆಗಾರರು ಸ್ವಂತ ಅನುಭವಗಳನ್ನು ಅಭಿವ್ಯಕ್ತಿಸುತ್ತಾ ತಮ್ಮ ಕಥೆಗಳಲ್ಲಿ ಪಾತ್ರದ ಬಗ್ಗೆ ತಮ್ಮದೇ ಆದ ಧೋರಣೆಗಳನ್ನು ಹೊಂದಿದ್ದು, ವೈಯಕ್ತಿಕ ಭಾವನೆ. ತೀರ್ಮಾನಗಳಿಗೆ ತಕ್ಕಂತೆ ಕಥೆ ಜೋಡಿಸುವ ಕೌಶಲ್ಯ ತೋರುತ್ತಾರೆ. ಜೊತೆಗೆ ಕಥೆಯಲ್ಲಿ ಒಂದಲ್ಲ ಒಂದು ಕಡೆ ಕಥೆಗಾರರ ಅಸ್ತಿತ್ವವನ್ನು ಕಾಣಬಹುದಾಗಿದೆ. ಜೇನ್.ಸಿ. ಬೂತ್‌ನು "ಗುರ್ತಿಸುವ ಕಣ್ಣಿದ್ದರೆ ಕೃತಿಯಲ್ಲಿ ಲೇಖಕರ ತೀರ್ಮಾನಗಳನ್ನು ಉದ್ದಕ್ಕೂ ಕಾಣಬಹುದು . ಕೃತಿಯಲ್ಲಿ ಕೃತಿಕಾರನ ಅಸ್ತಿತ್ವ ಹೇಗೆ? ಎಷ್ಟು ಅಪಾಯಕಾರಿ ಎಂಬುದನ್ನು ಸುಲಭವಾಗಿ ನಿರ್ಣಯಿಸಲಾಗುವುದಿಲ್ಲ. ಕೃತಿಕಾರ ತನ್ನ ಮುಖ ಮರೆಸಿಕೊಳ್ಳುವ ತಂತ್ರಗಳನ್ನು ಹುಡುಕಿಕೊಳ್ಳಬಹುದೇ ಹೊರತು ಕೃತಿಯಿಂದ ಸಂಪೂರ್ಣವಾಗಿ ಮಾಯವಾಗುವುದು ಸಾಧ್ಯವೇ ಇಲ್ಲ"[೫೮] ಎನ್ನುವುದು ಕಥೆಗಾರರ ದೃಷ್ಟಿಯಲ್ಲಿ ಸತ್ಯವೇ ಆಗಿದೆ.

ವರ್ಣನಾ ತಂತ್ರವು ಈ ಕಥೆಗಾರರ ಕಥೆಗಳಲ್ಲಿ ಹೆಚ್ಚು ಬಳಕೆಯಾಗಿದೆ. "ಮುಂಬೆಳಗಿನ ಇಬ್ಬನಿ ಹನಿ ಮೆತ್ತಿಕೊಂಡ ಮೊಗ್ಗು ಅರಳುವಂತೆ ಹೆಡ್ಮಾಸ್ತರರ ಕಣ್ಣರೆಪ್ಪೆ ತೆರೆದುಕೊಂಡವು"[೫೯] ಎಂಬಲ್ಲಿ ಚಿತ್ರಶೇಖರ ಕಂಠಿಯವರು ವರ್ಣನಾ ತಂತ್ರ ಬಳಸಿಕೊಂಡಿರುವುದು ಸ್ಪಷ್ಟವಾಗಿ ತೋರುತ್ತದೆ. ಗೀತಾನಾಗಭೂಷಣರು ಸಹ ತಮ್ಮ 'ದುರಂತ' ಕಥೆಗಳಲ್ಲಿ ಈ ತಂತ್ರವನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ.

ವರ್ಣನೆಗಳನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುವುದು ವಿಸಾಜಿಯವರ ಹಿರಿಮೆಯಾಗಿದೆ. ಇವರ 'ಅನಂತಸಂಗಮ' ದಲ್ಲಿ ಬರುವ ಪ್ರಕೃತಿ ವರ್ಣನೆ, ಆಕಾಶದ ವರ್ಣನೆ, ಹಳ್ಳಿಯ ಚಿತ್ರಣಗಳು ಮನೋಹರವಾಗಿವೆ.

"ಅಂಕುಡೊಂಕಾದರೂ ಶ್ರೀಗಂಧದ ಕಟ್ಟಿಗೆಯನ್ನು.

ಕಪ್ಪಾದರೂ ಕಸ್ತೂರಿಯನ್ನು ಅಲ್ಲಗಳೆಯಬಹುದೇ ?"[೬೦]

"ಪ್ರೇಮಿಗಳ ಪ್ರಥಮ ಮಿಲನದ ಸಾಕ್ಷಿ ಈ ಚಂದ್ರ! ಓ ಚಂದ್ರಮಾ ಇನಿತೇಕೆ ಅವಸರ ನಿನಗೆ! ವಿರಹಿಗಳ ಆರ್ತಧ್ವನಿ ಕೇಳದೆ ನಿನಗೆ ಆದರ್ಶ ಪ್ರೇಮಿಗಳ ಹೃದಯದ ಮಿಲನ ನಿನಗೆ ಬೇಡವಾಗಿದೆಯಾ !"[೬೧]

ಬಿ.ಟಿ. ಲಲಿತಾನಾಯಕರ ಕಥೆಗಳು ಹೆಚ್ಚಾಗಿ ನಿರೂಪಣಾ ತಂತ್ರವನ್ನೇ ಅವಲಂಬಿಸಿದ್ದರೂ, ಎಲ್ಲ ಕಥೆಗಳ ಆರಂಭ ಮಾತ್ರ ವರ್ಣನಾ ತಂತ್ರವನ್ನು ಹೊಂದಿವೆ.

"ಪ್ರಕೃತಿ ಕೆಂಡ ಉಗುಳಿದಂತೆ ಇಡೀ ವಾತಾವರಣವೇ ಬಿಸಿಲಿನಿಂದ ಕಾದು ಹಬೆಯಾಡತೊಡಗಿತ್ತು."[೬೨]

ಬಂಡಾಯ ಮನೋಭಾವವುಳ್ಳ ಅಮರೇಶ ನುಗಡೋಣಿಯವರು ತಮ್ಮ ಕಥೆಗಳಲ್ಲಿ ಪ್ರಾದೇಶಿಕ ಭಾಷೆ ಬಳಸುವುದರೊಂದಿಗೆ ವರ್ಣನಾ ತಂತ್ರವನ್ನು ಬಳಸಿದ್ದಾರೆ.

"ಮೂಡಲದ ಒಡಲಲ್ಲಿ ಹುಟ್ಟುತ್ತಿದ್ದ ಸೂರ್ಯನನ್ನು ಯಾಕೋ ನೋಡಬೇಕೆನಿಸಿತು . . . .![೬೩]

ಪಂಚಾಕ್ಷರಿ ಹಿರೇಮಠರು ಕಥೆಗಳಲ್ಲಿ ಕಾವ್ಯಾತ್ಮಕ ತಂತ್ರ ಹೆಚ್ಚು ಬಳಸಿದ್ದರೂ, ಕೆಲವೊಂದು ಕಡೆಯಲ್ಲಿ ವರ್ಣನಾ ತಂತ್ರ ಬಳಸಿರುವುದು ಕಂಡುಬರುತ್ತದೆ.

"ಕಪ್ಪು ಕಪ್ಪಾದ ರಾತ್ರಿಯಲ್ಲಿ ತನ್ನ ಶುಭ್ರ ಮತ್ತು ಸ್ನಿಗ್ಧ, ವಿಶುದ್ಧ ಸುಗಂಧದಿಂದ ಬೆಳದಿಂಗಳಿಗೆ ಶೋಭೆ ಹೆಚ್ಚಿಸುತ್ತದೆ. ರಾತ್ರಿಯ ರಾಣಿ ಅಂಧಕಾರ ರೂಪಿ ತನ್ನ ಪ್ರಿಯತಮನ ತೋಳ ತೆಕ್ಕೆಯಲ್ಲಿ ಜೀವಂತವಿರಬೇಕೆಂದು ಬಯಸುತ್ತದೆ."[೬೪]

ಸಿದ್ಧರಾಮ ಹೊನ್ನಲ ಅವರು ಪತ್ರ ತಂತ್ರವನ್ನು ತಮ್ಮ ಹೆಚ್ಚಿನ ಕಥೆಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಅ 'ಸ್ಯಾಡಿಸ್ಟ್,' 'ದುರಂತರ ಬೆನ್ನು ಹತ್ತಿ' ಮತ್ತು ಕಾದಿರುವಳು ಶಕುಂತಲೆ ದುಷ್ಯಂತ ಬರುವನೆಂದು" ಕಥೆಗಳಲ್ಲಿಯ ಈ ತಂತ್ರ ಮೆಚ್ಚುವಂತಿದೆ, ದುಃಖ, ದುರಂತ ವಿಷಯಗಳ ಪ್ರತಿಪಾದನೆಗೆ ಈ ತಂತ್ರ ಬಳಸಿಕೊಂಡಿರುವುದು ಸೂಕ್ತವೂ ಸಮಂಜಸವೂ ಆಗಿದೆ.

ನಿರೂಪಣಾ ತಂತ್ರವು ಕಥೆಯ ಪರಿಣಾಮಕಾರಿ ಅಭಿವ್ಯಕ್ತಿಗೆ ಕಾರಣವಾಗುತ್ತದೆ. ಸರಳ ಸ್ಪಷ್ಟ ನಿರೂಪಣೆಯಿಂದ ವಸ್ತುವೊಂದರ ಸ್ಪಷ್ಟ ಚಿತ್ರಣ ಕಣ್ಣಿಗೆ ಕಟ್ಟುವಂತೆ ಮಾಡಬಹುದು.

"ವೇದಿಕೆಯ ಮೇಲೆ ಆಸೀನರಾಗಿದ್ದ ಸ್ವಾಮಿಗಳು ಮೈಕಿಗೆ ಬಾಯಿಟ್ಟು ತಮ್ಮ ಪ್ರವಚನವನ್ನು ಸರಾಗವಾಗಿ ಮುಂದುವರೆಸಿದರು."[೬೫]

ಈ ಮೇಲಿನ ಸಾಲುಗಳಲ್ಲಿ ನೇರವಾದ ನಿರೂಪಣೆಯಿರುವುದು ನೋಡಬಹುದು. ಇದು ಸೂಗಯ್ಯ ಹಿರೇಮಠರ "ಹುಳುಗಳು" ಕಥೆಯಲ್ಲಿ ನಿರೂಪಣೆಯಾದ ಬಗೆ. ಹಾಗೇಯೇ ಬಿ.ಟಿ. ಲಲಿತಾ ನಾಯಕರ 'ಕೊಲೆ' ಕಥೆ ಸಹ ಇದೇ ಮಾದರಿ ಹೊಂದಿದೆ.

ಗ್ರಾಮದ ಇರ್ವರು ಹೆಣ್ಣು ಮಕ್ಕಳ ಸುತ್ತ ಹೆಣೆಯಲಾದ "ಹಕ್ಕಲಶೇಂಗಾ" ಕಥೆಯು ನಿರೂಪಣಾ ತಂತ್ರವನ್ನು ಹೊದಿದೆ, ಯಮುನವ್ವ-ನೀಲವ್ವ ಈ ಎರಡು ಪಾತ್ರಗಳು ಕಥೆಯನ್ನು ಮುಂದುವರೆಸಿಕೊಂಡು ಹೋಗುವಲ್ಲಿ ಸಹಾಯಕಾರಿಯಾಗಿವೆ. ಗೌಡ ಅವರನ್ನು ಬೈದು ಆರಿಸಿದ ಸೇಂಗಾವನ್ನು ಕಸಿದುಕೊಂಡಾಗ ಓದುಗರಿಗೂ ಮರುಕ ಹುಟ್ಟಿಸುತ್ತದೆ. ಹಾಗೆಯೇ ಅದು ಕಥೆಯ ಯಶಸ್ಸನ್ನು ಸೂಚಿಸುತ್ತದೆ

ಶ್ರೀಕಾಂತ ಪಾಟೀಲರ 'ಪರಿವರ್ತನೆ'ಯ ಕಥೆಯಲ್ಲಿ ಸರಳ ನೇರ ನಿರೂಪಣೆಯನ್ನು ಅನುಸರಿಸಿದ್ದಾರೆ. ಸಮಾಜದ ಪ್ರಜ್ಞೆ ಇಟ್ಟುಕೊಂಡು ಹೇಳುವ ಈ ಕಥೆ ಬ್ರಹ್ಮಚಾರಿಯನ್ನು ಪ್ರೀತಿಸಲು ಬಂದ ಯುವತಿಯು ಬದಲಾವಣೆಯಾದ ರೀತಿ ಉಚಿತವೆನಿಸುತ್ತದೆ.

ಇನ್ನು 'ಗುರೂಜಿ' ಕಥೆಯಲ್ಲಿ ಹುಟ್ಟೂರನ್ನು ಬಿಟ್ಟ ಶಾಮುನ ಮೊದಲನೇ ಕ್ಷೇತ್ರ ಕುಂದಾಪುರವಾಗಿತ್ತು ಎಂದು ಆರಂಭವಾಗಿ, ಮನೆಯ ದ್ವಾರ ಪ್ರವೇಶಿಸುತ್ತಿದ್ದಂತೆ ಬಂದೆಯಾ ಬಾ ಕಂದ ಎಂದು ಜಿಗಿದಪ್ಪಿಕೊಳ್ಳುವವರು ಯಾರೂ ಇರಲಿಲ್ಲ ಆ ವೃದ್ಧ ಜೀವಿಗಳು ಇಹಲೋಕ ತ್ಯಜಿಸಿ ನಾಲ್ಕೆಂಟು ವರ್ಷಗಳೇ ಗತಿಸಿಹೋಗಿದ್ದವು, ಮನೆಯಲ್ಲಿ ಸ್ಮಶಾನದಂತೆ ಮೌನವಾಗಿತ್ತು, ಎಂದು ಮುಗಿಯುವುದು ಬಹು ಮಾರ್ಮಿಕವಾಗಿದೆ.

ಸಗರ ಕೃಷ್ಣಾಚಾರ್ಯರ ಆದರ್ಶ ಕಥೆಯಲ್ಲಿ 'ಅಂದಿನ ಆ ಸನ್ನಿವೇಶ ನನ್ನನ್ನು ಇಂದೆಯಾ ಬಾಧಿಸುತ್ತಲಿದೆ. ನಾನೊಮ್ಮೆ ಕಾಮಪುರಕ್ಕೆ ಹೋಗಿದ್ದೆ ಎನುವ (ಫ್ಲ್ಯಾಶ್‌ಬ್ಯಾಕ್ ತಂತ್ರ) ಹಿನ್ನೋಟ ತಂತ್ರವನನು ಬಳಸಿಕೊಂಡಿದ್ದಾರೆ.

ಲಲಿತಾ ನಾಯಕರು ದುರಂತ ವಸ್ತು–ವಿಷಯಗಳಿಗೆ ಈ ತಿರುಗುನೋಟ ತಂತ್ರ ಪರಿಣಾಮಕಾರಿ ಎಂದು 'ಲೂಟಿ,' 'ಕಳ್ಳು,' 'ಹಬ್ಬ ಮತ್ತು ಬಲಿ.' 'ಮರು ಮದುವೆ,' 'ಗಾಂಧಿ ಗುಂಡು ಸಾವು' ಕಥೆಗಳನ್ನು ಅದೇ ತಂತ್ರದಲ್ಲಿ ನಿರೂಪಿಸಿದ್ದಾರೆ.

ಗುರುನಾಥ ಅಕ್ಕಣ್ಣನವರ 'ನಿರೀಕ್ಷೆ' ಕಥೆಯನ್ನು ಇದೇ ತಂತ್ರದಲ್ಲಿ ನಿರೂಪಿಸಿದ್ದಾರೆ. "ಕಮಲಾ ಕೆಲಸವೆಲ್ಲಾ ಮುಗಿಸಿ ರೂಮ ಸೇರಿ ಮಲಗಲು ಸಿದ್ಧವಾಗಿದ್ದಾಗ ಹಿಂದಿನ ತನ್ನ ವೈವಾಹಿಕ ಜೀವನದ ನೆನಪು ಮಾಡಿಕೊಳ್ಳುವಲ್ಲಿ ಈ ತಂತ್ರ ಎದ್ದುಕಾಣುತ್ತದೆ. ಅದರಂತೆ ಇನ್ನೊಂದು ಕಥೆಯಾದ 'ಮೌನದೊಳಗಿನ ಮಾತು' ಕಥೆಯಲ್ಲಿ 'ಗೌಡರ ಮನೆತನದ ನಾಲ್ಕು ತಲೆಮಾರುಗಳ ಚಿತ್ರಣ" ಕೊಡುವಲ್ಲಿ ಹಿನ್ನೋಟ ತಂತ್ರ ಬಳಸಿಕೊಂಡಿರುವುದು ಸಮರ್ಥ ಎನಿಸಿದೆ.

ಶಾಂತರಸರು ಇಲ್ಲಿ ಸಂಭಾಷಣೆಯಂತೆ ಸ್ವಗತವನ್ನು ಅಷ್ಟೇ ಕಲಾತ್ಮಕವಾಗಿ ತರುತ್ತಾರೆ. ಸ್ವಗತ ಮತ್ತು ಸಂಭಾಷಣೆ ತಂತ್ರ ಶಾಂತರಸರ ಶೈಲಿಯ ಸಾಮರ್ಥ್ಯವನ್ನು ಹೆಚ್ಚಿಸುತ್ತವೆ. ಶಾಂತರಸರ ಶೈಲಿ ಕುರಿತು ಕೇಶವಾಚಾರಿಯವರು "ಹಚ್ಚ–ಹಸುರಾದ ಬಿಚ್ಚು ಮಾತುಗಳು ವಿಷಯಕ್ಕೆ ತಕ್ಕಂತಹ ಭಾಷೆ, ಶೈಲಿ ಅನೇಕ ಕಡೆಗಳಲ್ಲಿರುವ ಸ್ವಗತ ನಿರೂಪಣೆಯ ತಂತ್ರವಂತೂ ಪಾತ್ರದ ಮನಸ್ಸಿನ ತುಮುಲವನ್ನು ಓದುಗರ ಹೃದಯಕ್ಕೆ ತಟ್ಟುವಂತೆ ಮಾಡುವ ಶಕ್ತಿಯುತವಾದ ಮಾರ್ಗ"[೬೬] ಎಂದು ಹೇಳುತ್ತಾರೆ. ಸಾಮಾನ್ಯವಾಗಿ ಪ್ರತಿಯೊಂದು ಕಥೆಗಳಲ್ಲಿ ಪಾತ್ರಗಳ ಮನಸ್ಸಿನ ತುಮುಲವನ್ನು ಹೇಳುವ ಸಂದರ್ಭಗಳಲ್ಲಿ ಸ್ವಗತವನ್ನು ಬಳಸುತ್ತಾರೆ.

ಬಸವಣ್ಣಿ ಬಾವಿ ಕಟ್ಟಿ ಮೇಲಿದ್ದ ಒಂದು ರೂಪಾಯಿ ಕದ್ದು, ಬಾಯಿ ತಪ್ಪಿ ಕದ್ದಿಲ್ಲವೆಂದು ಹೇಳುತ್ತಾನೆ. ತಪ್ಪಿನ ಅರಿವಾಗಿ ರಾತ್ರಿ ಬಸವಣ್ಣಿಗೆ ನಿದ್ದೆ ಬರಲಿಲ್ಲ, ತನಗೆ ಸಿಕ್ಕಿದೆಯೆಂದು ಆ ರೂಪಾಯನ್ನ ಯಾಕ! ಕೊಟ್ ಬುಡ್ಲಿಲ್ಲ? ಎಂಥ ತಪ್ ಮಾಡಿದ್ನೆಲ್ಲ? ತುಳಜಾಭವಾನಿ ಪೂಜಾರಿ ನನ್ ಹೆಸ್ರೆ ಹೇಳಿದ್ರೆ ಏನ್‌ಗತಿ? ನನ್ ಮರ್ಯಾದಿ ಮೂರ್ ಕಾಸಿಗೆ ಸಲ್ದಂಗಾಗ್ತದ, ಇದೆಲ್ಲಾ ನೀಲಗಂಗಾಗೆ ಗೊತ್ತಾದ್ರೆ ಏನ್ ಗತಿ? ಶಿವಪ್ರಸಾದರು ಏನಂದಾರು?'[೬೭]

ಗಂಗ್ಯಾ ಗಿಡದ ನೆರಳಿಗೆ ನಿಂತದ್ದು ನೋಡಿ ಶಾಸ್ತ್ರಿಗಳಿಗೆ ಸಿಟ್ಟು ಬಂತು. "ಬಿಸಲಾಗ ಆಯಾಸ ಪಟಗಂತ ನಿಂತೀನಿ, ತಾನು ಆ ಕಡೆ ಸರ್ದು ನೆರಳಿಗೆ ಬರ್‍ರಿ ಅನವಲ್ಲನಲ್ಲ, ಈ ಲೋಡಿಮಗ ಗಂಗ್ಯಾ ಕೀಳು ಜಾತೆವ ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಾ ಮನೆಯ ಕಡೆಗೆ ಕಾಲುಕಿತ್ತಿದರು"[೬೮]

'ನಾಯಿ ಮತ್ತು ಪಿಂಚಣಿ', 'ಮಲೀನ ಮಜ್ಜನ ನ್ಯಾಯಕ್ಕೆಳಸಿ' ಮತ್ತು 'ಬಂಬಯಿ ತಾರೀಪು' ಈ ಮೂರು ಕಥೆಗಳು ಸ್ವಗತ ತಂತ್ರದಲ್ಲಿ ನಿರೂಪಿತಗೊಂಡಿವೆ.

ಹೀಗೆ ಸ್ವಗತ ತಂತ್ರ ಮತ್ತು ಸಂಭಾಷಣೆಯನ್ನು ಪರಿಣಾಮಕಾರಿಯಾಗಿ ಬಳಸಿ ಅಭಿವ್ಯಕ್ತಿಯಲ್ಲಿ ವಿಶೇಷತೆಯನ್ನು ಸ್ಥಾಪಿಸಿದ್ದಾರೆ. ಅಲ್ಲದೆ ಕಥೆಗಳಲ್ಲಿ ಶರಣರ ವಚನ, ಅನುಭಾವಿ ಪದಗಳನ್ನು ಸಂದರ್ಭೋಚಿತವಾಗಿ ಬಳಸಿ ಶೈಲಿಯಲ್ಲಿ ಹೊಸತನ ತುಂಬಿದ್ದಾರೆ.

ಸಾಮಾನ್ಯವಾಗಿ ಅವರ ಕಥೆಗಳಲ್ಲಿ ಶರಣರ ವಚನವಾಗಲಿ, ಅನುಭಾವಿ ಪದವಾಗಲಿ, ಅಥವಾ ಶರಣರ ಹೆಸರಾಗಲಿ ಉಲ್ಲೇಖಗೊಂಡಿರುತ್ತದೆ. ಅಲ್ಲದೆ ದೊಡ್ಡಾಟದ ಹಾಡು, ದೊಡ್ಡಾಟದ ಮಾತು, ಮಕ್ಕಳು ಆಟವಾಡುವಾಗಿನ ಹಾಡು ಕಥೆಗಳಲ್ಲಿ ತಂದು ಕಾವ್ಯಾಂಶವನ್ನು ಸಾಧಿಸಿದ್ದಾರೆ.

"ಸಂತೆಯೊಳಗೊಂದು ಮನೆಯ ಮಾಡಿ

ಶಬ್ದಕ್ಕೆ ನಾಚಿದೊಡೆಂತು . . . . ."[೬೯] ಅಕ್ಕಮಹಾದೇವಿ

"ಗುರುವಿನ ಗುಲಾಮನಾಗುವ ತನಕ ಆಗದಣ್ಣ ಮುಕುತಿ"[೭೦]

"ಅದಲಿ ಬದಲಿ ಕಂಚಿ ಬದಲಿ

ಇವರ ಬಿಟ್ಟು ಇವರ್ಯಾರು"[೭೧] – ಹುಡುಗರು ಆಟದಲ್ಲಿ ಹಾಡುವರು

" ಕಾಂತೇ ನೀ ಬಾರೆಂದು ಏಕಾಂತಕ್ಕೆ

ಕರೆದೊಯ್ದು ಎಂತಾ ಮಾತ್ಹೇಳದನೆ"[೭೨] – ದೊಡ್ಡಾಟದ ಪದ

ದೇವೇಂದ್ರ ಕುಮಾರ ಹಕಾರಿಯವರು ಸರಳವಾದ, ಹೃದಯದ, ಹೃದ್ಯವಾದ ಕಾವ್ಯಾತ್ಮಕ ತಂತ್ರ ಬಳಸಿ ನಿರೂಪಣೆ ಮಾಡಿದ್ದಾರೆ. ಏಕೆಂದರೆ ಕಥೆಗಾರರ ಸಂಗೀತ ಮತ್ತು ಕಲೆಗಳ ಆರಾಧಕರೆಂಬುದನ್ನು ಕೆಲ ಸನ್ನಿವೇಶಗಳ ವಾಕ್ಯವನ್ನು ಇಲ್ಲಿ ನೋಡಬಹುದು.

"ಸದ್ದು ಮಾಡದೆ ನಾನು ದಿವಾನ-ಖಾನೆಯಲ್ಲಿ ಅಡಿಯಿಟ್ಟಾಗ ರಜಿಯಾ ತಂಬೂರಿಯ ಶೃತಿಯಲ್ಲಿ ಸ್ವತಿಗೊಡಿಸಿ, ಭೈರವಿ ರಾಗದ ಆಲಾಪದಲ್ಲಿ ಬೆರೆತು ಬಿಟ್ಟಿದ್ದಳು"(ಚಾಟಿ)[೭೩]

"ಉಷಾಳ ನೃತ್ಯ ಅಭಿನಯದಿಂದ ಆರಂಭವಾಗಿ 'ತಿಲ್ಲಾಣ' ಜತಿ ಸ್ವರಗಳಲ್ಲಿ ಮುಂದುವರೆದು ಮಂಗಲದಲ್ಲಿ ಮುಕ್ತಾಯಗೊಂಡಿತು" (ಕನಸು-ನನಸು)[೭೪]

ಪಂಚಾಕ್ಷರಿ ಹಿರೇಮಠರು ಈ ತಂತ್ರಕ್ಕೆ ಹೊರತಾಗಿಲ್ಲ, ತಮ್ಮ ಬಹುತೇಕ ಕಥೆಗಳಲ್ಲಿ ದೇಶಿಯತೆಯಿಂದ ತುಂಬಿದ ಜನಪದ ಹಾಡು, ವಚನಕಾರರ ವಚನ ಹಾಗೂ ಮಧುರ ಗೀತೆಗಳನ್ನು ಬಳಸಿಯೇ ಕಥಾ ನಿರೂಪಣೆ ಮಾಡಿದ್ದಾರೆ.

" ನಕ್ಕರೆ ನಗಲವ್ವಾ ನಗೆ ಮುಖದ ಕ್ಯಾದಿಗಿ

ನಾ ಮುಚ್ಚಿ ಮುಡಿವ ಪರಿಮಳದ ಹೂವ

. . . . . . . . . .[೭೫] ಎಂದು.

ಓ! ಅದೇ ಸ್ವರ . . . . ಹಾಂ . . .ಅದೇ ಸುಶೀಲಾ . . . . ನಿಜಕ್ಕೂ ಅವಳದೇ ಈ ಮಧುರ ಧ್ವನಿ . . . .

ಇಲ್ಲಿ ಕಾವ್ಯಾತ್ಮಕ ಅಲ್ಲದೆ ಸ್ವಗತದ ತಂತ್ರ ಸೇರಿಸಿ ಹೆಣೆದ ಕಥೆ "ಸರ್ವಾರ್ಪಣ ಭಾವದ ರಾಧಾ" ಇದಾಗಿದೆ. ಇವೆರಡರನ್ನು ಬಿಟ್ಟು ಉಳಿದ ಕಥೆಗಳು ಓದಿ ಗ್ರಹಿಸಲು ಸ್ವಲ್ಪ ಸಮಯ ಬೇಕಾಗುತ್ತದೆ. ಹಾಗೂ ಓದುಗ ತದೇಕಚಿತ್ತದಿಂದ ಓದಿದಾಗ ಮಾತ್ರ ಬೇಗನೇ ಅದರ ತಿರುಳು ಅರಿಯಬಹುದು. ವಿಷಯವನ್ನು ಚಿಕ್ಕದಾಗಿದ್ದರೂ ಸುತ್ತಿ ಸುತ್ತಿ ಹೇಳುವ ಕಲೆಗಾರಿಕೆ ಇವರದಾಗಿದೆ.

ಸಿದ್ಧಯ್ಯ ಪುರಾಣಿಕರ ಒಂದು ಸಂಕಲನ, 'ಕಥಾಮಂಜರಿ' ಅನುವಾದಿತವಾಗಿದ್ದರೂ ಹಲವು ಭಾಷೆಗಳಲ್ಲಿ ಪಾಂಡಿತ್ಯ ಪಡೆದ ಪುರಾಣಿಕರು, ಅನ್ಯಭಾಷಾ ಕಥೆಗಳ ಕನ್ನಡಾನುವಾದವನ್ನು ಅವು ಕನ್ನಡದವೇ ಎನ್ನುವಷ್ಟರ ಮಟ್ಟಿಗೆ ನಿರೂಪಿಸಿದ್ದಾರೆ. ಇದರಲ್ಲಿ ಇಂಗ್ಲೀಷ್ ಫ್ರೆಂಚ್, ರಷ್ಯಾನ, ಅರೇಬಿಯನ್, ಬಂಗಾರಿ, ಹಿಂದಿ, ಸಂಸ್ಕೃತ ಹಾಗೂ ಕನ್ನಡದ ಉತ್ತಮ ಕಥೆಗಳ ಅನುವಾದವಿದೆ. "ವಿಶ್ವಸಾಹಿತ್ಯದ ಪ್ರಾಚೀನ ಅರ್ವಾಚೀನ ಕಥಾ ಪ್ರಪಂಚದಲ್ಲಿ ಪ್ರಖ್ಯಾತವಾದ ಕೆಲವು ಜನ ಲಘು ಕಥಾ ಲೇಖಕರ ಉತ್ತಮ ಕತೆಗಳ ಪರಿಚಯ ಕನ್ನಡಿಗಳಿಗೆ ಆಗಬೇಕೆಂಬ ಉದ್ದೇಶದಿಂದ ಈ ಸಂಕಲನವನ್ನು ಸಿದ್ದಗೊಳಿಸಿದೆ"[೭೬] ಎನ್ನುವ ಲೇಖಕರು ಈ ಕೃತಿಯ ಉದ್ದೇಶ ಸ್ಪಷ್ಟಗೊಳಿಸಿದ್ದಾರೆ.

ಇಲ್ಲಿಯ ಕಥೆಗಳೆಲ್ಲ ಮನುಷ್ಯ ಬದುಕಿನ ಹಲವು-ಹತ್ತು ಮುಖಗಳ ಸ್ತರಗಳ ಪರಿಚಯವನ್ನು ಮಾಡಿಸುವ ರೀತಿಯಲ್ಲಿ ನಿರೂಪಿಸಿದ್ದಾರೆ

ಇನ್ನೊಂದು ಕಥಾಸಂಕಲನವಾದ 'ತುಷಾರಹಾರ' ದಲ್ಲಿನ ಕಥೆಗಳು ವಯೋಬೇಧವಿಲ್ಲದೆ ಎಲ್ಲರನ್ನೂ ರಂಜಿಸುವ ರೀತಿಯಲ್ಲಿ ಹಾಗೂ ಜೀವನದ ನಾನಾ ವಿಧವಾದ ಅನುಭವಗಳನ್ನು ಹಾಸ್ಯ-ವ್ಯಂಗ್ಯ, ನೀತಿಯ ಮುಖಾಂತರ ನಿರೂಪಿಸಿದ್ದಾರೆ. ಇವರ ಇನ್ನೊಂದು ರೀತಿಯ ವಿಶಿಷ್ಟ ಕಲೆಯೆಂದರೆ ಕಥೆಗಳಲ್ಲಿ ವಾಸ್ತವಾಂಶಕ್ಕಿಂತ ಕಾಲ್ಪನಿಕಾಂಶಕ್ಕೆ ಹೆಚ್ಚು ಒತ್ತು ನೀಡಿ ನಿರೂಪಣೆ ಮಾಡಿರುವುದು.

ಲಕ್ಷ್ಮೀದೇವಿ ಶಾಸ್ತ್ರಿಯವರು ಬಳಸಿದ ತಂತ್ರವಂತೂ ಅತೀ ಸರಳ. ಅವರ ಕತೆ ಓದುತ್ತಿದ್ದರೆ ಓದುತ್ತಿದ್ದೇವೆಂಬ ಭಾವನೆಯೇ ಇರುವುದಿಲ್ಲ. ಬದಲಾಗಿ ಯಾರೋ ಜೊತೆಗೆ ಮುಖಾ ಮುಖಿಯಾಗಿ ಮಾತನಾಡುತ್ತಿದ್ದೇವೆ ಎಂದು ಭಾಸವಾಗುತ್ತದೆ. ಈ ರೀತಿಯ ವಿಶೇಷತೆ ಒಗ್ಗಿರುವುದು ಇವರಿಗೆ.

'ಅಮೀನಪುರದ ಸಂತೆ' ಕಥೆಯ ಲೇಖಕರಾದ ಮಲ್ಲಿಕಾರ್ಜುನ ಹಿರೇಮಠರ ಶೈಲಿಯಂತೂ ಎಲ್ಲರ ಮೆಚ್ಚುಗೆಗೆ ಪಾತ್ರವಾದದ್ದು. ಗ್ರಾಮಾಂತರ ಪ್ರದೇಶಗಳ ಬರದ (ಬರಗಾಲ) ಸನ್ನಿವೇಶ, ಬಡತನದ ರೌದ್ರ ಚಿತ್ರಣ ಕಣ್ಣಿಗೆ ಕಟ್ಟುವಂತೆ, ಚಿತ್ರಿಸಿ ಬಸಪ್ಪ ತಾನು ಸಾಕಿದ ಎತ್ತು ಪ್ರಾಣ ಬಿಡುವುದನ್ನು ನೋಡದ ಆ ಮೃದು ಹೃದಯಿ ನೇಣುಹಾಕಿಕೊಂಡ ಪ್ರಸಂಗವನ್ನು ಯಾರು ಮರೆಯುವಂತಿಲ್ಲ. ಅಂತಹ ಘಟನೆಯನ್ನು ಕಥೆಯನ್ನಾಗಿ ಬರೆದು ಪ್ರತಿ ಓದುಗರ ಕಣ್ಣಲ್ಲಿ ನೀರೂರುವಂತೆ ಮಾಡಿದ ನಿರೂಪಣಾ ಶಕ್ತಿ ಅದ್ಭುತವಾದದ್ದು.

ಜಯತೀರ್ಥ ರಾಜಪುರೋಹಿತರ ಶೈಲಿ ಒಂದೇ ತೆರನಾದುದಲ್ಲ. ಅವರ ಕಥೆಗಳಲ್ಲಿ ಶಿಷ್ಟ ಪಾತ್ರಗಳು ಮಾತನಾಡುವ ಧಾಟಿಯೇ ಬೇರೆ, ಅಂದರೆ ಗ್ರಾಂಥಿಕವಾಗಿದ್ದು, ಜನಸಾಮಾನ್ಯರು ಮಾತನಾಡುವ ಭಾಷೆ ಗ್ರಾಮ್ಯ ಪರಿಸರದಲ್ಲಿ ಆಡುವ ಆಡುಭಾಷೆಯಾಗಿರುತ್ತದೆ.

ತಮ್ಮ ಕಥೆಗಳಲ್ಲಿ ಕ್ರಿಶ್ಚಿಯನ್ ಹಾಗೂ ಮುಸ್ಲಿಂ ಧರ್ಮದ ವಸ್ತುಗಳಿದ್ದಾಗ ಆಯಾ ಧರ್ಮದ ವಿಶಿಷ್ಟ ಪದಗಳನ್ನು ಬಳಸುತ್ತಾರೆ. ಸಮರ್ಥವಾಗಿ ಪ್ರಾದೇಶಿಕ ಭಾಷೆಯನ್ನು ಬಳಸುವಲ್ಲಿ ಯಶಸ್ಸು ಹೊಂದಿದ್ದಾರೆ. ಪಾತ್ರಗಳಿಗೆ ತಕ್ಕಂತೆ ಭಾಷೆ ಬಳಸಿ, ಅಂಥ ಸಂದರ್ಭಗಳಲ್ಲಿ ಸ್ವರಲೋಪ, ಕೆಲವೊಮ್ಮೆ ಸ್ವರಗಳಲ್ಲಿ ವ್ಯತ್ಯಾಸ ಕೂಡ ಮಾಡಿದ್ದಾರೆ.

ಉದಾ: ನೋಡಿದ್ದಾನೆ ನೋಡ್ಯಾನ ಎಂದಾಗಿದೆ

ಹೋಗುತ್ತಾನೆ – ಹೋಗ್ತೈತೆ ಎಂದಾಗಿದೆ.

ಸತ್ವಯುತವಾದ ಕಥೆ ಕಟ್ಟಿಕೊಡುವಲ್ಲಿ ನೀರಮಾನ್ವಿಯವರು, ಎತ್ತಿದ ಕೈ ಐದು ಕಥೆಗಳನ್ನೊಳಗೊಂಡ 'ಹಂಗಿನರಮನೆಯ ಹೊರಗೆ' ಕಥಾಸಂಕಲನದ ಕಥೆಗಳ ವಸ್ತು ಮಾರ್ದವರಲ್ಲಿ ನವನವೋನ್ಮೇಷ ಶಾಲಿನಿಯಲ್ಲವಾದರೂ ವೈಚಾರಿಕತೆಯಲ್ಲಿ, ಮೌಲ್ಯಗಳ ಬಗೆಗಿನ ಕಾಳಜಿಯಲ್ಲಿ ಸಂವೇದನೆಯಲ್ಲಿ ವಿಭಿನ್ನ ರೀತಿಯಾಗಿದೆ. ವೈಯಕ್ತಿಕ ಪಾತಾಳಿಯಲ್ಲಿ ಆರಂಭವಾಗಿ ಸಾಮಾಜಿಕತೆಗೆ ಚಾಚಿಕೊಳ್ಳುವ ನೀರಮಾನ್ವಿಯವರ ಕಥೆಗಳ ಉದ್ದಗಲಕ್ಕೂ ನೈತಿಕ ಕಳಕಳಿಯ ದನಿಯೊಂದನ್ನು ಗುರುತಿಸುವ ರೀತಿಯಲ್ಲಿವೆ. ಈ ಮಾತುಗಳಿಗೆ ನಿದರ್ಶನವಾಗಿ 'ವೃತ್ತ ಮತ್ತು ದುರಸ್ತಿ' ಕಥೆಗಳೇ ಸಾಕ್ಷಿ.

ಯಾವುದೇ ಪೀಠಿಕೆ, ಹಿನ್ನಲೆ, ಕೊಡದೇ ನೇರವಾಗಿ ಕಥೆ ಆರಂಭಿಸುವ ಶೈಲಿ ಇವರದು. ತಮ್ಮ ಕಥೆಗಳಲ್ಲಿ ಹೋಲಿಕೆಯ ದೃಷ್ಟಾಂತದೊಂದಿಗೆ ನಿರೂಪಿಸುವ ತಂತ್ರ ಹೆಚ್ಚಾಗಿ ಬಳಸಿದ್ದಾರೆ.

ಉದಾ:

"ಅಮ್ಮ ಮಾಮೂಲಿನಂತೆ ಒಂದು ಬಕೇಟು ಕಣ್ಣೀರು ಸುರಿಸಿದಳು" ಅಪ್ಪ ಅದೇ ನೆಪದಿಂದ ಪ್ರತಿದಿನದಂತೆ ಒಳಗೆ ಬಂದು–

"ಆಪರಾಷನಗೆ ಇಷ್ಟು ಅಂಜಿಕೊಂತಾರೇನು? ಈಗ ಹೃದಯದ ಆಪರೇಷನ್‌ಗಳೇ ನಡೀತಾವಂತ ಇದಲ್ಲ ಏನು?"[೭೭] ಎಂದು ಹೇಳಿ ಸಮಾಧಾನ ಮಾಡಲೆತ್ನಿಸಿದ.

"ಅಮ್ಮನ ಕಣ್ಣಿನ ನೀರಾವರಿ ಇನ್ನು ಮುಂದುವರಿದಿತ್ತು"

ಡಾಕ್ಟರ ದಿನದ ಭೆಟ್ಟಿಗಾಗಿ ಒಳಗೆ ಬಂದಾಗ, " ನೀರು ಹಾಕಿದ ಕೂಡಲೇ ಕಡಿಮೆಯಾಗುವ ಹಾಲಿನ ಉಕ್ಕಿನಂತೆ ಅಮ್ಮನ ಅಳು ಕಡಿಮೆಯಾಯಿತು".[೭೮]

**ಟಿಪ್ಪಣಿಗಳು:**

೧. ವ್ಯಷ್ಟಿ ಮತ್ತು ಸಮಷ್ಟಿ ಲೇ, ಕರಿಗೌಡ ಬೀಚನಹಳ್ಳಿ, ಪು. ೭೩

೨. ಶೈಲಿಯ ಬಗ್ಗೆ ದೇಜಗೌ ಅನಿಸಿಕೆ

೩. ಗದ್ಯ ಶೈಲಿ ಪು. ೧೭೦

೪. ಕಪ್ಪು ಕಥೆಗಳು ಲೇ ಡಾ.ಚೆನ್ನಣ್ಣ ವಾಲೀಕಾರ ಪು. ೧-೨

೫. ಅದೆ, ಪು. ೫

೬. ಅದೆ, ಪು. ೧೦

೭. ಅದೆ, ಪು. ೧೬

೮. ಕಾಡು ಪ್ರೀತಿ ಮತ್ತು ನಾನು ಲೆ. ಚಿತ್ರಶೇಖರ ಕಂಠಿ, ಪು. ೨೯

೯. ಅದೆ, ಪು. ೫೫

೧೦. ಅದೆ, ಪು. ೬೬

೧೧. ಅಂತರ ಲೇ, ಸೂಗಯ್ಯ ಹಿರೇಮಠ, ಪು. ೩೧

೧೨. ಅದೆ, ಪು. ೩೩

೧೩. ಬಯಲು ಬಿತ್ತನೆ, ಲೇ, ಸಿದ್ಧರಾಮ ಹೊನ್ಕಲ ಪು.೧

೧೪. ಕೋಡ್ಗಲ್ಲಿನ ಕೂಗು ಲೇ, ಬಾಲಚಂದ್ರ ಜಯಶೆಟ್ಟಿ ಪು. ೧

೧೫. ಅದೆ, ಪು. ೩

೧೬. ಅದೆ, ಪು. ೧೪

೧೭. ಮಿರ್ಚಿಬಾಬಾ ಮತ್ತು ಇತರ ಕಥೆಗಳು ಲೇ, ಬಾಲಚಂದ್ರ ಜಯಶೆಟ್ಟಿ ಪು. ೧೦

೧೮. ಅದೆ, ಪು. ೧೩

೧೯. ಅದೆ, ಪು. ೬೬

೨೦. ಕಾಳಬೆಳದಿಂಗಳ ಸಿರಿ, ಲೇ, ರಾಜಶೇಖರ ಹತಗುಂದಿ ಪು. ೧೩

೨೧. ಇದು ಎಂಥ ಲೋಕವಯ್ಯಾ ಲೆ, ಗುರುನಾಥ ಅಕ್ಕಣ್ಣಾ ಪು. ೭೦

೨೨. ಅದೆ, ಪು. ೭೦

೨೩. ಅದೆ, ಪು. ೨೭

೨೪. ಹೈದರಾಬಾದ್ ಕರ್ನಾಟಕದ ಕನ್ನಡ ಒಂದು ಅವಲೋಕನ, ಲೇ, ಡಾ.ಸಂಗಮೇಶ ಸವದತ್ತಿಮಠ ಪ್ರ: ಸ್ವಾಗತ ಸಮಿತಿ, ೬೨ನೇ ಅ.ಭಾ.ಕ. ಸಮ್ಮೇಳನ ಕೊಪ್ಪಳ ಪು. ೮೪

೨೫. ಹಬ್ಬ ಮತ್ತು ಬಲಿ ಲೇ, ಬಿ.ಟಿ.ಲಲಿತಾ ನಾಯಕ, ಲಂಬಾಣಿ, ಒಕ್ಕೂಟ ಗುಲಬರ್ಗಾ, ಪು. ೧೨೧

೨೬. ಅದೆ, ಪು. ೧೧

೨೭. ಅದೆ, ಪು. ೧೨

೨೮. ಅದೆ, ಪು. ೧೨

೨೯. ಅದೆ, ಪು. ೧೨

೩೦. ಬೆಂಕಿ ಮರೆಯ ತಂಪು ಲೇ, ಶ್ರೀಕಾಂತ ಪಾಟೀಲ, ಪು. ೧

೩೧. ಅದೆ, ಪು. ೨

೩೨. ಅದೆ, ಪು. ೨೨

೩೩. ಹಣದಿ ಲೇ, ಶಿವಕುಮಾರ ನಾಗವಾರ, ಪು. ೨೯

೩೪. ಅದೆ, ಪು. ೪

೩೫. ಭ್ರಮೆ, ಲೇ, ಎಂ.ಜಿ.ದೇಶಪಾಂಡೆ, ಪು. ೨೦

೩೬. ದೂರದ ನಕ್ಷತ್ರ ಲೇ,ಶಿವರಾಜ ಪಾಟೀಲ, ಪು. ೫

೩೭. ಕಾಶಿಯಲ್ಲಿ ಕಂಡದ್ದೇನು? ಲೇ, ಸರಿತಾ ಕುಸುಮಾಕರ ದೇಸಾಯಿ, ಪು. ೫

೩೮. ಚಾಟಿ ಲೇ, ದೇವೇಂದ್ರಕುಮಾರ ಹಕಾರಿ ಪು. ೪೬

೩೯. ಸಾವಾರಿ ಪಕ್ವಕ್ಕಲ್ಲದೇ ಕಾಣಿಸದು ಕಥೆ ಲೇ, ಅಮರೇಶನುಗಡೋಣಿ, ಪು. ೨೦೬, ೨೦೦೭

೪೦. ಸಣ್ಣಕತೆಗಳ ಸಂಕಲನ 'ತಮಂಧದ ಕೇಡು' ಲೇ, ಅಮರೇಶ ನುಗಡೋಣಿ, ಪು. ೧೬೨

೪೧. ಕಾಡು ಪ್ರೀತಿ ಮತ್ತು ನಾನು ಲೇ, ಚಿತ್ರಶೇಖರ ಕಂಠಿ, ಪು. ೨೯

೪೨. ಅದೆ, ಪು. ೫೫

೪೩. ಅದೆ, ಪು. ೬೬

೪೪. ಪಟ್ಟಾ ಲೇ, ಚಿತ್ರಶೇಖರ ಕಂಠಿ, ಪು. ೨೧

೪೫. ಅದೆ, ಪು.೮

೪೬. ಅದೆ, ಪು. ೧೮

೪೭. ಅದೆ, ಪು. ೧೮

೪೮. ಅದೆ, ಪು. ೬೩

೪೯. ಕಲಬುರ್ಗಿ ಜಿಲ್ಲೆ ಸಣ್ಣಕಥೆಗಳು ಒಂದು ಅಧ್ಯಯನ ಲೇ, ಮಲ್ಲಪ್ಪ ಮನೇಗಾರ ಅಪ್ರಟಿತ

೫೦. ಸಣ್ಣಕಥೆಯ ಹೊಸ ಒಲವುಗಳು ಲೇ, ಗಿರಡ್ಡಿ ಗೋವಿಂದರಾಜ ಪು. ೧೪

೫೧. ನೇಪಥ್ಯ ಲೇ, ಚಿತ್ರಶೇಖರ ಕಂಠಿ ಪು ೨೭

೫೨. ಅದೆ, ಪು. ೨೪

೫೩. ಪಟ್ಟಾ ಲೇ, ಚಿತ್ರಶೇಖರ ಕಂಠಿ, ಪು. ೪೨

೫೪. ರೋಗಿ ಕಥೆ ಬಡೆಸಾಬು ಪುರಾಣ ಲೇ, ಶಾಂತರಸ ಪು. ೧೦೧

೫೫. ಹಾವಮ್ಮ ಕಥೆ, ಸಂಕ್ರಮಣ ಲೇಖನ ಶಾಂತರಸ ಏಪ್ರೀಲ್, ಮೇ, ಪು. ೪೮

೫೬. ಮಲ್ಕಮ್ಮ ಕಥೆ, ಬಡೇಸಾಬು ಪುರಾಣ ಲೇ, ಶಾಂತರಸ ಪು. ೯೨

೫೭. ಸಣ್ಣ ಕತೆಯ ಹೊಸ ಒಲವು ಲೇ, ಗಿರಡ್ಡಿ ಗೋವಿಂದರಾಜು ಪು. ೧೪

೫೮. ಕಥನ ಕಲೆಯ ನೆಲೆಗಳು (ಸಂ) ಬರಗೂರ ರಾಮಚಂದ್ರಪ್ಪ ಪು. ೫೫-೫೬

೫೯. ಪಟ್ಟಾ ಲೇ, ಚಿತ್ರಶೇಖರ ಕಂಠಿ, ಪು. ೫೫

೬೦. ಅನಂತ ಸಂಗಮ ಲೇ, ಜಿ.ಬಿ.ವಿಸಾಜಿ, ಪು. ೭ ೧೯೯೬

೬೧. ಅದೆ, ಪು. ೧೬, ೧೯೯೬

೬೨. ಹಬ್ಬ ಮತ್ತು ಬಲಿ ಲೇ. ಬಿ.ಟಿ.ಲಲಿತಾನಾಯಕ ಪು. ೬

೬೩. ಮಣ್ಣು ಸೇರಿತು ಬೀಜ ಲೇ, ಅಮರೇಶ ನುಗಡೋಣಿ ಪು. ೭, ೧೯೯೧

೬೪. ಎನ್ನಾಲೋಕ ಲೇ, ಪಂಚಾಕ್ಷರಿ ಹಿರೇಮಠ ಪು. ೫೭, ೧೯೯೧

೬೫. ಹುಳುಗಳು ಲೇ, ಸೂಗಯ್ಯ ಹಿರೇಮಠ, ಪು. ೧೬

೬೬. ಜಿ.ಎಸ್. ಕೇಶವಾಚಾರಿ ಪ್ರ. ಕನ್ನಡ ಪ್ರಭಾ ಡಿಸೆಂಬರ ೨೭, ೧೯೮೧

೬೭. ನಾಯಿ ಮತ್ತು ಪಿಂಚಣಿ ಲೇ, ಶಾಂತರಸ ಪು. ೬, ೧೯೮೫

೬೮. ಅದೆ, ಪು. ೪೬, ೧೯೮೫

೬೯. ಸಂಬಂಧಗಳು, ನಾಯಿ ಮತ್ತು ಪಿಂಚಣಿ ಲೇ, ಶಾಂತರಸ ಪು. ೨೭,೧೯೮೫

೭೦. ಬೆಸ್ತು ಕಥೆ, ನಾಯಿ ಮತ್ತು ಪಿಂಚಣಿ, ಲೇ, ಶಾಂತರಸ ಪು, ೫೮, ೧೯೮೫

೭೧. ಸ್ವಾತಂತ್ರ್ಯ ವೀರ ಮತ್ತು ಇತರ ಕಥೆಗಳು ಲೇ, ಶಾಂತರಸ, ಪು. ೮೯, ೧೯೮೭

೭೨. ಮಾಯೆ ಅಂದ್ರೆ ಮಾಯೆ, ಬಡೇಸಾಬು ಪುರಾಣ, ಲೇ, ಶಾಂತರಸ ಪು. ೪೦, ೧೮೮೧

೭೩. ಚಾಟಿ ಲೇ, ದೇವೇಂದ್ರಕುಮಾರ ಹಕಾರಿ, ಪು. ೧೦, ೧೯೭೬

೭೪. ಕನಸು-ನನಸು, ಚಾಟಿ ಲೇ, ದೇವೇಂದ್ರಕುಮಾರ ಹಕಾರಿ, ಪು. ೧೯, ೧೯೭೬

೭೫. ಎನ್ನಾಲೋಕ ಲೇ, ಪಂಚಾಕ್ಷರಿ ಹಿರೇಮಠ, ಪು. ೩೩, ೧೯೯೧

೭೬. ಕಥಾಮಂಜರಿ: ಲೇ, ಸಿದ್ದಯ್ಯ ಪುರಾಣಿಕ ಅರಿಕೆಯಿಂದ ೩

೭೭. ಹಂಗಿನರಮನೆಯ ಹೊರಗೆ, ಲೇ, ರಾಜಶೇಖರ ನೀರಮಾನ್ವಿ, ಪು. ೫೧, ೧೯೭೮

೭೮. ಅದೆ, ಪು. ೫೧



## ಅಧ್ಯಾಯ : ಏಳು

# ಸಮಾರೋಪ

ಹೈದರಾಬಾದ್ ಕರ್ನಾಟಕ ಪ್ರದೇಶವನ್ನು 'ಮೊಗಲಾಯಿ ಕರ್ನಾಟಕ', 'ನಿಜಾಮ ಕರ್ನಾಟಕ' ಹಾಗೂ ಇತ್ತೀಚಿಗೆ 'ಕಲ್ಯಾಣ ಕರ್ನಾಟಕ" ವೆಂತಲೂ ಕರೆಯಲಾಗುತ್ತದೆ. "ಹೈದ್ರಾಬಾದ ಕರ್ನಾಟಕವು ಅಧಿಕೃತವಾಗಿ ೩-೮-೨೩೪೭ ರಲ್ಲಿ ಕಲಬುರ್ಗಿಯಲ್ಲಿ ಬಹುಮನಿ ರಾಜ್ಯ ಸ್ಥಾಪನೆಯಾದ ನಂತರ ನಿರಂತರವಾಗಿ ಮುಸ್ಲಿಂ ಸಂಸ್ಕೃತಿ ಮತ್ತು ಕನ್ನಡ ಭಾಷೆ ಜನರ ಅರಿವಿನಿಂದ ದೂರ ಸರಿದವು. ಆದರೆ ಜನಪದರಲ್ಲಿ ಮಾತ್ರ ಇವೆರಡರ ಉಳಿಯುವಿಕೆ ಕಂಡುಬರುತ್ತದೆ" ಈ ಹೇಳಿಕೆಯು ಮುಸ್ಲಿಂ ಅರಸನ ಆಳ್ವಿಕೆ ಮತ್ತು ಅದರ ಪ್ರಭಾವ ಈ ಭಾಗದ ಮೇಲೆ ದೀರ್ಘ ಕಾಲದವರೆಗೆ ಪರಿಣಾಮ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಹೀಗೆ ಪರರ ಆಡಳಿತ, ಪರರ ಸಂಸ್ಕೃತಿಯ ಪ್ರಭಾವ, ಅನ್ಯಭಾಷೆಗಳ ಸೇರಿಕೊಳ್ಳುವಿಕೆಯಿಂದಾಗಿ ಇಲ್ಲಿಯ ಭಾಷೆ ಮತ್ತು ಅದರ ಪ್ರಭಾವ ಈ ಭಾಗದ ಮೇಲೆ ದೀರ್ಘ ಕಾಲದ ವರೆಗೆ ಪರಿಣಾಮ ಬೀರಿತು ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಹೀಗೆ ಪರರ ಆಡಳಿತ, ಪರರ ಸಂಸ್ಕೃತಿಯ ಪ್ರಭಾವ, ಅನ್ಯಭಾಷೆಗಳ ಸೇರಿಕೊಳ್ಳುವಿಕೆಯಿಂದಾಗಿ ಇಲ್ಲಿಯ ಭಾಷೆ ಮತ್ತು ಸಂಸ್ಕೃತಿ ಸಮ್ಮಿಶ್ರವಾಗಿರುವುದನ್ನು ಕಾಣುತ್ತೇವೆ. ಈ ಭಾಗದ ಗ್ರಾಮಾಂತರ ಪ್ರದೇಶಗಳಲ್ಲಿ ಇನ್ನು ಶುದ್ಧ ಜನಪದ ಭಾಷೆ ಬಳಕೆಯಲ್ಲಿದೆ. ಇದನ್ನು ಗಮನಿಸಿದಾಗ ಹೈದರಾಬಾದ್ ಕರ್ನಾಟಕ ಪ್ರದೇಶದ ಜನತೆಯ ಸಂಸ್ಕೃತಿಯು ಇತರ ಕರ್ನಾಟಕ ಜನತೆಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ನೋಡಿದಾಗ ಬಹಳಷ್ಟು ಭಿನ್ನವಾಗಿ ಮತ್ತು ಸಮೃದ್ಧವಾಗಿರುವುದು ಎದ್ದು ಕಾಣುತ್ತದೆ.

ಈ ಪ್ರದೇಶದ ಕಥೆಗಾರರು ಇಲ್ಲಿನ ಸಾಂಸ್ಕೃತಿಕ ಜನ ಜೀವನವನ್ನು ವಾಸ್ತವಾದದ ನೆಲೆಯಿಂದ ತೆರೆದಿಡಲು ಪ್ರಯತ್ನಿಸಿದ್ದಾರೆ. ನಿಜಾಮನ ಆಡಳಿತದ ನಾಯಕತ್ವದಲ್ಲಿ ನಡೆಸಿದ ರಜಾಕಾರರ ಸಂಘಟನೆಯ ದುಷ್ಕೃತ್ಯುಗಳು (ಸಂಬಂಧ), ಸ್ವಾತಂತ್ರ್ಯ ಯೋಧರ ಕೊಲೆ (ದಂಗೆ)

ಜನಸಾಮಾನ್ಯರ ದರೋಡೆ (ಸಾಲ, ಹುಳ ಹತ್ತಿದ ಮರ) ಸ್ತ್ರೀಯರ ಮಾನಭಂಗ (ಹುತ್ತಿನ ಹೂ) ಇಂತಹ ಕೆಲವಾರು ದೃಷ್ಟಿಕೋನಗಳನ್ನು ಕಥೆಗಾರರು ತಮ್ಮ ಕಥೆಗಳಲ್ಲಿ ಚಿತ್ರಿಸಿದ್ದನ್ನು ಕಾಣುತ್ತೇವೆ.

ಸಾಮಾಜಿಕ ರಾಜಕೀಯ, ಧಾರ್ಮಿಕ ಹಾಗೂ ಆರ್ಥಿಕ ರಂಗಗಳ ಜೊತೆಗೆ ದಲಿತರ ಶೋಷಣೆ ಅಮಾಯಕರ, ಧ್ವನಿ ಇಲ್ಲದವರ ಕಗ್ಗೊಲೆ, ಮಕ್ಕಳ ಶೋಷಣೆ( ಗ್ಯಾರೇಜ ಹುಡುಗ) ಸ್ತ್ರೀ ಶೋಷಣೆ (ಬೇಲಿ, ಲೂಟಿ) ದೇವರು ಧರ್ಮದ ಹೆಸರಿನಲ್ಲಿ ನಡೆಯುವ ಕೆಟ್ಟ ಆಚರಣೆ (ಹಬ್ಬ ಮತ್ತು ಬಲಿ, ಮಾಲಗಂಬ, ಎಲ್ಲಮ್ಮನ ಸೇವೆ, ಹುಳುಗಳು, ದೇವರ ಮಗ, ಪಲಾಯನ, ಥಾಲು, ಇಂದ್ರಿಯಾಣಿ ಪ್ರಾಮಾಥೀನಿ) ಹಾಗೂ ದುರಂತ ಪ್ರೇಮಿಗಳ ಸುತ್ತ ಕಥೆಗಳನ್ನು ಹೆಣೆಯುತ್ತಾ ಹೋಗುತ್ತಲೆ ಇಲ್ಲಿನ ಕೌಟುಂಬಿಕ ವ್ಯವಹಾರಗಳನ್ನು ಪರಿಚಯಿಸಿದ್ದಾರೆ. ಮತ್ತೆ ಇಲ್ಲಿಯ ಪ್ರದೇಶದ ಜನರ ಸಾಂಸ್ಕೃತಿಕ ಬದುಕಿನ ವಿಧಾನ, ಉಪಜೀವನ, ಸಂಪ್ರದಾಯ, ನಂಬಿಕೆ ಮುಂತಾದ ಜೀವನದ ರಸವತ್ತಾದ ವಿವರಣೆಗಳನ್ನು ಇಲ್ಲಿಯ ಕಥೆಗಳಲ್ಲಿ ಕಾಣುತ್ತೇವೆ. ಗ್ರಾಮೀಣ ಜನರ ಬದುಕಿನ ದಿನ ನಿತ್ಯದ ಘಟನೆಗಳ ಚಿತ್ರಣ (ಕೂಸು, ರೋಗ, ಗೌಡ್ರ ಗೌರಿ ಗುಂಡನ ಚೆನ್ನಿ, ಹಕ್ಕಲ ಶೇಂಗಾ, ಖಂದೀಲು ಕಳಸಪ್ಪ, ಕಳ್ರು, ಜರ್ದರುಮಾಲು, ಬಸ್ಯಾ, ನಿಂಗ, ರಾಸೂರಾಯಿ ಕಥೆ, ಸೋಮಕ್ಕನ ಕಥೆ ಹೀಗಾಯಿತೆ? ಈ ಕಥೆಗಳಲ್ಲಿ ಬಹು ಮಾರ್ಮಿಕವಾಗಿ ಮೂಡಿಸಿದ್ದಾರೆ.

ಇಷ್ಟೇ ಅಲ್ಲದೆ ಪ್ರೀತಿ–ಪ್ರೇಮ ಇಲ್ಲದ ಜೀವನ ಜೀವನವೇ ಅಲ್ಲ ಎನ್ನುವಾಗ ಅದನ್ನು ಮರೆಯಲು ಹೇಗೆ ಸಾಧ್ಯ, ಪ್ರೇಮಕ್ಕೆ ಸಂಬಂಧಿಸಿದ, ಪ್ರೇಮದ ಹೆಸರಿನಲ್ಲಿ ಸ್ತ್ರೀ ಶೋಷಣೆ, ಅನೈತಿಕ ಸಂಬಂಧಗಳು ಇವನ್ನು ವಸ್ತುವಾಗಿಟ್ಟುಕೊಂಡು ಬಿ.ಬಿ. ವಿಸಾಜಿ, ಎಂ.ಜಿ. ದೇಶಪಾಂಡೆ, ಶಾಂತರಸ, ಚೆನ್ನಣ್ಣ ವಾಲೀಕಾರ, ಗೀತಾನಾಗಭೂಷಣ ಹಾಗೂ ಗುರುನಾಥ ಅಕ್ಕಣ್ಣ ಮುಂತಾದವರು ರಚಿಸಿದ್ದಾರೆ. ಕೆಳವರ್ಗದ ಸ್ತ್ರೀಯರ ಜೀವನಕ್ಕೆ ಸಂಬಂಧಿಸಿದ ಹಲವಾರು ವಿಷಯಗಳನ್ನೊಳಗೊಂಡ ಇವರ ಕಥೆಗಳು ಅಜ್ಞಾನ, ಅನಕ್ಷರತೆ, ಮೂಢನಂಬಿಕೆ, ಶೋಷಣೆಗಳನ್ನು ಕುರಿತು ಎತ್ತಿ ಹೇಳುತ್ತವೆ. ಸ್ತ್ರೀ ಬದುಕಿನ ಹಲವಾರು ಮುಖಗಳನ್ನು ಪರಿಚಯಿಸುವುರೊಂದಿಗೆ ಸ್ತ್ರೀಯರು ಸಹನೆಯ ಮಿತಿ ಮೀರಿದಾಗ ಸಿಡಿದೇಳುವ ಪ್ರತಿಭಟಿಸುವ ಅಂಶ ಈ ಕಥೆಗಳ ಮೂಲಕ ತೋರಿಸಿದ್ದಾರೆ. (ಮಾಯೆ ಅಂದ್ರೆ ಮಾಯೆ, ಲೂಟಿ, ಬೇಲಿ ಮೂಡಲು ಹರಿಯಿತು.)

ಚಿತ್ರಶೇಖರ ಕಂಠಿ, ಸಿದ್ಧರಾಮ ಹೊನ್ಕಲ, ಸೂಗಯ್ಯ ಹಿರೇಮಠ ಹಾಗೂ ಹತಗುಂದಿಯವರು ಸಮಾಜದಲ್ಲಿನ ಹಲವು ಸಮಸ್ಯೆಗಳನ್ನು ತಮ್ಮ ಕಥೆಗಳಲ್ಲಿ ಹಿಡಿದಿಟ್ಟು ಅವುಗಳಿಗೆ ಪರಿಹಾರ ಹುಡುಕುವ ಪ್ರಯತ್ನದಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ನೊಂದ ಜೀವಿಗಳಿಗೆ ಸ್ಪಂದಿಸುವ ಮನೋಭಾವ, ದುರ್ಬಲರ ಪರವಾಧ ಕಥೆಗಳ ಜೊತೆಗೆ ಜಾತಿ ಸಂಘರ್ಷ, ಲೈಂಗಿಕ ತೃಪ್ತಿಗಾಗಿ ತಡಕಾಡುವ ಹಲವು ರೀತಿಯ ಜೀವಿಗಳಿಗೆ ತಮ್ಮ ಕಥೆಗಳಲ್ಲಿ ಪಾತ್ರಗಳ ಮೂಲಕ ಪರಿಹಾರವನ್ನು ಕಂಡುಕೊಂಡಿದ್ದಾರೆ.

ಸಾಮಾನ್ಯ ವಿಷಯ ವಸ್ತುವನ್ನು ಕುರಿತು ತಮ್ಮ ಕಥೆಯ ವಸ್ತುವನ್ನಾಗಿಸಿಕೊಂಡು ಕಥೆ ರಚಿಸಿದ, ಸರಿತಾ ಕುಸುಮಾಕರ ದೇಸಾಯಿ ಹಾಗೂ ಲಕ್ಷ್ಮೀದೇವಿ ಶಾಸ್ತ್ರಿಯವರು ಮನುಷ್ಯನ ಸೂಕ್ಷ್ಮ ಸ್ವಭಾವಗಳನ್ನು ಚಿತ್ರಿಸಲು ಹೊರಟಿದ್ದಾರೆ. ಹಾಸ್ಯ ಮತ್ತು ವಿಡಂಬನೆಯನ್ನೊಳಗೊಂಡ ಇವರ ಶೈಲಿ ಉತ್ತಮವಾಗಿದ್ದರು ಸಹ ವಸ್ತುವಿನ ಆಯ್ಕೆಯಲ್ಲಿ ಇನ್ನು ಸ್ವಲ್ಪ ಆಳಕ್ಕಿಳಿದಿದ್ದರೆ ಕಥೆಗಳು ಇನ್ನಷ್ಟು ಪರಿಣಾಮಕಾರಿಯಾಗುತ್ತಿದ್ದವು. ವಾಸ್ತವ ಅನುಭವದ ಕೊರತೆಯಿಂದಾಗಿ ಕಥೆಗಳಲ್ಲಿನ ಪಾತ್ರಗಳು ದುರ್ಬಲಗೊಂಡಿವೆ.

ಯಾವುದೇ ಸೃಜನಶೀಲ ಬರಹವನ್ನು ಅಧ್ಯಯನಕ್ಕೆ ಅಳವಡಿಸಿಕೊಂಡಾಗ ವೈಯಕ್ತಿಕ ನೆಲೆಯಲ್ಲಿ ನಿಂತು ವ್ಯಕ್ತಿನಿಷ್ಟತೆಯಿಂದ ನೋಡದೇ, ಆಯಾ ಬರಹಗಾರನ ಲೋಕಾನುಭವದ ಚಿಂತನೆಯ ಹರವು, ಭಾಷಾ ಪ್ರೌಢಿಮೆ, ತಂತ್ರದ ಹೊಸತನ, ಶೈಲಿಯ ವೈಶಿಷ್ಟ್ಯತೆ ಅವರ ಬರಹದ ಸ್ತರವನ್ನು ಗುರುತಿಸಬೇಕಾಗುತ್ತದೆ.

ಅನುಭವದ ಗಟ್ಟಿತನದಿಂದ ಸಮಸ್ಯೆಯ ಒಳ ವಿವರಗಳನ್ನು ಕಲಾತ್ಮಕವಾಗಿ ಕಟ್ಟಿ ಜೊಡಿಸುವ ದಿಟ್ಟತನ, ವಿವರಗಳ ಸಮೃದ್ಧತೆ, ಪ್ರಾದೇಶಿಕ ಭಾಷೆಯು ಮೇಲಿನ ಹಿಡಿತ, ನಿರೂಪಣೆಯಲ್ಲಿನ ನಿಖರತೆ, ಸಹಜ ಹಾಗೂ ಸುಂದರವಾದ ಅಭಿವ್ಯಕ್ತಿ ಪಾತ್ರಗಳ ಜೀವಂತಿಕೆ ಮತ್ತು ಸಾಂಕೇತಿಕತೆ, ವಾಸ್ತವವಾದ, ಸನ್ನಿವೇಶ ನಿರ್ಮಾಣ ಇವು ಹೈದ್ರಾಬಾದ್ ಕರ್ನಾಟಕ ಕಥೆಗಾರರ ವೈಶುಷ್ಯತೆಗಳು. ಅಲ್ಲದೆ ವರ್ಣನೆಗಳು, ಅನ್ಯ ಭಾಷೆಯ ಪದಗಳು, ನಾಣ್ಣುಡುಗಳು, ದ್ವಿರುಕ್ತಿಗಳು. ಯಮಳ ಪದಗಳು, ಪಡೆನುಡಿಗಳನ್ನು ಬಳಸಿ ಬರೆದದ್ದು ಇನ್ನೂ ಅರ್ಥಪೂರ್ಣ.

ಹೊಸ ಹೊಸ ವಸ್ತು ಸಮಸ್ಯೆಗಳನ್ನು ಆಯ್ದುಕೊಳ್ಳುವುದರ ಮೂಲಕ ಜನರಲ್ಲಿ ಪ್ರಜ್ಞೆ ಮೂಡಿಸುವ ನಿಟ್ಟಿನಲ್ಲಿ ಕಾಲ್ಪನಿಕತೆಗಿಂತ ವಾಸ್ತವತೆಯ ನೆಲೆಯಲ್ಲಿ ಕಥೆ ಹೆಣೆದಿರುವುದು ಗಮನಾರ್ಹ ಸಂಗತಿ. ಸಮಾಜದ ಹಲವಾರು ಸಮಸ್ಯೆಗಳನ್ನು ಎತ್ತಿ ತೋರಿಸುವಲ್ಲಿ ಈ ಕಥೆಗಾರರು ಸಫಲರಾಗಿದ್ದಾರೆ.

**ಫಲಿತಗಳು :**

ಹೈದರಾಬಾದ್ ಕರ್ನಾಟಕದ ಕಥಾ ಸಾಹಿತ್ಯದಲ್ಲಿ ಮಹಿಳಾ ಚಿತ್ರಣ ಎಂಬ ವಿಷಯಕ್ಕೆ ಸಂಬಂಧಿಸಿದ ಈ ಮಹಾಪ್ರಬಂಧದ ಉದ್ದೇಶಗಳು ಹೇಳುವಂತೆ ಅಧ್ಯಯನಗಳನ್ನು ಸಮರ್ಥವಾಗಿ ಚರ್ಚಿಸಲಾಗಿದೆ. ಅಂತೆಯೇ ಕಂಡು ಕೊಂಡ ಫಲಿತಗಳು ಹೀಗಿವೆ.

ಈ ಮಹಾಪ್ರಬಂಧ ಒಟ್ಟು ಚೌಕಟ್ಟನ್ನು ಏಳು ಅಧ್ಯಾಯಗಳ ಒಳ ವಿವರಗಳಲ್ಲಿ ಮಂಡಿಸಲಾಗಿದೆ.

೧. ಪ್ರಸ್ತುತ ಮಹಾಪ್ರಬಂಧದಲ್ಲಿ ಸಂಶೋಧನೆಯನ್ನು ನಿರ್ವಹಿಸುವ ಬಗೆಯಲ್ಲಿ ವೈಧಾನಿಕತೆಗಳನ್ನು ರೂಪಿಸಿಕೊಂಡು ಅನುಸರಿಸಲಾಗಿದೆ. ಜೊತೆಗೆ ಬೇರೆ ಬೇರೆ ಜ್ಞಾನ ಶಾಖೆಗಳು ಮಹಿಳಾ ಪರಿಕಲ್ಪನೆಯನ್ನು ಹೇಗೆ ನಿರ್ವಹಿಸುತ್ತವೆ ಎಂಬ ಹಿನ್ನೆಲೆಯಲ್ಲಿ ಸ್ತ್ರೀವಾದಿ ಪರಿಕಲ್ಪನೆಯನ್ನು

ಅರ್ಥೈಸಿಕೊಂಡಿದೆ. ಅಂದರೆ ಸ್ತ್ರೀವಾದಿ ತಾತ್ವಿಕತೆಯನ್ನು ಸ್ತ್ರೀವಾದಿ ಚಿಂತಕಿಯರು, ಲೇಖಕಿಯರು, ಮಹಿಳಾ ಚಳುವಳಿಯ ಧೋರಣೆಗಳು ಇವೆಲ್ಲವುಗಳ ನೆಲೆಯಲ್ಲಿ ವಿವೇಚಿಸಲಾಗಿದೆ.

೨. ಈಗಾಗಲೇ ನಡೆದ ಅಧ್ಯಯನಗಳನ್ನು ಕುರಿತು ಚಾರಿತ್ರಿಕ ಸಮೀಕ್ಷೆ ಮಾಡಲಾಗಿದೆ ಬಿಡಿ ಲೇಖನ, ಮುನ್ನುಡಿ ಹಾಗೂ ಮಹಾಪ್ರಬಂಧಗಳಲ್ಲಿ ವಿಶ್ಲೇಷಿಸಲ್ಪಟ್ಟ ಕಥಾ ಸಾಹಿತ್ಯ ಹಾಗೂ ಮಹಿಳಾ ಬದುಕನ್ನು ಸಮೀಕ್ಷಿಸಲಾಗಿದೆ. ಇಲ್ಲಿಯ ಸಮೀಕ್ಷೆಯ ಅಧ್ಯಯನಗಳು ವ್ಯಕ್ತಿ ಕೇಂದ್ರಿತ ಹಾಗೂ ಕೃತಿಕೇಂದ್ರಿತ ನೆಲೆಯವುಗಳಾಗಿವೆ ಎಂಬುದನ್ನು ವಿಶ್ಲೇಷಿಸಿದೆ. ಇವು ಪ್ರಸ್ತುತ ಅಧ್ಯಯನ ಸಾಗಬೇಕಾದ ನೆಲೆಗಳನ್ನು ಕಂಡುಕೊಳ್ಳಲು ಸಹಕಾರವಾಗಿವೆ.

೩. ಇಲ್ಲಿಯ ಕಥೆಗಾರರು ಕಥಾ ಸಾಹಿತ್ಯದಲ್ಲಿ ತಮ್ಮದೇ ಆದ ಸ್ಥಾನ ಪಡೆದುಕೊಂಡಿರುವುದನ್ನು ಕಾಣಬಹುದು. ಕನ್ನಡ ಕಥಾ ಸಾಹಿತ್ಯಕ್ಕೆ ಇಲ್ಲಿಯ ಕಥಾ ಸಾಹಿತ್ಯದ ಕೊಡುಗೆ ವಿಶಿಷ್ಟವಾಗಿ ಮಹತ್ವದ್ದಾಗಿದೆ. ಹೈದರಾಬಾದ್ ಕರ್ನಾಟಕದ ಬದುಕಿನ ಚಾರಿತ್ರಿಕ ಅವಲೋಕನವನ್ನು ಕಥಾ ಸಾಹಿತ್ಯ ಕಟ್ಟಿಕೊಟ್ಟ ನೆಲೆಗಳನ್ನು ಕುರಿತು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಪ್ರದೇಶದ ಜನ ಜೀವನವು ಹಲವು ಸ್ಥಿತ್ಯಂತರಗಳಿಂದ ಕೂಡಿದೆ ಎಂಬುದನ್ನು ಕಾಣಬಹುದು. ಕೆಲವು ಕಥೆಗಳು ಗ್ರಾಮೀಣ ಬದುಕಿನ ದಟ್ಟ ಚಿತ್ರಣ ನೀಡುತ್ತವೆ. ಗ್ರಾಮೀಣ ಭಾಗದ ಜನತೆಯಲ್ಲಿ ಇಂದಿಗೂ ಮೂಡನಂಬಿಕೆಗಳು, ಸಂಪ್ರದಾಯಗಳು, ಆಚರಣೆಗಳು ಹೇಗೆ ಅಸ್ತಿತ್ವದಲ್ಲಿವೆ ಎಂಬುದನ್ನು ವಾಸ್ತವವಾದಿ ನೆಲೆಯಲ್ಲಿ ಕಾಣಿಸಿದ್ದಾರೆ. ಕೆಲವು ಕಥೆಗಳು ದಲಿತತ್ವದ ಅಂಶಗಳನ್ನು ಬಿತ್ತರಿಸುತ್ತವೆ. ದಲಿತರು ಎಂದರೆ ಯಾರು ಅವರ ನೋವು ನಲಿವುಗಳು, ಯಾತನೆಗಳು, ಶೋಷಣೆಗಳು, ದಬ್ಬಾಳಿಕೆಗಳು ಈ ಮುಂತಾದ ಅಂಶಗಳನ್ನು ಅವರ ಕಥೆಗಳಲ್ಲಿ ಶಕ್ತವಾಗಿ ಚಿತ್ರಿಸಿದ್ದಾರೆ. ಇನ್ನು ಕೆಲವು ಕಥೆಗಳು ಧರ್ಮದ ಹೆಸರಿನಲ್ಲಿ ಮೋಸ ಮಾಡುವ ಸಮಯ ಸಾಧಕರು, ಜಾತಿ, ಅನೀತಿ ಈ ಅಂಶಗಳನ್ನು ಬಿತ್ತರಿಸುತ್ತವೆ.

ಹೀಗೆ ಸಮಾಜದಲ್ಲಿ ಕಂಡುಬರುವಂತಹ ಅನ್ಯಾಯ, ಅನೀತಿ ಮೊದಲಾದವುಗಳನ್ನು ತಮ್ಮದೇ ಆದ ದೃಷ್ಟಿಕೋನದಿಂದ ಕಥೆಗಳಲ್ಲಿ ಕಟ್ಟಿಕೊಡುವುದರ ಜೊತೆಗೆ ಗ್ರಾಮೀಣ ಜೀವನದ ನೆಲೆಗಳನ್ನು ಶೋಧಿಸುವಂತೆ ಆಧುನಿಕ ಜೀವನದ ನೆಲೆಗಳನ್ನು ಕೂಡ ಶೋಧಿಸಿರುವುದನ್ನು ಕಾಣಲಾಗಿದೆ.

೪. ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಮಹಿಳಾ ಬದುಕಿನ ಅನಾವರಣವನ್ನು ವಿಶ್ಲೇಷಣಾತ್ಮಕ ವಿಧಾನದಲ್ಲಿ ವಿವರಿಸುತ್ತ ಆಕರಗಳು ಹೊರ ಹಾಕುವ ಮಹಿಳಾ ಬದುಕನ್ನು ಪ್ರತಿನಿಧಿಕರಣದ ಪರಿಕಲ್ಪನೆಯಲ್ಲಿ ಗ್ರಹಿಸಲಾಗಿದೆ. ಈ ಸಮಾಜದಲ್ಲಿಯ ಲಿಂಗಾಧಾರಿತ ಅಸಮಾನತೆಯನ್ನು ಎದುರಿಸುವ ತಾರತಮ್ಯದ ದೋರಣೆ, ಶೋಷಣೆಯನ್ನು ಗುರುತಿಸುತ್ತಾ ಈ

ಪ್ರವೃತ್ತಿಗಳನ್ನು ನಿವಾರಿಸಲು ನಡೆಯುವ ಪ್ರಜ್ಞಾಪೂರ್ವಕ ಹಾಗೂ ಪ್ರಾಮಾಣಿಕ ಪ್ರಯತ್ನವೇ ಸ್ತ್ರೀವಾದ ಆಗಿದೆ ಎಂದು ತಿಳಿದುಕೊಳ್ಳಲು ಸಾಧ್ಯವಾಗಿದೆ.

೫. ಹೈದರಾಬಾದ್ ಕರ್ನಾಟಕದ ಮಹಿಳಾ ಬದುಕಿನ ವಾಸ್ತವವನ್ನು ಕಥಾ ಸಾಹಿತ್ಯ ನಿರೂಪಿಸುವ ರೀತಿಯಲ್ಲಿ ಗ್ರಹಿಸಲಾಗಿದೆ. ಈ ಹಿನ್ನಲೆಯಲ್ಲಿ ಸ್ತ್ರೀ-ಚಿಂತನೆಯ ಕಥೆಗಳನ್ನು ಅನ್ವಯಿಸಿಕೊಂಡಿದೆ. ಮಹಿಳೆಯರ ಬದುಕನ್ನು ಕುರಿತು ಪುರುಷರ ಹಾಗೂ ಸ್ತ್ರೀಯರ ಕಥಾ ಸಾಹಿತ್ಯದಿಂದ ತಿಳಿಯಲಾಗಿದೆ. ಮಹಿಳಾ ಬದುಕು ಎಂಬುದು ಅಖಂಡವಲ್ಲ. ಮಹಿಳೆಯರಲ್ಲೇ ಭಿನ್ನ ಬದುಕಿನ ರೀತಿಗಳಿವೆ. ಅದು ಪಿತೃಪ್ರಧಾನ ನಿರ್ದೇಶನಗಳ ಆಧಾರದ ಮೇಲೆ ರಚನೆಗೊಂಡದ್ದಾಗಿರುತ್ತದೆ. ಮಹಿಳಾ ಕೇಂದ್ರಿತ ವಸ್ತುವಿನಲ್ಲಿ ಮಹಿಳಾ ಬದುಕಿಗೆ ಸಂಬಂಧಿಸಿದ ವಿವರಗಳು ಕಂಡುಬರುತ್ತವೆ. ಮಹಿಳೆ ಅನುಭವಿಸಿದ ವಿವಿಧ ಸಮಸ್ಯೆಗಳು, ಅವಳ ನೋವು ನಿರಾಸೆಗಳು, ಬದುಕಲು ಅವಳು ನಡೆಸಿದ ಪ್ರಯತ್ನಗಳು ಮುಂತಾದವುಗಳು ಕಾಣಿಸಿಕೊಂಡಿವೆ.

೬. ಕೌಟುಂಬಿಕ ವ್ಯವಸ್ಥೆಯಲ್ಲಿ ಮಹಿಳೆಯ ಸ್ಥಾನಮಾನಗಳು ಪಕ್ಕಕ್ಕೆ ತಳ್ಳಲ್ಪಟ್ಟಿವೆ. ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯ ಮತ್ತು ಹಿಂಸೆ ಪ್ರಧಾನವಾಗಿ ಗೃಹಿಣಿತ್ವ-ಸ್ತ್ರೀತ್ವವನ್ನೇ ಆಧರಿಸಿವೆ. ಎಂಬುದು ತಿಳಿದುಬರುತ್ತದೆ. ಇದಕ್ಕೆ ಪುರುಷನ ಬೇಜವಾಬ್ದಾರಿ, ದುಡುಕು, ಸಣ್ಣತನ ಹೊರಚಾಳಿ, ಕುಡುತ, ಕ್ರಾರ್ಯ, ದೌರ್ಜನ್ಯ ಹಾಗೂ ಅಧಿಕಾರ ಕಾರಣ ಎನ್ನಬಹುದು.

ಇಲ್ಲಿಯ ಸಂಧ್ಯಾ ಹೊನಗುಂಟಿಕರ ಅವರ 'ಬಾಲಕತ್ತರಿಸಿದರೆ ಡೊಂಕೆಲ್ಲಿ' ಕಥೆಯ ಪಾರಮ್ಮ, ಚಂದ್ರಕಾಂತ ಕುಸನೂರ ಅವರ 'ಮಾಯೆ ಅಂದ್ರೆ ಮಾಯೆ' ಕಥೆಯ ರಾಚಮ್ಮ, ರಾಜಶೇಖರ ಹತಗುಂದಿಯವರ 'ಪೊರೆ ಕಳಚುವ ಪರಿ' ಕಥೆಯ ಶಾಣಮ್ಮ ಗೌಡ್ತಿ ಇತ್ಯಾದಿ ಇಲ್ಲಿಯ ಮಹಿಳೆಯರು ಕುಟುಂಬ ಹಿಂಸೆಯಲ್ಲಿ ನರಳಿದವರು.

ಇಲ್ಲಿಯ ಕಥಾ ಸಾಹಿತ್ಯದಲ್ಲಿ ಮಹಿಳೆಯ ಮೇಲಾದ ಆರ್ಥಿಕ ಶೋಷಣೆಯನ್ನು ಕಾಣಬಹುದು. ಜಯತೀರ್ಥ ರಾಜ ಪುರೋಹಿತರ 'ಗಂಧವತೀ ಪೃಥಿವಿ' ಕಥೆಯ ಶಾರದ, ಶ್ರೀಕಾಂತ ಪಾಟೀಲರ 'ಮೂಡಲದಾಗ ಕೆಂಪು ರಾಶಿ ಮೂಡಿತ್ತು' ಕಥೆಯ ಸಣ್ಣಿ ಮತ್ತು ಬಸಮ್ಮ, ಅಮರೇಶ ನುಗಡೋಣಿಯವರ 'ಮಣ್ಣು ಸೇರಿತು ಬೀಜ' ಕಥೆಯ ನಾಗಮ್ಮ ಆರ್ಥಿಕ ಶೋಷಣೆಗೆ ಒಳಪಟ್ಟವರು.

ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಆಸ್ತಿ ಸಂಬಂಧಿ ಪ್ರಸ್ತಾಪ ಬರುವುದು ಸಾಮಾನ್ಯವಾಗಿ ವಿಧವೆಯರ ಸಂದರ್ಭದಲ್ಲಿ ವಿಧವೆಯರಿಗೆ ಪಾಲು ಕೊಡಬಾರದೆಂಬ ಧೋರಣೆಯೆ ಸಮಾಜದಲ್ಲಿ ನೆಲೆಗೊಂಡಿರುವುದನ್ನು, ವಿಧವೆಯ ಆಸ್ಥಿಯನ್ನು ಸಂಬಂಧಿಗಳು ಸಂಬಂಧಿಗಳಲ್ಲದವರು ಕಿತ್ತು ಕೊಳ್ಳಲು ಪ್ರಯತ್ನಿಸುವುದನ್ನು ಕಾಣಬಹುದು. ವಿಧವೆಯರೂ ತಮ್ಮ ಪಾಲನ್ನು ಪಡೆಯಲು ಹೋರಾಡುವುದು, ಕಾಶಮ್ಮ, ಸಣ್ಣಿ, ತುಳಜಾ ಈ ಪ್ರಯತ್ನದಲ್ಲಿ ಸಫಲರಾದರೆ ವೃಂದಾಬಾಯಿ

ನಾಗಮ್ಮನಂಥವರು ವಿಫಲರಾಗುತ್ತಾರೆ. ಮಹಿಳೆ ಕಾನೂನುಬದ್ಧವಾಗಿ ಸಹಜವಾಗಿ ಆಸ್ತಿಪಾಲನ್ನು ಪಡೆಯಬಹುದಾದ ಅವಕಾಶವಿದ್ದಾಗಲೂ ಹೋರಾಡದೆ ಗತ್ಯಂತರವಿಲ್ಲ ಎಂಬಂಥ ಸ್ಥಿತಿಯೆ ಇಂದಿಗೂ ಕಂಡುಬರುತ್ತದೆ.

ಹೀಗೆ ಪುರುಷ ಪ್ರಧಾನ ಸಂಸ್ಕೃತಿ ಗೆರೆ ಎಳೆದಿರುವ ವ್ಯವಸ್ಥೆಯಲ್ಲಿ ಮಹಿಳೆಯ ಬದುಕಿನ ಗೆಲುವು ಅಂದರೆ ಸಮಸ್ಯೆಗಳೊಂದಿಗೆ ಬದುಕನ್ನು ನಿರ್ವಹಿಸಿಕೊಂಡು ಹೋಗುವುದು. ಬದುಕೇ ಸ್ತ್ರೀ ಹೋರಾಟವಾಗಿದೆ. ನಿರೀಕ್ಷೆ ಅಂದರೆ ಸಹಿಸಿಕೊಂಡು ಬಾಳುವುದು. ಎದುರಿಸಿ ಬಾಳುವುದು ಅಸಾಧ್ಯವಾಗಿತ್ತು. ಸ್ವಾತಂತ್ರ್ಯ, ನೆಮ್ಮದಿ ಹಾಗೂ ಹೊಸ ಬದುಕಿಗೆ ಆಸೆಪಟ್ಟಿರಲಿಲ್ಲ. ಏಕೆಂದರೆ ಅವಳ ಮನಸ್ಸು ಆ ಸಮಸ್ಯೆಗಳಿಗೆ ಒಗ್ಗಿ ಬಿಟ್ಟಿತು. ಅದರಲ್ಲೂ ಬದುಕು ಕಟ್ಟಿಕೊಂಡು ಬಾಳಿದ ಮಹಿಳೆಯರು ಕಾಣಸಿಗುತ್ತಾರೆ.

ಹೈದರಾಬಾದ್ ಕರ್ನಾಟಕ ಕಥಾ ಸಾಹಿತ್ಯದಲ್ಲಿ ಬದುಕು ಕಟ್ಟುವವರಾಗಿ ಮಲ್ಲಿಕಾರ್ಜುನ ಹೀರೇಮಠರ 'ಲಕ್ಕವ್ವನ ಮಂದಿ' ಕಥೆಯ ನಾಗವ್ವ, ಶ್ರೀಕಾಂತ ಪಾಟೀಲರ 'ಸನ್ಮಾರ್ಗ' ಕಥೆಯ ಸೋನಕ್ಕ, ರಾಜಶೇಖರ ನೀರಮಾನ್ವಿಯವರ 'ವೃತ್ತ' ಕಥೆಯ ಪಾರ್ವತಿ ಗೌಡತಿ, ಎಂ.ಜಿ.ದೇಶಪಾಂಡೆಯವರ 'ವಿಪರ್ಯಾಸ' ಕಥೆಯ ಪ್ರಿಯಾ 'ಚರಿತ್ರ ಹೀನ' ಕಥೆಯ ರಂಜಿನಿ, ಲಲಿತಾ ದೇಮಶೆಟ್ಟಿಯವರ 'ಆರಕ್ಷಕ' ಕಥೆಯ ಪಾರ್ವತಿ, ಸಂಧ್ಯಾ ಹೊನಗುಂಟಿಕರ ಅವರ 'ಜಿಜೀವಿಷಾ' ಕಥೆಯ ನಾಯಕಿ, 'ಇಳಿ ಹೊತ್ತಿನಲ್ಲಿ ಕದ ತಟ್ಟಿದ ಅತಿಥಿ' ಕಥೆಯ ಡಾ.ಮಂದಾಕಿನಿ, ಈ ಮೊದಲಾದವಗಳನ್ನು ಗುರುತಿಸಲಾಗಿದೆ.

ಹೀಗೆ ಇಲ್ಲಿ ಚರ್ಚೆಗೊಂಡ ಮಹಿಳೆಯ ಚಿತ್ರಣ ಜೀವನದ ದುರ್ಭರ ಪರಿಸ್ಥಿತಿಗಳಲ್ಲಿ ತಮ್ಮೊಳಗಿನ ಸಾಮರ್ಥ್ಯವನ್ನು ಬಳಸಿಕೊಂಡು ಅತ್ಯಂತ ಸಮರ್ಥವಾಗಿ ಬದುಕನ್ನು ಕಟ್ಟಿಕೊಳ್ಳುತ್ತಾರೆ. ಇತರರಿಗೆ ಮಾದರಿ ಎಂಬಂತೆ ಬದುಕುತ್ತಾರೆ. ಯಾರ ಆಸರೆ, ಸಹಾಯಕ್ಕಾಗಿ ನಿರೀಕ್ಷಿಸದೆ ತಮ್ಮ ಮೇಲೆ ನಂಬಿಗೆ ಇಟ್ಟುಕೊಂಡು ಸ್ವಾಭಿಮಾನದಿಂದ ಬದುಕುತ್ತಾರೆ. ತಮ್ಮನ್ನು ಆಶ್ರಯಿಸಿ ಬಂದವರ, ತಮ್ಮನ್ನೆ ನಂಬಿದವರ ಬದುಕನ್ನು ಕಟ್ಟಿಕೊಡುತ್ತಾರೆ. ಬದುಕಿ ಬದುಕಿಸುವ ಜೀವಪರ ಕಾಳಜಿಯವರಾಗಿದ್ದಾರೆ

ವಿವಾಹ ಕೇಂದ್ರಿತ ಸಮಸ್ಯೆಗಳಲ್ಲಿ ಬಾಲ್ಯವಿವಾಹ, ಪ್ರೌಢವಿವಾಹ, ವಿಷಮ ದಾಂಪತ್ಯ, ಅನ್ಯ ಸಂಬಂಧ, ಕುಡಿತ, ಹಿಂಸೆ ಮರ್ಯಾದೆ ಮೀರಿದ ವರ್ತನೆ ಅಸಮವಯಸ್ಸು, ಗಂಡು ಸಂತಾನದ ಅಪೇಕ್ಷೆ, ಮರುವಿವಾಹ, ಅಂತರ್ ಜಾತಿವಿವಾಹ ಅರಕ್ಷಿತ ಸ್ಥಿತಿ, ಕೂಡಿಕೆ, ಹೆಂಡತಿಯನ್ನು ನಿಯಂತ್ರಿಸಬೇಕೆಂಬ ಹಟ, ಪಾಲಕರ ಸ್ವಾರ್ಥಗಳು ಮೊದಲಾದವುಗಳು ಮಹಿಳೆಯ ಬದುಕನ್ನು ಸಂಕಷ್ಟಕ್ಕೆ ದೂಡುತ್ತವೆ. ವಿವಾಹ ಕುಟುಂಬಗಳೆ ಮಹಿಳೆಯ ಅಧೀನ ಸ್ಥಿತಿಗೆ ಕಾರಣವೆಂದು

ಪರಿಭಾವಿಸುವ ಮಹಿಳಾವಾದಿಗಳ ನಿಲುವು ಸರಿಯಾದುದೆ ಎಂಬುದನ್ನು ಕಥಾ ಸಾಹಿತ್ಯದ ಮಹಿಳಾ ಬದುಕು ಸಮರ್ಥಿಸುವಂತೆನಿಸುತ್ತದೆ.

ಮಹಿಳೆ ದ್ವಿತೀಯ ದರ್ಜೆಯ ಸ್ಥಾನಮಾನವನ್ನು ಹೊಂದುವಲ್ಲಿ ಚರಿತ್ರೆಯ ಬೆಳವಣಿಗೆಯಲ್ಲಿ ಕಾರಣವಾದ ಅಂಶಗಳಾವುವು ಎಂಬುದನ್ನು ಅರಿಯಲು ಈ ನೆಲೆಗಳನ್ನು ಶೋಧಿಸಲಾಗಿದೆ. ಇಂಥ ವಿಚಾರಗಳು ಪುರುಷ ಪ್ರಧಾನ ಚಿಂತನೆಗಳ ಪರಿಣಾಮಗಳಲ್ಲದೆ ಬೇರಿಲ್ಲವೆಂಬುದನ್ನು ಈ ಅಧ್ಯಯನ ಸ್ಪಷ್ಟಪಡಿಸುತ್ತದೆ.

ಅಮರಾನಂದ ಬೆಟ್ಟದೂರರ 'ಹೆಣ್ಣು ಮಕ್ಕಳೇ ಬಲ್ಲರು' ಕಥೆಯ ಚನ್ನಮ್ಮ, ಜಯತೀರ್ಥ ರಾಜಪುರೋಹಿತರ 'ರೋಹಿಣಿ' ಕಥೆಯ ರೋಹಿಣಿ ಮೊದಲಾದವು ಬಾಲ್ಯ ವಿವಾಹದ ಸಮಸ್ಯೆಯನ್ನು ಹೇಳುವಂತವು. ಶಾಂತರಸರ 'ಸಂಬಂಧಗಳು' ಕಥೆ (ಮಹಾದೇವಿ), 'ಮಾಯೆ ಅಂದ್ರ ಮಾಯೆ' ಕಥೆ (ರಾಚಮ್ಮ)ಗಳು ವಿವಾಹ ಕೇಂದ್ರಿತ ಸಮಸ್ಯೆಯ ಮಹಿಳೆಯ ಬದುಕನ್ನು ಪ್ರಭಾವಿಸುವುವಾಗಿವೆ.

ಎಂ.ಜಿ.ದೇಶಪಾಂಡೆಯವರ 'ಪರಿಣಾಮ' ಕಥೆ(ಶಾಂತದೇವಿ) ವಿಷಮ ದಾಂಪತ್ಯದ ದುರಂತ ವಸ್ತುವಿನದು. 'ಬಾಳಿನೊಳಗಿನ ರಹಸ್ಯ' ಕಥೆ(ಸಂಗೀತಾ) ಯಲ್ಲಿ ಅರಕ್ಷಿತ ಕುಟುಂಬದ ಕೃತ್ಯ ಚಿತ್ರಿಸಿದ್ದಾರೆ. ಶಿವಕುಮಾರ ನಾಗವಾರರ 'ಬಾಬಡಿ' ಕಥೆ ಬಹುಪತ್ನಿತ್ವವು ಮಹಿಳಾ ಬದುಕಿನ ಮೇಲೆ ಉಂಟುಮಾಡುವ ಪರಿಣಾಮವನ್ನು ಕಟ್ಟಿಕೊಡುತ್ತದೆ. ಪುತ್ರ ಪ್ರಾಪ್ತಿಗಾಗಿ ಮರುವಿವಾಹ ಬಿ.ಟಿ.ಲಲಿತಾ ನಾಯಕರ 'ಮರುಮದುವೆ' ಕಥೆ(ಗೌರಿ) ಯಲ್ಲಿ ಬಿಂಬಿತವಾಗಿದೆ. ರಾಜಶೇಖರ ಹತಗುಂದಿಯವರ "ರತ್ನಾ ಎಂಬ ಹುಡುಗಿಯ ಸಾವು" ಕಥೆ(ರತ್ನಾ) ಕುಟುಂಬವೆ ಶೋಷಣಾ ನೆಲೆಯಾಗುವ ವಸ್ತುವನ್ನು ಒಳಗೊಂಡಿದ್ದು. ಸಂಧ್ಯಾ ಹೊನಗುಂಟಿಕರರ 'ತನಗೆಟುಕದಿದ್ದರೇನು' ಕಥೆ(ಸುಧಾ)ವೈಧವ್ಯದಿಂದ ನೀರಸವಾಗಿದ್ದ ಬದುಕನ್ನು ವಿಧವಾ ವಿವಾಹದ ಮೂಲಕ ಪುನಃ ಕಟ್ಟಿಕೊಳ್ಳುವುದಾಗಿದೆ. ಲಲಿತಾ ದೇಮಶೆಟ್ಟಿಯವರ 'ಮಮತೆಯ ಕೊಲೆ' ಕಥೆ (ಚಂದ್ರಿಯ) ತಾಯಿಯೆ ಕೊಲೆಪಾತಕಿಯಾಗುವ ವಸ್ತುವಿನದು. ವಿವಾಹ ಕೇಂದ್ರಿತ ಸಮಸ್ಯೆಗಳಲ್ಲಿ ವಿವಾಹ ಬಾಹಿರ ಸಂಬಂಧಗಳು ಸಾಕಷ್ಟು ಚರ್ಚೆಗೊಳಗಾಗಿವೆ.

ಅಮರೇಶ ನುಗಡೋಣಿಯವರ 'ಒತ್ತೆ' ಕಥೆಯ ದೇವಕಿ, ಸಂಧ್ಯಾಹೊನಗುಂಟಿಕರ ಅವರ 'ಕಡಲ ಒಡಲು ಬಗೆದಷ್ಟು' ಕಥೆಯ ಅವ್ವ, ಶಾಂತರಸರ 'ಕಿಡಿ' ಕಥೆಯ ದೇವಕಿ, ಶ್ರೀಕಾಂತ ಪಾಟೀಲರ 'ಧರ್ಮ-ಬೇಲಿ-ಬದುಕು' ಕಥೆಯ ಮಲ್ಲಮ್ಮ, ಮೊದಲಾದ ಮಹಿಳೆಯರು ವಿವಾಹ ಸಂಸ್ಥೆಯ ವ್ಯವಸ್ಥೆಯನ್ನು ದಾಟಿ ವಿವಾಹ ಸಂಸ್ಥೆಯಲ್ಲಿದ್ದುಕೊಂಡೇ, ವಿವಾಹ ಬಾಹಿರ ಸಂಬಂಧಗಳಿಂದ ತಮಗಾದ ಅನ್ಯಾಯವನ್ನು ಪ್ರತಿರೋಧಿಸುತ್ತಾರೆ.

ವಿಧವಾ ವಿವಾಹ, ಪುನರ್ ವಿವಾಹ ಅಥವಾ ವಿವಾಹ ಮಹಿಳೆಗೆ ಅನಿವಾರ್ಯವೇ ಎಂಬ ಚಿಂತನಾ ಕ್ರಮಗಳು ಆರಂಭವಾಗಿದ್ದರೂ, ಶಿಕ್ಷಣ ವಂಚಿತ ಪ್ರಗತಿಯಿಂದ ದೂರ, ಸಂಪ್ರದಾಯಶೀಲ

ಪ್ರವೃತ್ತಿಯ ಹೈದರಾಬಾದ್ ಕರ್ನಾಟಕ ಸಾಮಾಜಿಕ ವ್ಯವಸ್ಥೆಯಲ್ಲಿ ವಿಧವಾ ವಿವಾಹ ಅಥವಾ ಪುನರ್ ವಿವಾಹಕ್ಕಾಗಿ ಪ್ರಯತ್ನಿಸುವುದೇ ಸುಧಾರಣಾವಾದಿ ಧೋರಣೆಯಾಗಿ ಕಥಾ ಸಾಹಿತ್ಯದಲ್ಲಿ ಮೂಡಿಬಂದಿದೆ. ವಿಧವಾ ವಿವಾಹ ಇಂದಿಗೂ ಸಹಜವಾಗಿ ನಡೆಯುತ್ತಿಲ್ಲ. ನಡೆಯುವಂತಾಗಬೇಕೆಂಬ ಆಶಯ ಕಥಾ ಸಾಹಿತ್ಯದಲ್ಲಿ ವ್ಯಕ್ತವಾಗಿದೆ.

ಜಾತಿ ಸಮಸ್ಯೆಯನ್ನು ವಸ್ತುವಾಗಿಸಿಕೊಂಡ ಕಥೆಗಳಿವೆ. ಅಮರೇಶ ನುಗಡೋಣಿಯವರ ಕಥೆ 'ಮನ್ನಿಸಿ ಮೂಕಾದ ಮೇಲೆ' ಯಲ್ಲಿ ಬೇಡರ ನಾಗರಾಜ ವೀರಶೈವರ ಮಾದೇವಿ ಪರಸ್ಪರ ಪ್ರೀತಿಸಿದಾಗ ಜಾತಿಯ ಕಾರಣಕ್ಕಾಗಿಯೆ ಮಹಾದೇವಿಯ ಬಸಿರನ್ನು ತೆಗೆಸಿ ಮೂಲೆಗುಂಪು ಮಾಡಲಾಗುತ್ತದೆ. ಲಲಿತಾ ದೇಮಶೆಟ್ಟಿಯವರ ಸೋಲು ಕಥೆ ಹಾವಪ್ಪನ ಕುತಂತ್ರಕ್ಕೆ ಗಂಗಿಯ ಬದುಕು ಬಲಿಯಾಗುವದನ್ನು ಚಿತ್ರಿಸುತ್ತದೆ. ಎಂ.ಜಿ.ದೇಶಪಾಂಡೆಯವರ 'ಜಾತಿ ಅರಿಯದ ಪ್ರೀತಿ' ಕಥೆ (ರಮಾ) ಅಂತರ್ ಜಾತಿಯ ವಿವಾಹವನ್ನು ವಸ್ತುವಾಗಿಸಿಕೊಂಡಿದೆ. ಗೀತಾ ಅವರ 'ಜ್ವಲಂತ' ಕಥಾ ಸಂಕಲನದಲ್ಲಿಯ 'ಬೆಳಕಿನೆಡೆಗೆ' ಕಥೆಯಲ್ಲಿ ಸಾಹುಕಾರನ ಮಗ ಈರಣ್ಣ ಮನೆಗೆಲಸದ ಭವಾನಿಯ ಮೇಲೆ ಅತ್ಯಾಚಾರ ಮಾಡುತ್ತಾನೆ.

ಹೀಗೆ ಜಾತಿ ಕಟ್ಟುಪಾಡಿನ ಹೈದರಾಬಾದ್ ಕರ್ನಾಟಕದ ಸಾಮಾಜಿಕ ವ್ಯವಸ್ಥೆಯಲ್ಲಿ ಅಂತರ್‌ಜಾತಿಯ ವಿವಾಹಗಳು ಸುಲಭ ಸಾಧ್ಯವಲ್ಲ ಎಂಬುದನ್ನು ಕಥನ ಸಾಹಿತ್ಯ ಚಿತ್ರಿಸಿದೆ. ಮುಸ್ಲಿಂ ಯುವತಿ ಗೋಹರ್‌ಜಾನ್ ಹಿಂದೂ ಯುವಕನನ್ನು ಪ್ರೀತಿಸಿದಾಗ ಮೂಲಭೂತವಾದಿಗಳು 'ಕೊಲೆ'ಯಂಥ ಜೀವವಿರೋಧಿ ಕಾರ್ಯಕೈಗೊಂಡು ಗೋಹರಳ ಬದುಕನ್ನು ನರಕವಾಗಿಸುತ್ತಾರೆ. ಮೇಲ್‌ಜಾತಿ ಕೆಳಜಾತಿ ವಿವಾಹಗಳು ಸಹ ಸುಲಭಸಾಧ್ಯವಲ್ಲ. ದಲಿತ ಮಹಿಳೆ ಗಂಗಿ ಬಸವಿಯಾಗಲೊಲ್ಲದೇ ಮದುವೆಯಾಗಿಯೂ ಮೋಸಕ್ಕೊಳಗಾಗುತ್ತಾಳೆ. ರಮಾ ಹಾಗೂ ಮಹಾದೇವಿಯರು ತಮ್ಮ ಗಟ್ಟಿನಿರ್ಧಾರದಿಂದ ಮನೆಯವರನ್ನು ಒಪ್ಪಿಸುವಲ್ಲಿ ಸಮರ್ಥರಾಗುತ್ತಾರೆ.

೭. ಶೋಷಣೆಯನ್ನು ವಸ್ತುವಾಗಿಸಿಕೊಂಡ ವಿವಿಧ ಬಗೆಯ ಕಥೆಗಳಿವೆ. ಚೆನ್ನಣ್ಣ ವಾಲೀಕಾರರು 'ಶುಂಭ-ನಿಶುಂಭ ಮತ್ತು ಜಕ್ಕವ್ವ' ಕಥೆ(ಜಕ್ಕವ್ವ), ಗೀತಾ ನಾಗಭೂಷಣರ 'ಬೇಲಿ' ಕಥೆ (ಸೀನಿಂಗಿ), ಸಿದ್ಧರಾಮ ಹೊನ್ಕಲ್‌ರು 'ಸ್ಯಾಡಿಸ್ಟ್' ಕಥೆ(ಸುಮಿತ್ರಾ), ಚಿತ್ರಶೇಖರ ಕಂಠಿಯವರ 'ಗೌರಿಬಿ' ಕಥೆ, 'ಗೌಡ್ರ ಗೌರಿ ಗುಂಡನ ಚನ್ನಿ' ಕಥೆ, ಸೂಗಯ್ಯ ಹಿರೇಮಠ 'ಹುತ್ತ' ಎನ್ನುವ ಕಥೆ, ಬಾಲಚಂದ್ರ ಜಯಶೆಟ್ಟಿಯವರು "ಎಲ್ಲಮ್ಮನ ಸೇವೆ" ಕಥೆ. "ಸೋಬಾನ" ಕಥೆ, ಶ್ರೀಕಾಂತ ಪಾಟೀಲರ "ಮೂಡಲದಾಗ ಕೆಂಪರಾಶಿ ಮೂಡಿತ್ತು" ಕಥೆ, ನಾಗವಾರರ 'ಬಾಬಡಿ' ಈ ಕಥೆಯ (ಬಾಬಮ್ಮ), ದೇಶಪಾಂಡೆಯವರ "ಕತೆಯಾದ ಬದುಕು" ಕಥೆ, ಬಿ.ಟಿ.ಲಲಿತಾ ನಾಯಕರ 'ಲೂಟಿ' ಕಥೆ(ರಾಮಿ),'ಉಣ್ಣಲುಂಟು ಉಡಲುಂಟು' ಕಥೆ, ರಾಜಶೇಖರ ಹತಗುಂದಿಯವರ 'ರತ್ನಾಎಂಬ ಹುಡುಗಿಯ ಸಾವು' ಕಥೆ, 'ಕರ್ಪೂರದ ಕಾಯದಲ್ಲಿ'ಯ 'ನೆಲೆ' ಕಥೆ ಈ ಮೊದಲಾದ ಕಥೆಗಳು

ಸ್ತ್ರೀಯರ ಶೋಷಣೆಯ ಕುರಿತು ತುಂಬಾ ಮಾರ್ಮಿಕವಾಗಿ ತಿಳಿಸುತ್ತವೆ. ಕುಟುಂಬವೆ ಶೋಷಣಾ ನೆಲೆಯಾಗುವ ವಸ್ತುವನ್ನು ಒಳಗೊಂಡಿವೆ.

೮. ಕಥಾ ಸಾಹಿತ್ಯದ ಮಹಿಳಾ ಪಾತ್ರಗಳ ಹಿನ್ನೆಲೆಯಲ್ಲಿ ಮಹಿಳಾ ಪಾತ್ರಗಳನ್ನು ಒಂದೆಡೆ ಪರಿಚಯಿಸುವ ಪ್ರಯತ್ನ ಇಲ್ಲಿದೆ. ಆಯಾ ಕಥೆಗಳಲ್ಲಿ ಪಾತ್ರಗಳನ್ನು ಸೃಷ್ಟಿ ಮಾಡುವಾಗ ಭೂತ ಮತ್ತು ವರ್ತಮಾನಗಳಲ್ಲಿ ತೊಡಕಿಲ್ಲದಂತೆ ಪಾತ್ರಗಳನ್ನು ಸೃಷ್ಟಿಮಾಡಿದ್ದಾರೆ. ಕೆಲವು ಕಥೆಗಳ ಪ್ರಧಾನ ಪಾತ್ರಗಳು ಅಂತರ್ಮುಖಿಯಾಗಿಯೇ ಸಾಗುವುದನ್ನು ಕಾಣಬಹುದು. ಇಲ್ಲಿಯ ದಲಿತ ಮಹಿಳೆಯನ್ನು ಉನ್ನತ ಜಾತಿಯವರು ಭೋಗದವಸ್ತುವನ್ನಾಗಿ ಹೇಗೆ ಉಪಯೋಗಿಸುತ್ತಿದ್ದರು ಎಂಬಂತಹ ಅಂಶಗಳನ್ನು ಕಾಣಬಹುದು. ಸಮಾಜದ ವಿವಿಧ ಸ್ತರಗಳಲ್ಲಿ, ವಿವಿಧ ನೆಲೆಗಳಲ್ಲಿ ಜೀವಿಸುವ ಮಹಿಳೆಯ ಚಿತ್ರಣ ಇಲ್ಲಿ ಕಂಡುಬಂದಿದೆ.

ಪಾತ್ರ ಪ್ರಧಾನವಾದಾಗ ಪಾತ್ರದ ಏಳು-ಬೀಳುಗಳು ಪ್ರಮುಖವಾಗುತ್ತದೆ. ಪ್ರಸ್ತುತ ಕಾಲಘಟ್ಟದ ಜನರ ಜೀವನ ಕ್ರಮವನ್ನು ಹತ್ತಿರದಿಂದ ಕಂಡ ನಮ್ಮ ಹೈದರಾಬಾದ್ ಕರ್ನಾಟಕದ ಕಥೆಗಾರರು ಅವರ ನೋವು-ನಲಿವು, ಬಡತನ, ಅನಕ್ಷರತೆ, ಮೌಢ್ಯ, ಸ್ತ್ರೀ ಹಾಗೂ ದಲಿತರ ಶೋಷಣೆ ಹೀಗೆ ಬದುಕಿನ ಹಲವಾರು ಮಗ್ಗಲುಗಳನ್ನು ಪ್ರಮುಖ ಪಾತ್ರಗಳ ಮುಖಾಂತರ ಪರಿಚಯಿಸಿದ್ದಾರೆ.

ಪ್ರಸ್ತುತ ಅಧ್ಯಾಯನವು ಸ್ತ್ರೀ ಕೇಂದ್ರಿತವಾಗಿರುವುದರಿಂದ ಇಲ್ಲಿ ಸ್ತ್ರೀಪಾತ್ರಗಳು ಕಂಡು ಬಂದ ಬಗೆಯನ್ನು ಚಿತ್ರಿಸಲಾಗಿದೆ. ಹೈದ್ರಾಬಾದ್ ಕರ್ನಾಟಕದ ಕಥಾ ಸಾಹಿತ್ಯದಲ್ಲಿ ಸ್ತ್ರೀ ಪಾತ್ರಗಳು ಪುರುಷ ಪ್ರಧಾನ ಸಮಾಜದಲ್ಲಿಯ ದಬ್ಬಾಳಿಕೆ, ಶೋಷಣೆ, ಅತ್ಯಾಚಾರ, ಅನ್ಯಾಯಗಳನ್ನು ಮೌನವಾಗಿಯೇ ಸಹಿಸಿಕೊಂಡು ದುರಂತದೆಡೆಗೆ ಸಾಗುವಂತಹ ಚಿತ್ರಣಗಳಿಂದ ಮೂಡಿ ಬಂದಿವೆ.

ಚೆನ್ನಣ್ಣ ವಾಲೀಕಾರರ 'ಶುಂಭ ನಿಶುಂಭ ಮತ್ತು ಜಕ್ಕವ್ವ' ಕಥೆಯ ಜಕ್ಕವ್ವ, 'ಅಗಸರ ಅಂಬವ್ವ ಮತ್ತವಳ ಪಂಚಾಯಿತಿ ಕಟ್ಟಿ' ಕಥೆಯ ಅಂಬವ್ವ, ಗೀತಾ ನಾಗಭೂಷಣರ 'ಅವ್ವ' ಕಥೆಯ ನಾಯಕಿ ಗಂಗಾ, ಚಿತ್ರಶೇಖರ ಕಂಠಿಯವರ 'ಗೌರೀಬಿ' ಕಥೆಯ ನಾಯಕಿಯಾದ ಗೌರೀಬಿ, ಸುಬ್ಬಣ್ಣ ಅಂಬೆಸಂಗೆಯವರ 'ಸೋಮಕ್ಕನ ಕಥೆ ಹೀಗಾಯಿತೆ?' ಕಥೆಯ ನಾಯಕಿ ಸೋಮಕ್ಕ, ಶ್ರೀಕಾಂತ ಪಾಟೀಲರ 'ಮೂಡಲದಾಗ ಕೆಂಪ ರಾಶಿ ಮೂಡಿತ್ತು' ಕಥೆಯ ಸಣ್ಣಿ, ಶಿವಕುಮಾರ ನಾಗವಾರರ 'ಬಾಬಡಿ' ಕಥೆಯ ಬಾಬಮ್ಮ, 'ಲೂಟಿ' ಕಥೆಯ ದುರಂತ ನಾಯಕಿ ರಾಮಿ, ಲಲಿತಾ ನಯಕರ, 'ಹಬ್ಬ ಮತ್ತು ಬಲಿ' ಕಥಾ ಸಂಕಲನದ 'ಕೊಲೆ' ಕಥೆಯ ದೇವಿ, ಚಿತ್ರಶೇಖರ ಕಂಠಿಯವರ 'ಮಂಜವ್ವ ನಂಜು ಕಾರಿದಾಗ' ಕಥೆಯ ಮಂಜವ್ವ, ಅಮರೇಶ ನುಗಡೋಣಿ ಅವರ 'ಮಣ್ಣು ಸೇರಿತು ಬೀಜ' ಕಥೆಯ ಅಕ್ಕಮ್ಮ, 'ಕುಡಿಬಂದ ದೀಪಗಳು' ಕಥೆಯ ದೇವಿ, ಚಿತ್ರಶೇಖರ ಕಂಠಿ ಅವರ 'ಬೆಳ್ಳಿ ಚುಕ್ಕೆ' ಕಥೆಯ ಮಲ್ಲವ್ವ, ಅತೃಪ್ತ ಕಥೆಯ ಸರಳಾ,

'ತನ್ನದಲ್ಲದ ಬದುಕಿಗಾಗಿ' ಕಥೆಯ ನಾಯಕಿ ಸುನಂದಾ, ರಾಜಶೇಖರ ಹತಗುಂದಿಯವರ 'ಮರೀಚಿಕೆ' ಕಥೆಯ ಶಾಮಲಾ, ರಾಜಶೇಖರ ನೀರಮನ್ವಿಯವರ 'ಕರ್ಪೂರದ ಕಾಯದಲ್ಲಿ'ಯ 'ನೆಲೆ'ಕಥೆಯ ರಂಗಮ್ಮ ಈ ಮೊದಲಾದ ಪಾತ್ರಗಳು ಚರ್ಚಿಸುತ್ತವೆ.

ಕೆಳವರ್ಗದ ಜನರು ತಮ್ಮ ಹೊಟ್ಟೆ ಬಟ್ಟೆಗಾಗಿ ಬಡಿದಾಡಿದರೆ ಮಧ್ಯಮವರ್ಗದವರು ಎಲ್ಲ ಇದ್ದು ಇಲ್ಲದವರಂತೆ ಬದುಕುವುದು ಅವರ ದೊಡ್ಡ ದುರಂತವೆನಿಸುತ್ತದೆ. ಸುನಂದಾ, ಶಾಮಲಾ ಪಾತ್ರಗಳು ನಿದರ್ಶನವಾಗಿವೆ. ಇಲ್ಲಿ ಗಂಡ ಮನೆ ಮತ್ತು ನೌಕರಿ ಎಲ್ಲವೂ ಇದ್ದು ಅತೃಪ್ತಿಯಿಂದ ಜೀವಿಸುವುದು ಸರಳ ಪಾತ್ರದ ಮೂಲಕ ಕಥೆಗಾರರು ಸಶಕ್ತವಾಗಿ ಪ್ರತಿಬಿಂಬಿಸಿದ್ದಾರೆ.

ಇಲ್ಲಿ ಬಂದಿರುವ ಪಾತ್ರಗಳ ಮುಖಾಂತರವೇ ಕಥೆಯ ವಸ್ತು, ಉದ್ದೇಶಗಳನ್ನು ನೆನಪಿಸುವ ಪಾತ್ರಗಳ ಸ್ವಭಾವವನ್ನು ಕಥೆಗಳ ಮೂಲಕ ಚಿತ್ರಿಸಲಾಗಿದೆ. ಹೀಗೆ ಪಾತ್ರಗಳ ಸೃಷ್ಟಿಯನ್ನು ವಿಶಿಷ್ಟವಾಗಿ ಮೂಡಿಸಿದ್ದಾರೆ.

ತಮ್ಮ ಕಥೆಗಳಲ್ಲಿ ಪುರುಷ ಪಾತ್ರಗಳನ್ನು ಸಮಯ ಸಂದರ್ಭ ಸನ್ನಿವೇಶಕ್ಕೆ ಅನುಗುಣವಾಗಿ ಚಿತ್ರಿಸಿರುವಂತೆ ಮಹಿಳಾ ಪಾತ್ರಗಳನ್ನು ಚಿತ್ರಿಸಿ ಕಥೆಯ ಮುಂದುವರಿಕೆಯಲ್ಲಿ ತಮ್ಮದೇ ಆದ ವಿಶೇಷತೆ ತೋರಿಸಿದ್ದಾರೆ.

ಕಥಾ ಸಾಹಿತ್ಯದ ವಸ್ತು ಸ್ವರೂಪದಲ್ಲಿ ಗಂಡು-ಹೆಣ್ಣು ಸಮಾನ ನೆಲೆಯಲ್ಲಿ ಚಿತ್ರಣಗೊಂಡಿದ್ದರೂ ಪ್ರಸ್ತುತ ಭಾಗದಲ್ಲಿ ಸ್ತ್ರೀಪಾತ್ರಗಳನ್ನು ಚರ್ಚಿಸಲಾಗಿದೆ. ವರ್ತಮಾನದ ಮಹಿಳಾ ಬದುಕು ಭೂತಕ್ಕಿಂತ ತೀರ ಭಿನ್ನವಲ್ಲವೆಂಬುದೇ ವಾಸ್ತವ, ಸಮಕಾಲೀನ ಮಹಿಳಾ ಬದುಕಿನ ಸುಧಾರಣೆಗೆ ಇನ್ನು ಹೆಚ್ಚಿನ ಪ್ರಯತ್ನಗಳಾಗಬೇಕಾದ ಅವಶ್ಯಕತೆ ಇರುವುದನ್ನು ಈ ಅಧ್ಯಾಯವು ಮನಗಾಣಿಸುತ್ತದೆ.

೯. ಇಲ್ಲಿಯ ಕಥೆಗಾರರು ತಮ್ಮ ಕಥೆಗಳಲ್ಲಿ ಭಾಷೆ, ತಂತ್ರ, ಶೈಲಿಯಲ್ಲಿ ತಮ್ಮದೇ ಆದ ವಿಶಿಷ್ಟತೆಯನ್ನು ಮೆರೆದು ಹೈದರಾಬಾದ್ ಕರ್ನಾಟಕ ಭಾಗದ ಗ್ರಾಮೀಣ ಭಾಷೆ ಅಚ್ಚಳಿಯದಂತೆ ಮೂಡಿಬಂದಿದ್ದು, ಈ ಭಾಷೆಯ ಜೀವಂತಿಕೆಗೆ ಸಾಕ್ಷಿಯಾಗಿದೆ ಎಂಬುದು ತಿಳಿದುಬರುತ್ತದೆ.

ಇಲ್ಲಿಯ ಕಥಾ ಸಾಹಿತ್ಯವು ಗ್ರಾಮೀಣ ಭಾಷೆಯ ಸೊಗಡಿನಿಂದ ಆಳವಾದ ಚಿಂತನೆಯಿಂದ ನಿರೂಪಣೆಯ ಸೊಗಸ್ಸಿನಿಂದ ಮೂಡಿಬಂದಿರುವುದರಿಂದ ಈ ಎಲ್ಲಾ ಕಥೆಗಳು ಮತ್ತೆ ಓದುವಂತಿವೆ ಹಾಗೂ ಅತ್ಯಂತ ಹೃದಯಸ್ಪರ್ಷಿಯಾಗಿವೆ.

ನಮ್ಮ ಸುತ್ತಮುತ್ತಲಿನ ಸಾಮಾಜಿಕ ಬದುಕಿನ ಸ್ಥಿತ್ಯಂತರದಲ್ಲಿ ಕಥಾ ಪ್ರಕಾರ ಮೂಡಿ ಬಂದರೂ ಕಥೆಗಾರನ ಜಾಣ್ಮೆ ಅವನು ಬಳಸುವ ತಂತ್ರದ ಮೇಲೆ ನಿಂತಿದೆ. ಕಥೆಯು ತನ್ನ ತಂತ್ರ ವಿನ್ಯಾಸ ಆಶೆ ಹಾಗೂ ವಿಷಯಾಂತರಗೊಳಿಸುತ್ತ, ಅದರ ರೀತಿ-ಗತಿಯನ್ನು ಗಟ್ಟಿಗೊಳಿಸುತ್ತ ಓದುಗನ ಗಮನವನ್ನು ಕೇಂದ್ರಿಕೃತಗೊಳಿಸುತ್ತವೆ. ತಮ್ಮ ವಿಭಿನ್ನ ವಿಚಾರಗಳನ್ನು ಪ್ರತಿಪಾದಿಸುವ

ಕಥನ ಕ್ರಮವು ಆಶಾದಾಯಕವಾದದು. ತಮ್ಮ ಸುತ್ತಲಿನ ಸಮಾಜದ ಛಾಯೆ, ವೈಯಕ್ತಿಕ ಅನುಭವದ ಕ್ರೋಢೀಕರಣದ ಜೊತೆಗೆ ಹೊಸತನದ ಹೂಡುಕಾಟವಿದೆ. ಈ ನೆಲದ ಭಾಷೆ ಕೆಲವೊಂದು ಕಡೆಯಲ್ಲಿ ಪ್ರಯೋಗಾತ್ಮಕವಾಗಿ ಬಂದರೆ ಕೆಲವೊಮ್ಮೆ ಭಾವನೆಗಳ ಅತೀರೇಕದ ಕಥಾ ಪ್ರೀತಿಯೂ ಸೃಷ್ಟಿಯಾಗಿದೆ.

೧೦. ಕಥೆಗಾರರು ಕಥೆಗಳನ್ನು ಹೇಗೆ ರಚಿಸಿದ್ದಾರೆ. ಅವರ ಕಥಾ ಸೃಷ್ಟಿಗೆ ಪರಿಸರ, ಜೀವನದ ಅನುಭವಗಳು ಹೇಗೆ ಪ್ರಭಾವ ಬೀರಿವೆ ಎಂಬ ಸಂಗತಿ ತಿಳಿಯಲು ಸಾಧ್ಯವಾಗಿದೆ. ಕೃತಿಕಾರರು ಮಹಿಳಾ ಬದುಕನ್ನು ಎಷ್ಟೇ ಕಾಲ್ಪನಿಕವಾಗಿ ಗ್ರಹಿಸಿ ಚಿತ್ರಿಸಲು ಯತ್ನಿಸಿದಾಗಲು ವಾಸ್ತವ ಪ್ರಜ್ಞೆಯ ಬರಹಗಳಲ್ಲಿ ವಾಸ್ತವ ಬದುಕು ಕಾಣಿಸಿಕೊಳ್ಳುತ್ತದೆ. ಆರೋಪಿತ ಗುಣಲಕ್ಷಣಗಳನ್ನು ಒಂದು ಹಂತದವರೆಗೆ ಬಳಸಿಕೊಂಡಾಗಲೂ, ನಿಜ ಬದುಕನ್ನು ಮರೆಮಾಡಬಹುದೇ ಹೊರತು ಪೂರ್ಣವಾಗಿ ಅಳಿಸಿ ಹಾಕುವುದು ಸಾಧ್ಯವಾಗುವುದಿಲ್ಲ. ವಾಸ್ತವತಾವಾದ ಹಾಗೂ ಮಾನವತಾವಾದ ಪ್ರೇರಣೆ ಪಡೆದ ಕಥಾ ಸಾಹಿತ್ಯವು ಮಹಿಳಾ ಬದುಕನ್ನು ವಾಸ್ತವ ನೆಲೆಯಲ್ಲಿಯೇ ಗ್ರಹಿಸಿರುವುದನ್ನು ತಿಳಿಯಲಾಗಿದೆ.

೧೧. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಇಲ್ಲಿಯ ಕಥಾ ಸಾಹಿತ್ಯ ಅತ್ಯಂತ ಶಕ್ತಿಯುತವಾದದ್ದು ಹಾಗೂ ಮೌಲ್ಯಯುತವಾದದ್ದಾಗಿವೆ. ಹೀಗೆ ಇಲ್ಲಿಯ ಕಥಾಗಾರರು ಕಥನ ಕ್ರಮ ನಿರೂಪಣೆಯಲ್ಲಿ ತಮ್ಮದೇ ಆದ ಅನುಭವದ ಹಿನ್ನಲೆಯಲ್ಲಿ ಬರವಣಿಗೆಯನ್ನು ರೂಢಿಸಿಕೊಂಡಿದ್ದಾರೆ. ಓದುಗರ ಮನಸ್ಸನ್ನು ತಟ್ಟಿ ನಡುಗಿಸುವ ಶಕ್ತಿ ಇಲ್ಲಿಯ ಕಥೆಗಾರರಿಗಿದೆ ಎಂಬುದನ್ನು ಕಾಣಬಹುದು.

ನಿಜಾಮಶಾಹಿ ಕಪಿಮುಷ್ಟಿಯಲ್ಲಿದ್ದ ಹೈದರಾಬಾದ್ ಕರ್ನಾಟಕ ಪ್ರದೇಶಗಳು ಇಂದಿನ ಪ್ರಜಾಪ್ರಭುತ್ವವೆನಿಸಿಕೊಂಡ ಆಡಳಿತ ವ್ಯವಸ್ಥೆಯಲ್ಲೂ ನಿರ್ಲಕ್ಷಕ್ಕೊಳಗಾಗುತ್ತಲೇ ಇದೆ. ಹಾಗಾಗಿ ಎಲ್ಲ ರಂಗಗಳಲ್ಲೂ ಹಲವು ಬಗೆ ಅಸಮಾನತೆ ತಲೆದೋರಿವೆ. ಅಭಿವೃದ್ಧಿಯ ಚಹರೆಯಿಂದ ದೂರ ಉಳಿದಿದ್ದು, ಅಭಿವೃದ್ಧಿಗೆ ನೆರವಿನ ಕೂಗು ಈ ಭಾಗದಿಂದ ಪದೇ ಪದೇ ಕೇಳುತ್ತಲೇ ಇದೆ. ಇತ್ತೀಚೆಗೆ ಆಡಳಿತಾತ್ಮಕ ವ್ಯವಸ್ಥೆ ೩೭೧ನೇ ಜೆ ವಿಧಿಯನ್ವಯ ವಿಶೇಷ ಮಾನ್ಯತೆ ನೀಡಿದ ಮೇಲೆ ಹೆಚ್ಚು ಅಭಿವೃದ್ಧಿ ಯೋಜನೆಗಳಿಗೆ ಅನುಮೋದನೆ ದೊರಕುವ ಸಾಧ್ಯತೆಗಳಿವೆ.

**ಅಧ್ಯಯನದ ಸಾಧ್ಯತೆಗಳು:**

ಹೈದರಾಬಾದ್ ಕರ್ನಾಟಕದ ಕಥಾ ಸಾಹಿತ್ಯ ಕನ್ನಡ ಕಥಾ ಸಾಹಿತ್ಯ ಕ್ಷೇತ್ರಕ್ಕೆ ವಿಶಿಷ್ಟ ಕೊಡುಗೆಯಾಗಿದೆ. ವಸ್ತು ವೈವಿಧ್ಯತೆ, ವಿಭಿನ್ನ ಬಗೆಯ ಪಾತ್ರ ಚಿತ್ರಣ ಹಾಗೂ ಜೀವನ ದರ್ಶನ, ಭಾಷಾ ವೈಶಿಷ್ಟದಿಂದ ಇಲ್ಲಿಯ ಕಥಾಸಾಹಿತ್ಯ ಮಹತ್ವವನ್ನು ಸಾಧಿಸಿದೆ. ಈ ಹಿನ್ನಲೆಯಲ್ಲಿ ಅಧ್ಯಯನದ ಸಾಧ್ಯತೆಗಳನ್ನು ಗುರುತಿಸಿದೆ.

ಇಲ್ಲಿಯ ಕಥಾ ಸಾಹಿತ್ಯದಲ್ಲಿ ದಲಿತ ಬಂಡಾಯದ ಸಾಹಿತ್ಯಕ್ಕೆ ಸಂಬಂಧಿಸಿ ವಿಶಿಷ್ಟ ಅಂಶಗಳನ್ನಲ್ಲದೆ ಸಾಮಾನ್ಯ ಅಂಶಗಳನ್ನು ಪ್ರತಿನಿಧಿಸುವ ಕಥೆಗಳನ್ನು ಶೋಧಿಸಲು ಸಾಧ್ಯವಿದೆ. ದಲಿತ ಸಾಹಿತ್ಯದ ಕಥೆಗಳು ತನ್ನ ಅನುಭವಗಳೊಂದಿಗೆ ಹುಟ್ಟಿಗೊಂಡವು. ಈ ಘಟ್ಟದಲ್ಲಿ ಪ್ರಮುಖ ಕಥೆಗಾರರಾಗಿ ಕಾಣಿಸಿಕೊಂಡವರಲ್ಲಿ ಚೆನ್ನಣ್ಣ ವಾಲೀಕಾರ, ಗೀತಾನಾಗಭೂಷಣ, ರಾಜಶೇಖರ ನೀರಮಾನ್ವಿ, ಅಮರೇಶ ನುಗಡೋಣಿ, ಬಿ.ಟಿ.ಲಲಿತಾ ನಾಯಕ, ಆಂಜನೇಯ ಜಾಲಿಬೆಂಚಿ ಮುಂತಾದವರು. ಉದಾ: ಬಿ.ಟಿ.ಲಲಿತಾನಾಯಕ 'ಹಬ್ಬ ಮತ್ತು ಬಲಿ', ಆಂಜನೇಯ ಜಾಲಿಬೆಂಚಿ ಮತ್ತು ಮಗ ವೇಣು ಜಾಚಿಬೆಂಚಿಯವರ 'ಅಪ್ಪ ಮಗನ ಕಥೆಗಳು ದೀನ ದಲಿತರ ಪರಿಸ್ಥಿತಿಯ ನಾನಾ ಮುಖಗಳನ್ನು ಹೊರಹಾಕುತ್ತವೆ. ಈ ನೆಲೆಯಲ್ಲಿ ಶೋಧನೆಯ ಸಾಧ್ಯವಿದೆ.

ಇಲ್ಲಿಯ ಕಥಾ ಸಾಹಿತ್ಯದಲ್ಲಿ ಹಸಿವಿನ ಚಿತ್ರಣವನ್ನು ವಿಷಯ ವಸ್ತುವನ್ನಾಗಿಸಿಕೊಂಡು ಕಥೆಗಳು ಚಿತ್ರಿತಗೊಂಡಿರುವುದರಿಂದ ಆ ನೆಲೆಯಲ್ಲಿ ಶೋಧನಾ ಕಾರ್ಯಕ್ಕೆ ತೊಡಗಲು ಸಾಧ್ಯವಿದೆ. ಇದಕ್ಕೆ ನಿದರ್ಶನ ಕೃತಿಗಳೆಂದರೆ ಚಿತ್ರಶೇಖರ ಕಂಠಿಯವರ 'ಕಾಡು ಪ್ರೀತಿ ಮತ್ತು ನಾನು' ಕಥಾ ಸಂಕಲನದ 'ಮದುವೆಯೂಟ' ಕಥೆಯಲ್ಲಿ ಹಸಿವಿನಿಂದಾಗಿ ಬಡವರು ಯಾವರೀತಿ ಸಾವಿಗೀಡಾಗುತ್ತಾರೆ. ಅವರು ಎಷ್ಟು ಕಷ್ಟ ಅನುಭವಿಸುತ್ತಾರೆ. ಎನ್ನುವುದು ಚೆನ್ನಾಗಿ ಚಿತ್ರಣಗೊಂಡಿದೆ.

ಹಾಗೆಯೇ ಇಲ್ಲಿಯ ಪ್ರಾದೇಶಿಕ ಭಾಷೆ ಬಹು ವಿಶಿಷ್ಟವಾದುದು. ಆಡುಭಾಷೆಯನ್ನು ಇಲ್ಲಿಯ ಪಾತ್ರಗಳು ಅಭಿವ್ಯಕ್ತಪಡಿಸುತ್ತವೆ. ಈ ಬಗೆಯ ಭಾಷೆಯು ಮಹಿಳೆಯ ಕುರಿತು ಅಭಿವ್ಯಕ್ತಗೊಂಡ ಬಗೆಯನ್ನು ಸ್ತ್ರೀವಾದಿ ಭಾಷಾ ಶಾಸ್ತ್ರದ ಹಿನ್ನೆಲೆಯಲ್ಲಿ ವಿಸ್ತೃತವಾಗಿ ಅಧ್ಯಯನ ಮಾಡುವ ಸಾಧ್ಯತೆಗಳಿವೆ.

ವೈಯಕ್ತಿಕ ಕಥೆಗಾರರ ಕುರಿತು ಬದುಕು ಆಶಯದ ನೆಲೆಯಲ್ಲಿ ಹಾಗೂ ತೌಲನಿಕವಾಗಿಯೂ ಸಹ ಅಧ್ಯಯನ ಮಾಡಬಹುದಾಗಿದೆ.

ಸಮಗ್ರ ಮಹಿಳಾ ಬದುಕನ್ನು ಆಧರಿಸಿ ಪುರುಷ ಕಥಾಕಾರರು ಹಾಗೂ ಮಹಿಳಾ ಕಥೆಗಾರ್ತಿಯರ ಕಥೆಗಳ ತೌಲನಿಕ ಅಧ್ಯಯನ ಮಾಡಬಹುದಾಗಿದೆ.

ಇಲ್ಲಿಯ ಕಥಾ ಸಾಹಿತ್ಯ ನವ್ಯ, ದಲಿತ, ಬಂಡಾಯ ಸಾಹಿತ್ಯಕ್ಕೆ ಅನ್ವಯವಾಗುವುದರಿಂದ ಕಾಲ ಘಟ್ಟ ಆಧರಿಸಿಯು ಶೋಧನೆ ಕೈಗೊಳ್ಳಲು ಸಾಧ್ಯವಿದೆ.

ಹೀಗೆ ಇಲ್ಲಿಯ ಕಥಾ ಸಾಹಿತ್ಯದ ಅಂಶಗಳು ಹಲವು ಅಧ್ಯಯನಗಳನ್ನು ಅಪೇಕ್ಷಿಸುತ್ತವೆ.

**ಮಿತಿಗಳು:**

'ಹೈದರಾಬಾದ್ ಕರ್ನಾಟಕದ ಕಥಾ ಸಾಹಿತ್ಯದಲ್ಲಿ ಮಹಿಳಾ ಚಿತ್ರಣ' ಈ ಅಧ್ಯಯನವು ನನ್ನದೇ ಆದ ಮಿತಿಯ ಒಂದು ಪ್ರಯತ್ನವಾಗಿದೆ. ಹೈದರಾಬಾದ್ ಕರ್ನಾಟಕದ ಈ ಕಥಾ ಸಾಹಿತ್ಯದಲ್ಲಿ ಬಳ್ಳಾರಿ ಪ್ರದೇಶವನ್ನು ಕೈ ಬಿಟ್ಟಿರುವುದು ಒಂದು ಮಿತಿಯಾಗಿದೆ.

ಇಲ್ಲಿಯ ಕಥಾ ಸಾಹಿತ್ಯದ ಅಧ್ಯಯನದಲ್ಲಿ ಬೇರೊಂದು ಪ್ರಾಂತದ ಕಥಾ ಸಾಹಿತ್ಯಗಿಂತ ಭಿನ್ನ ವೈಶಿಷ್ಟ್ಯವನ್ನು ನಿರೂಪಿಸದೇ ಇರುವುದು ಈ ಅಧ್ಯಯನದ ಮಿತಿಗಳಲ್ಲಿ ಒಂದಾಗಿದೆ.

ಇಲ್ಲಿಯ ಸುಮಾರು ಕಥೆಗಾರರಲ್ಲಿ ಆಯ್ಕೆ ಮಾಡಿಕೊಂಡ ಕಥೆಗಾರರನ್ನು ಹಾಗೂ ಆಯ್ದ ಕಥಾಸಂಕಲನದ ಕೆಲವು ಕಥೆಗಳನ್ನು ಅಧ್ಯಯನಕ್ಕೆ ಕೇಂದ್ರಿಕರಿಸಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಹಾಕಿಕೊಂಡ ಮಿತಿಯಾಗಿದೆ.

ನನ್ನ ಅಧ್ಯಯನವು ಮಹಿಳಾವಾದಿ ಅಧ್ಯಯನವಾದ್ದರಿಂದ ಕಥೆಗಳಲ್ಲಿನ ಮಹಿಳಾ ಬದುಕಿನ ಕುರಿತು ಕಥೆಗಾರರು ವ್ಯಕ್ತಪಡಿಸಿದ ಮಹಿಳಾ ಸಂವೇದನೆಯೆಡೆಗೆ ಮಾತ್ರ ಹೆಚ್ಚು ಗಮನ ಕೇಂದ್ರಿಕರಿಸುವ ಮೂಲಕ ಕಥೆಗಳಲ್ಲಿ ಚರ್ಚಿತಗೊಂಡ ಅನೇಕ ಚಿಂತನೆಗಳತ್ತ ಗಮನ ಹರಿಸದಿರುವುದು ಅಧ್ಯಯನದ ಒಂದು ಮಿತಿಯಾಗಿದೆ. ವಸ್ತು ವಿಷಯದ ಪ್ರಾಧಾನ್ಯತೆ ಆಧರಿಸಿ ಮಹಿಳೆಯನ್ನು ಕೇಂದ್ರಿಕರಿಸಿರುವುದು ಸಹ ಅಧ್ಯಯನದ ಮಿತಿಗಳಲ್ಲಿ ಒಂದಾಗಿದೆ.

ಹೀಗೆ ಹೈದರಾಬಾದ್ ಕರ್ನಾಟಕದ ಕಥಾ ಸಾಹಿತ್ಯ ಅಧ್ಯಯನದ ಮಿತಿಯ ಅಂಶಗಳು ಮುಂದಿ ಹಲವು ಅಧ್ಯಯನಗಳನ್ನು ಆಪೇಕ್ಷಿಸುತ್ತವೆ.

♦♦♦

## ಅನುಬಂಧಗಳು

## ೧. ಆಯ್ದ ಕಥೆಗಾರರು ಹಾಗೂ ಕಥೆಗಳು

೧. **ಅಮರೇಶ ನುಗಡೋಣಿ:** 'ಮಣ್ಣು ಸೇರಿತು ಬೀಜ', 'ಒತ್ತೆ', 'ಕುಡಿಬಂದ ದೀಪಗಳು'. 'ದಾರಿ ಮೂಡಿಸುವ ಹೆಜ್ಜೆಗಳು 'ಮನ್ನಿಸಿ ಮೂಕಾದ ಮೇಲೆ', 'ಸವಾರಿ', 'ಪಕ್ಕಕ್ಕಲ್ಲದೇ ಕಾಣಿಸದು', 'ತಮಂದದ ಕೇಡು', ೨. **ಅಮರಾನಂದ ಬೆಟ್ಟದೂರ:** 'ಹೆಣ್ಣು ಮಕ್ಕಳೇ ಬಲ್ಲರು' ೩. **ಆಂಜನೇಯ ಜಾಲಿಬೆಂಚಿ ಮತ್ತು ವೇಣು ಜಾಲಿಬೆಂಚಿ:** 'ಅಪ್ಪಮಗನ ಕಥೆಗಳು', ೪. **ಕಾವ್ಯಾನಂದರ:** 'ಮಣಿಮಾಲೆ', 'ಕೆಸರಿನಲ್ಲಿ ಲಕ್ಷ್ಮೀ', 'ಸರ್ವವೂ ಶಿವಪ್ರಸಾದ', ೫. **ಗೀತಾ ನಾಗಭೂಷಣ:** 'ಜ್ವಲಂತ', 'ಬೆಳಕಿನೆಡೆಗೆ', 'ಅವ್ವ' 'ದುರಂತ' 'ಧಾಲು'.'ಘುಂಡಿ ಪೂಜಾರಿ ಆದಾಗ', ೬. **ಗುರುನಾಥ ಅಕ್ಕಣ್ಣ:** 'ಯಾರನ್ನು ಪ್ರೀತಿಸಬೇಡ', 'ಇದು ಎಂಥಾ ಲೋಕವಯ್ಯ', ೭. **ಚನ್ನಣ್ಣ ವಾಲೀಕಾರ:** 'ಶುಂಭ ನಿಶುಂಭ ಮತ್ತು ಜಕ್ಕವ್ವ', 'ಕೂಸು', 'ಕಪ್ಪು ಕಥೆಗಳು' 'ಅಡಿ ಜಾತಿ', 'ಅಗಸರ ಅಂಬವ್ವ ಮತ್ತವಳ ಪಂಚಾಯಿತಿ ಕಟ್ಟೆ', 'ಕುರುಬರ ಕಣ್ಣೆಮ್ಮ', 'ಕೆಸರಿನಲ್ಲಿ ಕೆಸರಾಗಿ ಹೋದ ಕಮಲ' ೮. **ಚಂದ್ರಕಾಂತ ಕುಸನೂರ:** 'ಮಾಯೆ ಅಂದ್ರೆ ಮಾಯೆ' ೯. **ಚಿತ್ರಶೇಖರ ಕಂಠಿ:** 'ಅತೃಪ್ತ', 'ಮಂಜವ್ವ ನಂಜು ಕಾರಿದಾಗ', 'ಪಶ್ಚಾತ್ತಾಪ' 'ತನ್ನದಲ್ಲದ ಬದುಕಿಗಾಗಿ', 'ಸಾವು' 'ಖಂದೀಲು' 'ಅಂಬಿಗ', 'ಜ್ಯೋತಿರ್ಗಮಯ', 'ಪಲಾಯನ', 'ದೇವರಮಗ', 'ನದಿಯ ನೀರಾಗಿ ಹರಿದಿ ಹೋದ', 'ಕಾಡುಪ್ರೀತಿ ಮತ್ತು ನಾನು', 'ಸೋಪಾನಗಳು', 'ಹೂಳು', 'ತಿರುವು', ೧೦. **ಜಯಶೆಟ್ಟಿಯವರು** "ರಾಸೂರಾಯಿ". 'ಹುಳ ಹತ್ತಿದ ಮರ' 'ಸೋಮಕ್ಕನ ಕಥೆ ಹೀಗಾಯಿತೆ? ೧೧. **ಜಯತೀರ್ಥ ರಾಜ-ಪುರೋಹಿತ:** 'ಗಂಧವತೀ ಪೃಥಿವಿ', 'ಕಥೆಗಾರ್ತಿ', 'ರೋಹಿಣಿ' 'ಸಯಿದಾ ಸುಮತಿಯಾದಳು', 'ಮುಂದೇನು', ೧೨. **ದೇಶಪಾಂಡೆ ಎಂ.ಜಿ:** 'ವಿಪರ್ಯಾಸ', 'ಚರಿತ್ರ ಹೀನ', 'ಪರಿಣಾಮ' 'ಬಾಳಿನೊಳಗಿನ ರಹಸ್ಯೆ' 'ಜಾತಿ ಅರಿಯದ ಪ್ರೀತಿ', 'ಅಗ್ನಿ ಪ್ರಳಯ', ೧೩. **ದೇವೇಂದ್ರ ಹಕಾರಿ:** 'ಚಾಟಿ', 'ಬಿಸಿಲು ಗುದುರೆ', 'ಒರೆಗಲ್ಲು', 'ದಾರಿ', 'ಕನಸು ನನಸು', ೧೪. **ಪಂಚಾಕ್ಷರಿ ಹಿರೇಮಠ:** 'ಎನ್ನಾಲೇಕ', 'ಕಾಶ್ಮೀರದ ಹೂವು', 'ಗುಲಬಿ ಹೂವು', 'ಉಚ್ಚಂಗಿದುರ್ಗ', ೧೫. **ಬಸವರಾಜ ಮಠಪತಿ:** 'ಅನರ್ಥ', 'ದೇವರಹೆಣ',

‘ಕೆಸರಿನಲ್ಲಿ ಕೆಸರಾಗಿ ಹೋದ ಕಾಮಲ’, ೧೬. **ಬಾಲಚಂದ್ರ ಜಯಶೆಟ್ಟಿಯವರ:** ‘ಮಿರ್ಚಿ ಬಾಬಾ ಮತ್ತು ಇತರ ಕಥೆಗಳು’, ‘ರಾಸೂರಾಯ’, ‘ಹುಳ ಹತ್ತಿದ ಮರ’, ‘ಸೋಮಕ್ಕನ ಕಥೆ ಹೀಗಾಯಿತೆ?’, ‘ತುಂಗಾ’, ‘ಉಡುಕಿ’, ‘ಕೋಡ್ಗಲ್ಲಿನ ಕೂಗು’ ‘ಎಲ್ಲಮ್ಮನ ಸೇವೆ’, ೧೭. **ಮಲ್ಲಿಕಾರ್ಜುನ ಹೀರೇಮಠ:** ‘ಅಮಿನಾಪುರದ ಸಂತೆ’, ‘ಲಕ್ಕವ್ವನ ಮಂದಿ’ ೧೮. **ರಾಜಶೇಖರ ನೀರಮಾನ್ವಿ:** ‘ವೃತ್ತ’, ‘ಕರ್ಪೂರದ ಕಾಯದಲ್ಲಿ’ಯ ‘ನೆಲೆ’, ‘ಹಂಗಿನರಮನೆಯ ಹೊರಗೆ’, ೧೯. **ರಾಜಶೇಖರ ಹತಗುಂದಿ:** ‘ಕಾಳಬೆಳದಿಂಗಳ ಸಿರಿ’, ‘ಯಾರನ್ನು ಪ್ರೀತಿಸಬೇಡ’, ‘ಪೊರೆ ಕಳಚುವ ಪರಿ’, ‘ರತ್ನಾ ಎಂಬ ಹುಡುಗಿಯ ಸಾವು’, ‘ಮರೀಚಿಕೆ’ ‘ತೂತುಗಡಿಗೆಯ ಗೋಳು’, ೨೦. **ಲಲಿತಾ ದೇಮಶೆಟ್ಟಿ:** ‘ಆರಕ್ಷಕ’, ‘ಸೋಲು’, ‘ಮಮತೆಯ ಕೊಲೆ’, ೨೧. **ಲಕ್ಷ್ಮೀದೇವಿ ಶಾಸ್ತ್ರಿ:** ‘ತ್ರೀ–ಡಿ’, ‘ಸುಸಂಸ್ಕೃತರು’, ೨೨. **ಲಲಿತಾ ನಾಯಕರ ಬಿ.ಟಿ:** ‘ಹಬ್ಬ ಮತ್ತು ಬಲಿ’ ‘ಕೊಲೆ’ ‘ಕಳ್ರು’, ಹಬ್ಬ ಮತ್ತು ಬಲಿ’. ‘ಮರುಮದುವೆ’, ‘ತಾಯಿ ಸಾಕಿಬಾಯಿ’, ೨೩. **ವಿಸಾಜಿ ಜಿ.ಬಿ.:** ‘ಅನಂತ ಸಂಗಮ’, ‘ಸಾಕಿಬಾಯಿ’, ೨೪. **ಶಾಂತರಸ:** ‘ಶಾಂತರಸರ ಸಮಗ್ರ ಕಥೆಗಳು’, ‘ನಾಯಿ ಮತ್ತು ಪಿಂಚಣಿ’, ‘ಬೆಸ್ತು’, ‘ತೋರಣ ಹರಿಯಲಿಲ್ಲ’, ‘ಬಡೇಸಾಬು ಪುರಾಣ’, ‘ಸ್ವಾತಂತ್ರ್ಯ ವೀರ ಮತ್ತು ಇತರ ಕಥೆಗಳು’, ‘ರೋಗಿ’, ‘ಮಲ್ಕಮ್ಮ’, ‘ಸಾವು ಸತ್ತಾಗ’ ‘ಸಂಬಂಧಗಳು’, ‘ಕಿಡಿ’, ೨೫. **ಶಿವಕುಮಾರ ನಾಗವಾರ:** ‘ಏಳೂರು ಸರಪಂಚ’, ‘ಹಣದಿ’, ‘ಹುಳುಚು’, ‘ಬಾಬಡಿ’, ‘ಲೂಟಿ’, ‘ಬಸ್ಯಾ’, ‘ನಿಂಗ’, ೨೬. **ಶ್ರೀಕಾಂತ ಪಾಟೀಲ:** ‘ಬೆಂಕಿ ಮರೆಯ ತಂಪು’, ‘ಮೂಡಲದಾಗ ಕೆಂಪು ರಾಶಿ ಮೂಡಿತ್ತು’, ‘ಗಟ್ಟಿ ಎಳೆ’, ‘ಸನ್ಮಾರ್ಗ’, ‘ಧರ್ಮ–ಬೇಲಿ–ಬದುಕು’ ‘ಜರ್ದ ರುಮಾಲ’, ‘ಲಕ್ಷ್ಮಣರೇಖೆ’, ‘ಧ್ರುವಮಿಲನ’, ‘ಸ್ಮೃತಿ ಪತ್ರ’, ‘ಕಾಶಿಯಲ್ಲಿ ಕಂಡದ್ದೇನು?’ ‘ಸರಕಾರದ ಸಹಾಯ’, ‘ಅಯ್ಯೋ ಇಷ್ಟೇನಾ?’, ೨೭. **ಶಿವರಾಜ ಪಾಟೀಲ:** ‘ಮಹಾಂತಪೂರ’, ‘ದೂರದ ನಕ್ಷತ್ರ’, ‘ಒಂದು ಮನೆಯ ಕಥೆಗಳು’ ೨೮. **ಸಗರ ಕೃಷ್ಣಾಚಾರಯ್ಯ:** ‘ಆದರ್ಶ’ ಇಂದ್ರಿ ಯಾಣಿ ಪ್ರಮಾಥೀನಿ, ‘ಸಾಹಿತಿಯ ಜೀವನ’, ೨೯. **ಸಂಧ್ಯಾ ಹೊನಗುಂಟಿಕರ:** ‘ಕಡಲ ಒಡಲು ಬಗೆದಷ್ಟು’, ‘ಬಾಲಕತ್ತರಿಸಿದರೆ ಡೊಂಕೆಲ್ಲಿ’, ‘ಇಳಿ ಹೊತ್ತಿನಲ್ಲಿ ಕದ ತಟ್ಟಿದ ಅತಿಥಿ’, ‘ತನಗೆಟುಕದಿದ್ದರೇನು’, ೩೦. **ಸಿದ್ಧರಾಮ ಹೊನ್ಕಲ್‌ರ:** ‘ಬಯಲು ಬಿತ್ತನೆ’, ‘ಸ್ಥಿತಿಗತಿ’, ‘ಕಥೆ ಕೇಳು ಗೆಳೆಯ’, ‘ಸ್ಯಾಡಿಸ್ಟ್’, ‘ಒಂದು ಹಾವಿನ ಸುತ್ತ’. ‘ಪವಾಡ’, ‘ನಾಯಿ ಬಾಲ’. ೩೧. **ಸುಬ್ಬಣ್ಣ ಅಂಬೆಸಂಗೆ:** ‘ಅರಳು’, ‘ಚೇತನ’, ‘ಸೋಮಕ್ಕನ ಕಥೆ ಹೀಗಾಯಿತೆ?’, ೩೨. **ಸೂಗಯ್ಯ ಹಿರೇಮಠ:** ‘ಹುಳುಗಳು’, ‘ತಂತ್ರ’, ‘ದೀಪ’ ‘ದೇವರ ಮಗ’, ‘ಅಂತರ’, ‘ಹುತ್ತ’ ‘ರೋಗ’, ‘ನೀರು ಮತ್ತು ನೆತ್ತರು’ ‘ಸ್ಥಿತಿ’, ‘ಫಲ’, ‘ಏಳುಸುತ್ತಿನಕೋಟೆ’ ಇನ್ನು ಮೊದಲಾದವುಗಳು.

♦ ♦ ♦

## ೨. ಮೂಲ ಆಕರಗಳು


| ಕ್ರಸಂ. | ಕಥೆಗಾರರು | ಕಥಾ ಸಂಕಲನಗಳು | ಪ್ರಕಾಶನ | ಸ್ಥಳ | ಇಸ್ವಿ |
|---|---|---|---|---|---|
| ೧. | ಅಮರೇಶ ಎನ್. | ಮಣ್ಣು ಸೇರಿತು ಬೀಜ | ನಮ್ಮ ಪ್ರಕಾಶನ | ತಿಪಟೂರು | ೧೯೯೧ |
| | | ತಮಂಧದ ಕೇಡು | ಧಾತ್ರಿ ಪುಸ್ತಕ ಪ್ರಕಾಶನ | ಬೆಂಗಳೂರು | ೧೯೯೭ |
| | | ಸವಾರಿ | ಅಂಕಿತ ಪ್ರಕಾಶನ | ಬೆಂಗಳೂರು | ೨೦೦೭ |
| | | ಒಡಲ ಹಂಗು | ಅಂಕಿತ ಪ್ರಕಾಶನ | ಬೆಂಗಳೂರು | ೨೦೧೪ |
| ೨. | ಆನಂದ ಸಿ.ಎಸ್. | ಹಡೆದವ್ವ | ಬಸವ ಪ್ರಕಾಶನ | ಗಲ್ಬರ್ಗಾ | ೨೦೧೦ |
| ೩. | ಬಸವರಾಜ ಮಠಪತಿ | ನೆರಳಿನಷ್ಟೇ ಕತ್ತಲು | ನೀಲಕಾವ್ಯ ಪ್ರಕಾಶನ | ಬೆಂಗಳೂರು | ೨೦೦೧ |
| ೪. | ಬಾಲಚಂದ್ರ ಜಯಶೆಟ್ಟಿ | ಕೋಡ್ಗಲ್ಲಿನ ಕೂಗು | ಪ್ರಜ್ಞಾ ಪ್ರಕಾಶನ | ಗುಲ್ಬರ್ಗಾ | ೧೯೯೧ |
| | | ಮಿರ್ಚಿಬಾಬಾ ಮತ್ತು ಇತರ ಕಥೆಗಳು | ಬಸವ ಪ್ರಕಾಶನ | ಗುಲ್ಬರ್ಗಾ | ೧೯೯೩ |
| ೫. | ಬಿರೇದಾರ್ ಮ.ಗು. | ಬೆಳೆ–೨ | ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ. | ಗುಲ್ಬರ್ಗಾ | ೨೦೦೯ |
| ೬ | ಚಿತ್ರಶೇಖರ ಕಂಠಿ | ನೇಪಥ್ಯ | ಗೆಳೆಯರ ಬಳಗ ಪ್ರಕಾಶನ | ಯಾದಗಿರಿ | ೧೯೯೦ |
| ೭ | ಚೆನ್ನಣ್ಣ ವಾಲೀಕಾರ | ಸಮಗ್ರ ಕಥಾ ಸಂಪುಟ | ದಲಿತ ಬಂಡಾಯ ಸಾಹಿತ್ಯ ಪ್ರಕಾಶನ | ಬೆಂಗಳೂರು | ೨೦೦೩ |
| ೮. | ದೇಶಾಪಾಂಡೆ ಎಂ.ಜಿ. | ಪಾರಿಜಾತ | ಖಡ್ಗ ಪತ್ರಿಕೆ ಪ್ರಕಾಶಾನ | ಬೀದರ | ೧೯೯೮ |
| | | ದೇವಯಾನಿ | ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ. | ಗುಲ್ಬರ್ಗಾ | ೨೦೧೦ |
| | | ಯಾವುದು ಸತ್ಯ | ಶ್ರೀ ಸಿದ್ಧಲಿಂಗೇಶ್ವರ | ಗುಲ್ಬರ್ಗಾ | ೨೦೧೨ |

| | | | | | |
|---|---|---|---|---|---|
| ೯. | ಗೀತಾನಾಗಭೂಷಣ | ಕ್ಯಾದಿಗೆ ಬನದಾಗ ಕತೆಯಾಗಿ ನಿಂತವರು | ಸಿವಿಜಿ ಪಬ್ಲಿಕೇಷನ್ಸ್ | ಬೆಂಗಳೂರು | ೨೦೦೬ |
| ೧೦. | ಗುರುನಾಥ ಅಕ್ಕಣ್ಣ | ಕಲ್ಲಣ್ಣ ಕಾಂಪ್ಲೆಂಟ ಪ್ರಕರಣ ಇತರ ಕಥೆಗಳು | ಬಸವ ಪ್ರಕಾಶನ | ಗುಲ್ಬರ್ಗಾ | ೨೦೦೯ |
| | | ಇದು ಎಂಥ ಲೋಕವಯ್ಯ | ತರಂಗಿಣಿ ಪ್ರಕಾಶನ | ಬೀದರ | ೧೯೯೬ |
| ೧೧. | ಜಯತೀರ್ಥರಾಜ ಪುರೋಹಿತ | ಪಾರವ್ವನ ಪಂಚಾಯತಿ | ನೃಪತುಂಗ ಪ್ರಕಾಶನ | ಕಲಬುರ್ಗಿ | ೧೯೬೭ |
| | | ರೋಹಿಣಿ | ಪ್ರಕಾಶ ಪ್ರಕಾಶನ | ರಾಯಚೂರು | ೧೯೬೯ |
| | | ಮೌಲ್ಯಗಳು | ಶ್ರೀ ಪ್ರಕಾಶನ | ಬೆಂಗಳೂರು | ೧೯೭೪ |
| ೧೨. | ಕಲಿಗಣನಾಥ ಗುಡದೂರು | ಉಡಿಯಲ್ಲಿಯ ಉರಿ | ಲೋಹಿಯಾ ಪ್ರಕಾಶನ | ಬಳ್ಳಾರಿ | ೨೦೦೦ |
| ೧೩. | ಕೃಷ್ಣಾ ನಾಯಕ | ಕತ್ತಲು ಕರಗುವ ಪರಿ | ಕನ್ನಡ ನಾಡು ಪ್ರಕಾಶನ | ಗುಲ್ಬರ್ಗಾ | ೨೦೧೦ |
| ೧೪. | ಹೊರಗಲ್ ವಿರೂಪಾಕ್ಷಪ್ಪ | ನ್ಯಾಯ | ಸಂಕ್ರಮಣ ಪ್ರಕಾಶನ | ಧಾರವಾಡ | ೧೯೯೦ |
| ೧೫. | ಲಕ್ಷ್ಮೀದೇವಿ ಶಾಸ್ತ್ರಿ | ಎಲ್ಲಾ ನಿನ್ನ ಹೆಸರಲಿ | ಶ್ರೀಸಿದ್ಧಲಿಂಗೇಶ್ವರ ಪ್ರಕಾಶನ | ಗುಲ್ಬರ್ಗಾ | ೨೦೦೨ |
| | | ಹೃದಯಕ್ಕೆ ಹತ್ತಿರಾದವರು ಇತರ ಕಥೆಗಳು | ವಿಶ್ವ ಪ್ರಕಾಶನ | ರಾಯಚೂರು | ೧೯೯೬ |
| ೧೬. | ಲಲಿತಾನಾಯಕ ಬಿ.ಟಿ. | ಹಬ್ಬ ಮತ್ತು ಬಲಿ | ಲಂಬಾಣಿ ಒಕ್ಕೂಟ ಪ್ರಕಾಶನ | ಬೆಂಗಳೂರು | ೧೯೮೯ |
| ೧೭. | ಲಲಿತಾ ಧೇಮಶೆಟ್ಟಿ | ಮಾತಂಗಿ ಇತರರ ಕಥೆಗಳು | ಮಮತಾ ಪ್ರಕಾಶನ | ಕೊಪ್ಪಳ | ೧೯೮೬ |
| | | ವೈದೇವಿ | ಮಮತಾ ಪ್ರಕಾಶನ | ಕೊಪ್ಪಳ | ೧೯೯೧ |
| ೧೮. | ಮಚ್ಛೇಂದ್ರ ಅಣಕಲ್ | ಲಾಟರಿ | ಬಸವ ಪ್ರಕಾಶನ | ಗುಲ್ಬರ್ಗಾ | ೨೦೦೯ |
| ೧೯. | ಮಲ್ಲಪ್ಪ ಜಿ.ಎನ್. | ಪ್ರಪಾತ | ಬಸವ ಪ್ರಕಾಶನ | ಗುಲ್ಬರ್ಗಾ | ೨೦೧೦ |
| ೨೦. | ಮಲ್ಲಿಕಾರ್ಜುನ ಹಿರೇಮಠ | ಅಮೀನಪುರದ ಸಂತೆ | ಚೈತನ್ಯ ಪ್ರಕಾಶನ | ಹುನಗುಂದ | ೧೯೯೩ |
| ೨೧. | ನಿಂಗಣ್ಣ ಎಸ್. ಪಾಟೀಲ್ | ಬರಿದಾದ ಮಡಿಲು | ಶ್ರೀಸಿದ್ಧಲಿಂಗೇಶ್ವರ ಪ್ರಕಾಶನ | ಗುಲ್ಬರ್ಗಾ | ೨೦೧೦ |

| | | | | | |
|---|---|---|---|---|---|
| ೨೨. | ಪಂಚಾಕ್ಷರಿ ಹಿರೇಮಠ | ಎನ್ನಲೋಕ ಮತ್ತು ಇತರ ಕಥೆಗಳು | ಬಸವ ಪ್ರಕಾಶನ | ಗುಲ್ಬರ್ಗಾ | ೨೦೧೦ |
| | | ಕ್ಷಿತಿಜ ಮತ್ತು ಇತರ ಕಥೆಗಳು (ಅನು) | ಸ್ವಾತಿ ಪ್ರಕಾಶನ | ಬೆಂಗಳೂರು | ೧೯೯೯ |
| | | ಕೃಷ್ಣ ಚಂದರ ಕಥೆಗಳು | ನವಕರ್ನಾಟಕ ಪ್ರಕಾಶನ | ಬೆಂಗಳೂರು | ೨೦೦೧ |
| ೨೩. | ಪ್ರಭು ಖಾನ್‌ಪುರೆ | ಒಡಲ ಕಿಡಿ ವುರಿಯಾಗಿ | ಸಿ.ವಿ.ಜಿ. ಪಬ್ಲಿಕೇಷನ್ಸ್ | ಬೆಂಗಳೂರು | ೨೦೦೨ |
| ೨೪. | ಪ್ರಮಿಳಾ ಜಾನಪ್ಪ ಗೌಡರ | ಮೊಗ್ಗು ಅರಳಿತು | ಪ್ರಭು ಪ್ರಕಾಶನ | ಗುಲ್ಬರ್ಗಾ | ೧೯೯೩ |
| ೨೫. | ಪಾಟೀಲ್‌ಎನ್.ಎಸ್ | ಸಾರ್ಥಕತೆ ಅರಸುತ್ತ | ಬಸವ ಪ್ರಕಾಶನ | ಗುಲ್ಬರ್ಗಾ | ೨೦೧೨ |
| ೨೬. | ರಾಜಶೇಖರ ನಿರಮಾನ್ವಿ | ಹಂಗಿನ ಮನೆಯ ಹೊರಗೆ | ಲೋಹಿಯಾ ಪ್ರಕಾಶನ | ಬಳ್ಳಾರಿ | ೧೯೯೮ |
| | | ಕರ್ಪೂರದ ಕಾಯದಲ್ಲಿ | ಲೋಹಿಯಾ ಪ್ರಕಾಶನ | ಬಳ್ಳಾರಿ | ೧೯೯೦ |
| ೨೭. | ರಾಜಶೇಖರ ಹತಗುಂದಿ | ಕಾಳಬೆಳದಿಂಗಳ ಸಿರಿ | ಲೋಹಿಯಾ ಪ್ರಕಾಶನ | ಬಳ್ಳಾರಿ | ೧೯೯೯ |
| ೨೮. | ರಾಜಶೇಖರ ಹಳೆಮನೆ | ಹನಿತುಂಬಿದ ಮೋಡಗಳು | ಸಾಗರ್ ಪ್ರಕಾಶನ | ಬೆಂಗಳೂರು | ೨೦೦೩ |
| ೨೯. | ಸಾಗರ ಕೃಷ್ಣಮೂರ್ತಿ | ಆದರ್ಶ | ರಂಗಪೇಟೆ ಕನ್ನಡ ಸಾಹಿತ್ಯ ಪರಿಷತ್ತು | ರಾಯಚೂರು | |
| ೩೦. | ಸರಿತಾ ಕುಸುಮಾಕರ | ಕಾಶಿಯಲ್ಲಿ ಕಂಡದ್ದೇನು<br>ಮಿಡಿದಾಗ ಮಿಡುಕು | ಸಂಜೀವಿನಿ ಪ್ರಕಾಶನ<br>ಹಂಸಧ್ವನಿ ಪ್ರಕಾಶನ | ಗುಲ್ಬರ್ಗಾ<br>ಬೆಂಗಳೂರು | ೧೯೮೦<br>೧೯೯೭ |
| ೩೧. | ಸಂಧ್ಯಾ ಹೊನಗುಂಟಿಕರ್ | ಕಡಲ ಒಡಲು ಬಗೆದಷ್ಟು | ಶ್ರೀಸಿದ್ಧಲಿಂಗೇಶ್ವರ | ಗುಲ್ಬರ್ಗಾ | ೨೦೦೮ |
| | | ಹಾರಲಾಗದ ನೊಣ | ಕನ್ನಡ ನಾಡು ಪ್ರಕಾಶನ | ಗುಲ್ಬರ್ಗಾ | ೨೦೧೨ |
| ೩೨. | ಸಿದ್ಧಯ್ಯ ಪುರಾಣಿಕ | ತುಷಾರ ಹಾರ | ಶ್ರೀಗಿರಿಪ್ರಕಾಶನ | ಬೆಂಗಳೂರು | ೧೯೮೭ |
| ೩೩. | ಸಿದ್ಧರಾಮ ಹೊನ್ಕಲ್ | ಬಯಲ ಬಿತ್ತನೆ | ಜಾಗೃತ ಪ್ರಕಾಶನ | ಶಹಾಪುರ ಕಲಬುರ್ಗಿ | ೧೯೯೮ |
| ೩೪. | ಸುಬ್ಬಣ್ಣ ಅಂಬೆಸಂಗೆ | ಕಾಡಿನಲ್ಲಿ ಹಿಡಿದ ಗ್ರಹಣ | ಬಸವ ಪ್ರಕಾಶನ | ಗುಲ್ಬರ್ಗಾ | ೨೦೦೯ |
| ೩೫. | ಸೂಗಯ್ಯ ಹಿರೇಮಠ | ಅಂತರ | ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ | ಬಿದರ್ | ೧೯೯೩ |

| | | | | | |
|---|---|---|---|---|---|
| | | ಹುಳಗಳು | ಪ್ರಗತಿ ಪ್ರಕಾಶನ | ಕಲ್ಬುರ್ಗಿ | ೧೯೯೩ |
| | | ಕಂಗಳ ಮುಂದಣ ಕತ್ತಲೆ | ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ | ಗುಲ್ಬರ್ಗಾ | ೨೦೧೨ |
| | | ನೀನ್ಯಾಕೊ ನಿನ್ನ ಹಂಗ್ಯಾಕೋ | ಕನ್ನಡ ನಾಡು ಪ್ರಕಾಶನ | ಗುಲ್ಬರ್ಗಾ | ೨೦೧೨ |
| | | ಅಂತರಂಗದ ಗುಡಿಯ ಒಳಗೆ | ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ | ಗುಲ್ಬರ್ಗಾ | ೨೦೦೭ |
| ೩೬. | ಶಾಂತರಸ | ಶಾಂತರಸರ ಸಮಗ್ರ ಕಥೆಗಳು | ಪ್ರಿಯದರ್ಶಿನಿ ಪ್ರಕಾಶನ | ಬೆಂಗಳೂರು | ೧೯೯೭ |
| ೩೭. | ಶಿವಕುಮಾರ್ ನಾಗವಾರ | ಹಣದಿ | ಲೋಹಿಯಾ ಪ್ರಕಾಶನ | ಬಳ್ಳಾರಿ | ೨೦೦೦ |
| ೩೮. | ಶಿವಪ್ರಸಾದ್ ಹಾದಿಮನಿ | ಹೆಜ್ಜೆ | ಶಿವಶಕ್ತಿ ಪ್ರಕಾಶನ | ಕೊಪ್ಪಳ | ೨೦೦೦ |
| ೩೯. | ಶಿವರಾಜ ಪಾಟೀಲ | ಶಿವರಾಜ ಪಾಟೀಲರ | ಶ್ರೀಸಿದ್ಧಲಿಂಗೇಶ್ವರ ಪ್ರಕಾಶನ | ಗುಲ್ಬರ್ಗಾ | ೨೦೦೯ |
| ೪೦. | ವಿಠ್ಠಪ್ಪ ಗೋರಂಟಿ | ಸೆರೆ | ಗೋರಂಟ್ಲಿ ಪ್ರಕಾಶನ | ಕೊಪ್ಪಳ | ೨೦೦೦ |

◆◆◆

## ೩. ಪರಾಮರ್ಶನ ಗ್ರಂಥಗಳು


೧. ಅಮರೇಶ ನುಗಡೋಣಿ: (ಸಂ), ಕನ್ನಡ ಸಂಶೋಧನೆಯ ವೈಧಾನಿಕತೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೨. ಅಮರೇಶ ನುಗಡೋಣಿ: ಹೈದರಾಬಾದ್ ಕರ್ನಾಟಕದ ಹಾಡು-ಹಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೩. ಅಮೂರ ಜಿ.ಎಸ್: ಕನ್ನಡ ಕಥನ ಸಾಹಿತ್ಯ ಕಾದಂಬರಿ, ಶ್ರೀಹರಿ ಪ್ರಕಾಶನ, ಧಾರವಾಡ, ೧೯೯೪

೪. ಅಮೂರ ಜಿ.ಎಸ್: ಕನ್ನಡ ಕಥನ ಸಾಹಿತ್ಯ ಸಣ್ಣ ಕತೆ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು. ೨೦೧೨

೫. ಆಶಾದೇವಿ ಎಂ.ಎಸ್: ಸ್ತ್ರೀ ಮತವನುತ್ತರಿಸಲಾಗದೆ?, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೦೬

೬. ಇಂದಿರಾ ಜೈಪ್ರಕಾಶ್: ಸ್ತ್ರೀ ವಾದಿ ಮನೋವಿಜ್ಞಾನ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಉಷಾ ಎಂ: ಮಹಿಳೆ ಮತ್ತು ಜಾತಿ, ಒಂದು ಸೈದ್ಧಾಂತಿಕ ಗ್ರಹಿಕೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೫

೮. ಉಷಾ ಎಂ: ಆಧುನಿಕಾ ಮಹಿಳಾ ಸಾಹಿತ್ಯ ಇನ್ನಷ್ಟು ಪುಟಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೭

೯. ಕರಿಗೌಡ ಬೀಚನಹಳ್ಳಿ: ಶತಮಾನದ ಸಣ್ಣಕತೆಗಳ ಸಮೀಕ್ಷೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೩

೧೦. ಕರಿಗೌಡ ಬೀಚನಹಳ್ಳಿ: ಕನ್ನಡ ನವ್ಯಕಥೆಗಳ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೩

೧೧. ಕವಿತಾ ರೈ ಬಿ.ಆರ್: ಮಹಿಳೆ ಅಸ್ತಿತ್ವದ ಸಂಕಥನ ಒಂದು ಪರಿಕಲ್ಪನಾತ್ಮಕ ಅಧ್ಯಯನ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫

೧೨. ಕೀರ್ತಿನಾಥ ಕುರ್ತುಕೋಟಿ: ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೩

೧೩. ಕೋದಂಡರಾಮ ಎಸ್.ಕೆ: ಕನ್ನಡ ಕಥಾ ಸಾಹಿತ್ಯ ಲೋಕದಲ್ಲಿ ಸಾಂಸ್ಕೃತಿಕ ಸಂಘರ್ಷ, ೧೯೯೬

೧೪. ಗವಿಸಿದ್ದಪ್ಪ ಪಾಟೀಲ: ಸಾಹಿತ್ಯ ಸಿರಿ, ಸಿದ್ಧಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ, ೨೦೦೧

೧೫. ಗವಿಸಿದ್ದಪ್ಪ ಪಾಟೀಲ: ಕಲ್ಯಾಣ ಕರ್ನಾಟಕ, ಸಿದ್ಧಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ, ೨೦೦೨

೧೬. ಗಾಯತ್ರಿ ಎನ್: ಗೀತನಾಗಭೂಷಣ, ನವಕರ್ನಾಟಕ ಸಾಹಿತ್ಯ ಸಂಪದ, ೨೦೦೯

೧೭. ಗಾಯತ್ರಿ ಎನ್: ಮಹಿಳಾ ಸಂಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು, ೨೦೦೩

೧೮. ಗಿರಡ್ಡಿ ಗೋವಿಂದರಾಜ: ಕಾದಂಬರಿ ವಸ್ತು ಮತ್ತು ತಂತ್ರ ಸ್ನೆಹ ಪ್ರಕಾಶನ, ಬೆಂಗಳೂರು, ೧೯೮೭

೧೯. ಗಿರಿಜಾಶಾಸ್ತ್ರಿ: ಆಧುನಿಕ ಕನ್ನಡ ಸಣ್ಣಕಥೆಗಳು: ಒಂದು ಸ್ತ್ರೀವಾದಿ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦. ಜಂಬಣ್ಣ ಅಮರಚಿಂತ ಮತ್ತು ಪ್ರಭುದೇವ ಹಾದಿಮನಿ:(ಸಂ) ನವರಂಗ ರಾಯಚೂರು ಜಿಲ್ಲಾ ೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು, ೧೯೯೭

೨೧. ದಸ್ತಗೀರ್ ಸಾಬ್‌ದಿನ್ನಿ:(ಸಂ) ಜಂಬಣ್ಣ ಅಮರು ಚಿಂತಕ ಮತ್ತು ರಾಜಶೇಖರ ನೀರಮಾನ್ವಿಯವರ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೮

೨೨. ನಾಗಭೂಷಣ ಸ್ವಾಮಿ ಓ.ಎಲ್: ವಿಮರ್ಶೆಯ ಪರಿಭಾಷೆ, ಅಭಿನವ ಪ್ರಕಾಶನ, ಬೆಂಗಳೂರು

೨೩. ನಾಗರಾಜ ಡಿ.ಆರ್: ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ಸಾಗರ, ೧೯೯೬

೨೪. ನೇಮಿಚಂದ್ರ: ಮಹಿಳಾ ಅಧ್ಯಯನ, ಅಂಕಿತ ಪುಸ್ತಕ ಬಸವನಗುಡಿ, ಬೆಂಗಳೂರು, ೨೦೦೧

೨೫. ಪುಟ್ಟಯ್ಯ ಬಿ.ಎಮ್: ಸಂಶೋಧನೆ ತಾತ್ವಿಕ ಆಯಾಮಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೨೬. ಪೆರ್ಲ್ ಮಾ.ಭ: ಭಾರತೀಯ ವಿವಾಹ ಸಂಸ್ಕಾರ, ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು, ೨೦೦೦

೨೭. ಪ್ರಭಾವತಿ ಎಸ್.ಎಲ್: ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ನೆಲೆಗಳು, ಅಂಕಿತ ಪ್ರಕಾಶನ, ಬೆಂಗಳೂರು.

೨೮. ಬರಗೂರ ರಾಮಚಂದ್ರಪ್ಪ: (ಸಂ) ಕಥನ ಕಲೆಯ ನೆಲೆಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೯೯೨

೨೯. ಬಸವರಾರಜ ಸಬರದ: ಬೀದರ ಜಿಲ್ಲಾ ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೨

೩೦. ಬಸವರಾಜ ಸಬರದ: (ಪ್ರಸಂ) ಬೆಳ್ಳಿ ಬೆಳಕು ಮಾಲೆ, ಜಿಲ್ಲಾದರ್ಶನ ಸಂಪುಟಗಳು,

ಭಾಸ್ಕರ ಟಿ.ಎಂ. ಮತ್ತು ರಾಜಶೇಖರ ಹತಗುಂದಿ:(ಸಂ) ಗುಲ್ಬರ್ಗಾ ಜಿಲ್ಲಾ ದರ್ಶನ,

ಸೋಮನಾಥ ಯಾಳವಾರ ಮತ್ತು ಪ್ರೇಮಶಿರ್ಸೆ:(ಸಂ) ಬೀದರ ಜಿಲ್ಲಾ ದರ್ಶನ,

ಮೃತ್ಯುಂಜಯ ಹೊರಕೇರಿ ಮತ್ತು ಬಸವಲಿಂಗ ಸೊಪ್ಪಿಮಠ:(ಸಂ) ರಾಯಚೂರು ಜಿಲ್ಲಾ ದರ್ಶನ.

ಅಲ್ಲಮಪ್ರಭು ಬೆಟ್ಟದೂರು ಮತ್ತು ಎಚ್.ಎಸ್. ಪಾಟೀಲ:(ಸಂ) ಕೊಪ್ಪಳಾ ಜಿಲ್ಲಾ ದರ್ಶನ

ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ

೩೧. ಬಾಚಂದ್ರ ಜಯಶೆಟ್ಟಿ: ಸಮ್ಮೇಳನಾಧ್ಯಕ್ಷರ ಭಾಷಣ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಬೀದರ, ೧೯೯೮

೩೨. ಬಿದರಿ ಚಂದ್ರಕಲಾ: ಮಹಿಳಾ ಬದುಕು, ತನುಮನ ಪ್ರಕಾಶನ, ಮೈಸೂರು, ೨೦೦೯

೩೩. ಭೈರಪ್ಪ ಎಸ್.ಎಲ್: ಕಥೆ ಮತ್ತು ಕಥಾ ವಸ್ತು, ಸಾಹಿತ್ಯ ಭಂಡಾರ, ಬೆಂಗಳೂರು, ೧೯೭೮

೩೪. ಮನುಚಕ್ರವರ್ತಿ ಎನ್:(ಸಂ) ಭಾರತೀಯ ಸ್ತ್ರೀವಾದ, ಅಕ್ಷರ ಪ್ರಕಾಶನ, ಹೆಗ್ಗೊಡು, ಸಾಗರ, ೧೯೯೩

೩೫. ಮಲ್ಲಿಕಾ ಘಂಟಿ: ಕನ್ನಡದಲ್ಲಿ ಮಹಿಳಾ ಕಥಾ ಸಾಹಿತ್ಯ, ಯುವಲೋಕ ಪ್ರಕಾಶನ, ಧಾರವಾಡ, ೧೯೯೪

೩೬. ಮಹಾಬಲೇಶ್ವರ ಬಿ.ಸಿ.: ಹೈದ್ರಾಬಾದ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಲುವಳಿ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೧೯೯೪

೩೭. ಮೀರಾ ಎಲ್.ಜಿ: ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪

೩೮. ಮುಕ್ತಾಯಕ್ಕ ಎಚ್.ಎಸ್: ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೭

೩೯. ಮಂಗಳ ಪ್ರೀಯದರ್ಶಿನಿ ಡಿ.: ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೭

೪೦. ಮಂಗಳಾ ಚಿ.ನ.: ಎಚ್ಚೆತ್ತ ಹಾದಿಯಲ್ಲಿ ಮಹಿಳೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೧

೪೧. ರಹಮತ್ ತರಿಕೇರೆ: ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೮

೪೨. ರಹಮತ್ ತರೀಕೇರೆ: ಹೊಸ ತಲೆಮಾರಿನ ತಲ್ಲಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೪೩. ಲಕ್ಕಪ್ಪ ಗೌಡ ಎಚ್.ಜೆ.: ಕಥಾವಲೋಕನ, ಶೈನಿ ಪ್ರಕಾಶನ, ಬೆಂಗಳೂರು, ೧೯೭೮

೪೪. ವಿಠ್ಠಲರಾವ್ ಗಾಯಕ್ವಾಡ್:(ಅನು) ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು, ಮೂಲ: ಅಶ್ವಿನಿ ಧೋಂಗಡೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೪೫. ವಿವಿಧ ಲೇಖಕರು: ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೬

೪೬. ವಿವಿಧಲೇಖಕರು, ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೬

೪೭. ಶಕುಂತಲಾ ದುರ್ಗಿ: ಆಧುನಿಕಾ ಕನ್ನಡದಲ್ಲಿ ಮಹಿಳಾ ಸಾಹಿತ್ಯ, ಉಜ್ವಲ ಪ್ರಕಾಶನ, ಗುಲ್ಬರ್ಗಾ, ೧೯೯೯

೪೮. ಶಾಮರಾಯ ತ.ಸು: ಕನ್ನಡ ಸಾಹಿತ್ಯ ಚರಿತ್ರೆ, ತ.ಪಿ.ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೭೨

೪೯. ಶಿವಾನಂದ ಎಸ್.ವಿರಕ್ತಮಠ: ಮಹಿಳೆ ಮತ್ತು ಧರ್ಮ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೦

೫೦. ಶ್ರೀಮತಿ ಎಚ್.ಎಸ್: ಮಹಿಳಾ ಅಧ್ಯಯನ, ಸಂ-೪, ಸಂಚಿಕೆ-೧, ಪ್ರಕ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨

೫೧. ಶ್ರೀಮತಿ ಎಚ್.ಎಸ್:(ಅನು) ಸಿಮೋನ್‌ದ ಬೋವಾ ದ ಸೆಂಕೆಂಡ್ ಸೆಕ್ಸ್, ಅಧ್ಯಯನ ಮಂಡಲ, ಬೆಂಗಳೂರು, ೨೦೦೭

೫೨. ಶ್ರೀಮತಿ ಎಚ್‌ಎಸ್: ಸ್ತ್ರೀವಾದ ತಾತ್ವಿಕತೆ, ಪ್ರಗತಿ ಗ್ರಾಫಿಕ್ಸ್ ಬೆಂಗಳೂರು. ೨೦೧೨

೫೩. ಶ್ರೀಮತಿ ಎಚ್.ಎಸ್: ಸ್ತ್ರೀವಾದ ಆನ್ವಯಿಕತೆ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು. ೨೦೧೨

೫೪. ಶೇಷಗಿರಿರಾವ್ ಎಲ್.ಎಸ್: ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೮

೫೫. ಶೈಲಜ ಹಿರೇಮಠ: ಸ್ತ್ರೀ ಕಥನ, ಭುವನ ಪ್ರಕಾಶನ. ಹೊಸೇಟೆ. ೨೦೦೩

೫೬. ಸರಸ್ವತಿ ಚಿಮ್ಮಲಗಿ: (ಸಂ) ಗೀತಾನಾಗಭೂಷಣ, ಕಲಬುರ್ಗಿಯ ಸ್ಪಂಧನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೪

೫೭. ಸಂಗಮೇಶ ಸವದತ್ತಿ ಮಠ: ಕನ್ನಡ ಭಾಷಾ ವ್ಯಾಸಾಂಗ, ರೂಪರಶ್ಮಿ ಪ್ರಕಾಶನ, ಗುಲ್ಬರ್ಗಾ, ೧೯೭೯

೫೮. ಹನುಮಂತಯ್ಯ ಎಲ್: ದಲಿತಲೋಕದ ಒಳಗೆ, ಕರ್ನಾಟಕ ದಲಿತ ಪ್ರಕಾಶ,ನ ಬೆಂಗಳೂರು, ೧೯೯೦

೫೯. ಹಾಲತಿ ಸೋಮಶೇಖರ: ಸ್ತ್ರೀಪರ, ವಿಸ್ಮಯ ಪ್ರಕಾಶನ, ಮೈಸೂರು ೨೦೦೭



